K. V. Subbaraya ...


ಕಸ್ತೂರಿ

ಪ್ರಕಟನೆ :
ಪ್ರತಿ ತಿಂಗಳ ೧ನೇ ದಿನಾಂಕ

ಸಂಪಾದಕರು :
ರಂಗನಾಥ ದಿವಾಕರ

ಸಹಸಂಪಾದಕರು:
ಪಿ. ವಿ. ಆಚಾರ್ಯ

ಪ್ರಕಾಶಕರು :
ೋಕ ಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ

ಕಚೇರಿ :
ಸ್ತೂರಿ ಕಾರ್ಯಾಲಯ, ಹುಬ್ಬಳ್ಳಿ

ಕಲೆ :
ಟಿ. ಕೆ. ರಾವ್

ಉತ್ಪಾದನೆ :
ವಿ. ವಾಯ್. ಜತಾರ

ಮುದ್ರಣ :
ಂಯುಕ್ತ ಕರ್ನಾಟಕ ಪ್ರೆಸ್
ಹುಬ್ಬಳ್ಳಿ

ಮುಖಚಿತ್ರ:
ಶ್ರೀ. ರಾಜ ಪುಣೆ

ಚಂದಾ ದರ :
(ಅಂಚೆ ಸೇರಿ) ರೂ. ೨೫-೦೦
,, ರೂ. ೧೮-೦೦
,, ರೂ. ೧೦-೦೦
,, ರೂ. ೫-೫೦

uri, March 1967


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗೂ ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖನಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ ಲೇಖಗಳ ಸಂಗಡವೇ ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. "ಇದುವೆ ಜೀವ" ಮೊದಲಾದ ಚುಟುಕುಗಳನ್ನು ತಿರುಗಿ ಕಳಿಸಲು ಅಥವಾ ಆ ಬಗ್ಗೆ ಪತ್ರವ್ಯವಹಾರ ಮಾಡಲು ಸಾಧ್ಯವಿಲ್ಲ. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ನಕಲಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು. ಲೇಖಗಳು ಅಕಸ್ಮಾತ್ತಾಗಿ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖ ಪ್ರಕಟವಾದರೆ, "ಕಸ್ತೂರಿ"ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ, ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

---

## ಚಂದಾದಾರರಿಗೆ ಸೂಚನೆ

ಪ್ರತಿ ತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವದು. ಅದು ಚಂದಾದಾರರಿಗೆ ಆಯಾ ತಿಂಗಳ ೧ನೇ ದಿನಾಂಕದೊಳಗೆ ತಲುಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಛೇರಿಯಲ್ಲಿ ಮೊದಲು ವಿಚಾರಿಸಿ ಕಛೇರಿಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ ತಮ್ಮ ಚಂದಾ ಸಂಖ್ಯೆ [illegible]

# ಈ ಸಂಚಿಕೆಯಲ್ಲಿ



ಪುಸ್ತಕ ಸಂಗ್ರಹ




ಜನವರಿ ತಿಂಗಳ 'ಕಸ್ತೂರಿ' ಯಲ್ಲಿ ಪ್ರಕಟವಾದ ಶ್ರೀ ಎಸ್. ಕೆ. ಪಾಟೀಲರ ಬಗ್ಗೆ ಲೇಖ ಸೊಗಸಾಗಿದೆ. ಆದರೆ ಮುಂಬಯಿ ಕನ್ನಡಿಗರಿಗೆ ಶ್ರೀ ಪಾಟೀಲರು ಮಾಡಿದ ಉಪಕಾರವನ್ನೂ ಮರೆಯಬಾರದು. ಕನ್ನಡಿಗರಿಗೆ, ಅದರಲ್ಲೂ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಿಂದ ಬಂದ ಕನ್ನಡಿಗರಿಗೆ ೧೯೩೦ ಮತ್ತು ೧೯೪೦ನೇ ದಶಕಗಳಲ್ಲಿ ವ್ಯಾಪಾರ ನಡೆಸಲು, ನೌಕರಿ, ವಸತಿ ಸೌಕರ್ಯಗಳನ್ನು ದೊರಕಿಸಿಕೊಳ್ಳಲು ಪಾಟೀಲರು ತುಂಬಾ ಸಹಾಯ ಮಾಡಿದ್ದಾರೆ. ಕನ್ನಡಿಗರ ಸಾಂಸ್ಕೃತಿಕ ಹಾಗೂ ಸಾಮಾಜಿಕ ಚಟುವಟಿಕೆಗಳಿಗೂ ಅವರು ಪ್ರೋತ್ಸಾಹ ನೀಡಿದ್ದಾರೆ. ಪ್ರತಿಯಾಗಿ, ಕನ್ನಡಿಗರೂ ಅವರ ಕಾಂಗ್ರೆಸ್ ಕೆಲಸ, ಹಿಂದೂ-ಮುಸ್ಲಿಂ ಐಕ್ಯ ಮುಂತಾದ ಚಟುವಟಿಕೆಗಳಿಗೆ ಬೆಂಬಲ ನೀಡಿದ್ದಾರೆ. ಮುಂಬಯಿಯು 'ಕಾಸ್ಮೋಪೊಲಿಟನ್' ನಗರವಾಗಿ ಉಳಿಯುವಂತೆ ಪಾಟೀಲರು ಮಾಡಿದ ಕೆಲಸ ಕಡಿಮೆಯಲ್ಲ. ಮುಂಬಯಿಯ ಮೇಲೆ ಪಾಟೀಲರ ಹಿಡಿತ ಸಡಿಲತೊಡಗಿದಾಗ ಮರಾಠಿಗರು ಪರಭಾಷೀಯರನ್ನು ಮಲಸೋದರರಂತೆ ಕಾಣತೊಡಗಿದುದರಲ್ಲಿ ಆಶ್ಚರ್ಯವಿಲ್ಲ.

ಮೈಸೂರು —ವೈ. ಬಿ. ರಾವ್

ನಿಮ್ಮ ಮಾಸಪತ್ರಿಕೆಯಲ್ಲಿಯ "ನೀರು ಕುಡಿದು ಆರೋಗ್ಯವಂತರಾಗಿರಿ" ಲೇಖನ ನೋಡಿದೆ. ಒಂದು ದಿನಕ್ಕೆ ೬ ಗ್ಲಾಸು ನೀರು ಬೇಕೆಂಬುದು ಹೇಳಿದ್ದು "ಮೋಗಂ" ಹೇಳಿದಂತೆ. ಆದರೆ ಓದುಗರಿಗೆ ಆರೋಗ್ಯದ ಸಂಬಂಧದ ಲೇಖನಗಳಲ್ಲಿ ಖಚಿತತೆ ಅವಶ್ಯವಾಗಿ ಇರಬೇಕು.

ಗಾಂಧೀಜಿಯವರ Key to Health ಎಂಬ ಗ್ರಂಥದಲ್ಲಿ 5 ಪೌಂಡು ನೀರು ಬೇಕು ಎಂದು ಹೇಳಿದೆ (5lb = 2.30 ಲಿಟರ = 2.30 K.G.)

ದ. ಕೃ. ಭಾರದ್ವಾಜ ವೈದ್ಯರ "ಆಹಾರ ವಿಜ್ಞಾನ" ಎಂಬ ಗ್ರಂಥದಲ್ಲಿ 2.80 ಲಿಟರ ಬೇಕೆಂದು ಹೇಳಿದೆ. ಇದರಿಂದ ಪ್ರೌಢರಿಗೆ ಸುಮಾರು 2·5 ಲಿಟರ ನೀರು ಬೇಕೆಂದು ಸಿದ್ಧವಾದಂತಾಯಿತು.

ವಿಜಾಪುರ —ವಿ. ಎಚ್. ಕಟ್ಟಿ

'ಕಸ್ತೂರಿ'ಯ ಕಳೆದ ಜನವರಿ ಸಂಚಿಕೆ ಸಿಕ್ಕಿತ್ತು. ಶ್ರೀ ಮಾಧವ ನಾ. ಮಹಿಷಿ ಎಂಬವರು ಬರೆದ "ನಾನು ಮುಂಗಳಿಯವರ ಶಿಷ್ಯನಾಗಿದ್ದೆ" ಎಂಬ ಲೇಖನ ನನ್ನ ಮನಸ್ಸಿನ ಮೇಲೆ ತುಂಬ ಪರಿಣಾಮವುಂಟುಮಾಡಿತು. ಸಾಮಾನ್ಯ ಅನುಭವದಲ್ಲಿ ತೀರ ಕ್ಷುಲ್ಲಕವೆಂದು ಕಂಡುಬರುವ ಘಟನೆಗಳ ಹಿಂದಡಗಿದ ಮಾನವೀಯ ಔನ್ನತ್ಯವನ್ನು ಎತ್ತಿ ತೋರಿಸಿರುವುದನ್ನು ನಾನು ಈ ಲೇಖನದಲ್ಲಿ ಕಂಡೆ.

ಆದರೆ ಅದರಲ್ಲಿ ಒಂದು ತಥ್ಯದೋಷ ಉಳಿದುಬಿಟ್ಟಿದೆಯೆನಿಸುತ್ತಿದೆ. ಕನ್ನಡದ ಬಗೆಗೆ ಹೀನಾಯವಾದ ಮಾತುಗಳು ಬಂದಿರುವುದು "ಭಾವುಬಂದಕಿ" ನಾಟಕದಲ್ಲಿಯಲ್ಲ, "ಭಾವಬಂಧನ" ದಲ್ಲಿ. "ಭಾವುಬಂದಕಿ" ಶ್ರೀ ಖಾಡಿಲ್ಕರರ ನಾಟಕವಾದರೆ "ಭಾವಬಂಧನ" ಬರೆದವರು ಇನ್ನೊಬ್ಬ ಹೆಸರಾಂತ ನಾಟಕಕಾರ ಶ್ರೀ ಗಡಕರಿ ಅವರು.

ದುರ್ಗಾಪುರ —ನಾ. ಶ್ರೀ. ಕರ್ಣಿಕ
(ಪ. ಬಂಗಾಲ)

[ಈ ಕೈತಪ್ಪಿಗಾಗಿ ಲೇಖಕರು ವಿಷಾದಿಸುತ್ತಾರೆ. —ಸಂ.]

'ಕಸ್ತೂರಿ'ಯನ್ನು ಬಹುದಿನಗಳಿಂದ ನಾನು ಓದುತ್ತಲಿದ್ದೆ. ಅಂತೆಯೆ ನಿಮ್ಮ ಜನವರಿ ಸಂಚಿಕೆಯಲ್ಲಿಯ 'ಆಕಾಶಬುಟ್ಟಿಯ ಪುರಾಣ' ಎಂಬ ಚೀನದ ಒಂದು ಪ್ರೇಮಕಥೆಯನ್ನು ಓದಿ ತಿಳಿದೆ. ಕಥೆ ನಿಜವಾಗಿಯೂ ಚೆನ್ನಾಗಿದೆ. ಆ ಬಗ್ಗೆ ಲೇಖಕರಾದ ಗೌರೀಶ ಕಾಯ್ಕಿಣಿಯವರಿಗೆ ನನ್ನ ವಂದನೆಗಳು. ಆದರೆ

ಆ ಘಟನೆ ನಿಜವಾಗಿ ಚೀನದಲ್ಲಿ ನಡೆದಿರಬಹುದೇ? ಯಾಕೆಂದರೆ ತಲೆಬರಹವೇ ಪುರಾಣವೆಂದು ಇರುವದು. ನಮ್ಮ ಪುರಾಣದಲ್ಲಿ ಅನೇಕ ಕಟ್ಟು ಕಥೆಗಳು ಇರುವಂತೆ ಇದೂ ಒಂದು ಕಟ್ಟುಕಥೆಯಾಗಿರಬಾರದೇಕೆ?

ಮಾರೂಕೇರಿ — ಎಸ್. ಎಚ್. ನಾಯ್ಕ

[ಆಗಿರಬಾರದೇಕೆ?—ಆಗಿದೆ. —ಸಂ.]

ಜನವರಿ 'ಕಸ್ತೂರಿ'ಯ ಪುಸ್ತಕ ವಿಭಾಗದಲ್ಲಿ ಪ್ರಕಟಿತವಾದ "ಬಂಗಾರದ ಜಿಂಕೆ" ನಿರಂಜನರ ರಂಜನೀಯ ಕೃತಿ. ಒಂದೊಂದು ಪಾತ್ರಗಳ ಗುರಿಯೂ ಒಂದೊಂದು ಪಥದೆಡೆ ಸಾಗಿದೆ. ಕೊನೆಗೆ ಕೃತ್ರಿಮಕ್ಕೆ ನಾಶ, ಪ್ರಮಾಣಿಕತೆಗೆ ಜಯ ಎನ್ನುವುದನ್ನು ಸ್ವಾರಸ್ಯವಾಗಿ ಚಿತ್ರಿಸಿದ್ದಾರೆ. ಆದರೆ ಜಯಶ್ರೀಯ ಬಗ್ಗೆ ಒಂದು ಮಾತು. ಅವಳು ಮುದ್ದು ಮಗಳು, ಚೆಲ್ಲು ಚೆಲ್ಲು, ಆಧುನಿಕ ತರುಣಿ ಸರಿ. ಆದರೆ ಅವಳ ನಡತೆಯ ಬಗ್ಗೆ ಸಂಶಯ ಬರುವ ಘಟನೆ ಒಂದಿದೆ. ಸೋಮನಾಥನ ಮೇಲೆ ಬಯಕೆ, ಶ್ರೀಕಂಠಯ್ಯನೆಡೆ ಒಲವು ಎನ್ನುವಂತಿದೆ. ಅವನೊಡನೆ ಲಲ್ಲೆಗೈದು, ಎತ್ತಿ ನಡೆದು ಮಂಚದಮೇಲೆ ಮಲಗಿಸಿದಾಗ ನಸುನಕ್ಕು, ಆದರೆ ಅವಳ ಮೇಲೆ ಕೈಮಾಡಿದಾಗ ಪ್ರತಿಭಟಿಸಿದ್ದು ಒಗಟೆನಿಸುತ್ತದೆ. ಇಲ್ಲ, ಆಧುನಿಕ ವಿದ್ಯಾವತಿಯರು ಬೆಳಸಿಕೊಳ್ಳುತ್ತಿರುವ ಮನೋವೈಪರೀತ್ಯ ಎನ್ನೋಣವೇ?

ಬೆಂಗಳೂರು —ಬಿ. ಎಸ್. ನರೇಂದ್ರನಾಥ್

[ಹಾಗೆಯೆ ಎನ್ನಬೇಕು. ಆಧುನಿಕ ರೊಮ್ಯಾಂಟಿಕ್ ಯುವತಿ ಯಾವುದೋ ಅಂತರಿಕ ಸೆಳೆತಕ್ಕೊಳಗಾಗಿರುತ್ತಾಳೆ. ತನ್ನ ಕಾಮನೆಯ ನೈಜ ರೂಪವನ್ನು ಅವಳರಿಯಳು. ರೋಮಾನ್ಸು ತನ್ನ ಅನಿವಾರ್ಯ ಪರ್ಯವಸಾನವನ್ನು ತಲಪಿದಾಗ ಅವಳ ಕುಲಸಂಸ್ಕಾರ ಒಮ್ಮೆಲೆ ತನ್ನ ಪ್ರಭಾವ ತೋರಿಸುತ್ತದೆ. ಅವಳು ಭೀತಳಾಗುತ್ತಾಳೆ. ದುರ್ದೈವದಿಂದ ಅಧಿಕಾಂಶ ರೊಮ್ಯಾಂಟಿಕ್ ತರುಣಿಯರು ಜಯಶ್ರೀಯಷ್ಟು ಭಾಗ್ಯಶಾಲಿಗಳಲ್ಲ. ಅವರ ಮೇಲೆ ಕಾಮ ಬಲಾತ್ಕಾರ ಅವರ ಮನೆಯಲ್ಲಿ ನಡೆಯುವುದಿಲ್ಲ. ಹಿನ್ನೆಡೆಯ ಬಾಗಿಲುಗಳೆಲ್ಲ ಮುಚ್ಚಿದ್ದು ಕಂಡು ಅವರು ನಿರುಪಾಯರಾಗಿ ತಮ್ಮ ಸತೀತ್ವ ಹರಣವನ್ನು ಸಹಿಸುತ್ತಾರೆ. —ಸಂ.]

ಫೆಬ್ರುವರಿಯ 'ಕಸ್ತೂರಿ'ಯಲ್ಲಿ ಪ್ರಕಟವಾಗಿರುವ 'ಕಿವಿ ಕಿವುಡಾದರೆ ಮನ ಕುರುಡೇ?' ಎಂಬ ಲೇಖನ ನನಗೆ ಮಹದುಪಕಾರವನ್ನು ಮಾಡಿದೆ. ಕಿವುಡು ತಮ್ಮನ ಭವಿಷ್ಯತ್ತಿನ ಬಗ್ಗೆ ಯೋಚಿಸುತ್ತಿದ್ದ ನನಗೆ ಸ್ಪಷ್ಟ ಮಾರ್ಗದರ್ಶನ ದೊರೆತಿದೆ. ಲೇಖಕಿ ಶ್ರೀಮತಿ ನೀಳಾದೇವಿಯವರಿಗೆ ಹೃತ್ಪೂರ್ವಕ ವಂದನೆಗಳು.

ಮುಂಬಯಿ-೭೬ —ಕೆ.ಸೂ. ಆನಂದರಾವ್

ಫೆಬ್ರುವರಿಯ 'ಕಸ್ತೂರಿ' ಬಹು ಶಿಕ್ಷಣಾತ್ಮಕವಾಗಿದ್ದಿತು. "ನಮ್ಮ ಮನಸ್ಸಿನಂತೆ ನಾವು" ಮತ್ತು "ಕಿವಿ ಕಿವುಡಾದರೆ ಮನ ಕಿವುಡೆ?" ಇವುಗಳಿಂದ ನಮ್ಮ ಜೀವನವನ್ನು ನಾವು ಎಷ್ಟು ಚೆನ್ನಾಗಿ ಸಾರ್ಥಕಗೊಳಿಸಬಹುದು. ಇಲ್ಲ ಸಲ್ಲದ ಯೋಜನೆಗಳಿಂದ ನಿರರ್ಥಕವಾಗಿ ಎಷ್ಟು ವ್ಯಸನಪಡುತ್ತಿದ್ದೇವೆ ಎಂದು ತಿಳಿಯುತ್ತದೆ.

ನಾನು ವರ್ಷಕ್ಕೆ ಮುನ್ನೂರು ದಿವಸಗಳಾದರೂ ಜ್ವರ, ಉಬ್ಬಸಗಳಿಂದ ಅಸ್ವಸ್ಥನಾಗಿರುತ್ತೇನೆ. ಮೊನ್ನೆ ಹೀಗೆಯೇ ಜ್ವರದಿಂದ ನರಳಿ ಗುಣಹೊಂದುತ್ತಿರುವಾಗ 'ನನ್ನ ಜೀವನದ ಪೂರ್ತಿ ಹೀಗೆಯೇ ನರಳಬೇಕಾದರೆ ಏನು ಗತಿ? ನಾನು ಏನು ಮಾಡಿ ತಾನೆ ಏನು ಉಪಯೋಗ?' ಇದೇ ಮುಂತಾಗಿ ಚಿಂತಿಸುತ್ತಿದ್ದೆ. ಮೇಲೆ ಹೇಳಿದ ಎರಡು ಲೇಖನಗಳನ್ನು ಓದಿ, ಬದುಕಿನಲ್ಲಿ ಆಸೆ ಮರುಕಳಿಸಿತು. ಹೀಗೆಯೇ ಇನ್ನೂ ಎಷ್ಟು ವ್ಯಕ್ತಿಗಳಿಗೆ 'ಕಸ್ತೂರಿ'ಯಲ್ಲಿ ಪ್ರಕಟವಾದ ಲೇಖನಗಳು ಆಶಾಕಿರಣಗಳಾಗಿವೆಯೋ, ಆಗುತ್ತವೆಯೋ?

ಬೆಂಗಳೂರು —ಒಬ್ಬ ಅಭಿಮಾನಿ

ಕಸ್ತೂರಿ



ಸಂಚಿಕೆ: ೭ ಕಸ್ತೂರಿ, ಮಾರ್ಚ್ ೧೯೬೭ ವರ್ಷ: ೧೧

# ಅಮರ ಸಂಗಾತಿ

ನಚಿಕೇತ ಹೇಳತೊಡಗಿದ :

ಬರೀ ಜೀವನಕ್ಕೆ ಗೀತವೆಂದರೆ ನೀವು ತಪ್ಪುತ್ತೀರಿ, ಏಕೆಂದರೆ ಆ ಗೀತವನ್ನು ಹಾಡುವಾತ ಜೀವನ ಎಂದಾಗಲಾರ. ಬರೀ ಜೀವನಕ್ಕೆ ಬದುಕಿನ ಹೋರಾಟ ಎಂದರೆ ನೀವು ತಪ್ಪುತ್ತೀರಿ, ಏಕೆಂದರೆ ನಿಮ್ಮ 'ಒಳಗೆ' ಇರುವಾತ ಬದುಕುವ ಪ್ರಯತ್ನವನ್ನು ಮಾಡುವುದಿಲ್ಲ. ಆತ ಕೇವಲ ಶಾಶ್ವತತೆಯ ಸ್ಪಂದನವಾಗಿರುತ್ತಾನೆ. ಇನ್ನು ಜೀವನವನ್ನು ಪ್ರವಾಹ ಎಂದು ಕರೆದರೂ ತಪ್ಪುತ್ತೀರಿ. ಏಕೆಂದರೆ ಆ ಪ್ರವಾಹದ ಕೆಳಗಡೆ ಇರುವ ಅಖಂಡ ಅಸ್ತಿತ್ವದ ಭೂಮಿಯನ್ನು ನೀವು ಪ್ರತ್ಯೇಕಿಸಿದಂತಾಗುವುದು. ಅಸ್ತಿತ್ವದ ಆ ಅಖಂಡ ಭೂಮಿ ಇರದಿದ್ದರೆ ಪ್ರವಾಹ ಹರಿಯುವುದಾದರೂ ಏತರ ಮೇಲೆ?

ಜೀವನವು ಅಸೀಮತೆಯ ಕಡೆಗೆ ಕರೆದೊಯ್ಯುವ ಹಾದಿ ಎಂದರೂ ತಪ್ಪಾಗುವುದು; ಏಕೆಂದರೆ ಈ ಹಾದಿಯ ಉಗಮವೂ ಅಸೀಮತೆಯಲ್ಲಿದೆ ಎಂಬುದನ್ನು ಮರೆಯಬೇಡಿರಿ. ಅಸೀಮತೆಯಿಂದ ಅಸೀಮತೆಯತ್ತ ಹೋಗುವ ಹಾದಿಯೆಂಬುದೇ ಇಲ್ಲ. ಒಂದು ವೇಳೆ ಇದ್ದರೂ ಅದು ಕೇವಲ ಅನಂತತೆಯೇ ಆಗಿದೆ.

ಜೀವನವೆಂದರೆ ಬರೀ ಸ್ಮೃತಿ ಭಂಡಾರ ಎಂದೂ ಅನ್ನಬೇಡಿ. ಹಾಗೆಂದರೆ ಪ್ರಕೃತಿಯ ಉಸುಬಿನ ಬಯಲಿನಲ್ಲಿ ಚಿಪ್ಪುಗಳಂತೆ ಸ್ಮೃತಿಯನ್ನು ಹೆಕ್ಕುವ ಅರಿವನ್ನು ನೀವು ಪ್ರತ್ಯೇಕಿಸಿದಂತಾಗುವುದು.

ಜೀವನದ ಮೇಲೆ ಅಖಂಡ ಪ್ರೇಮದ ಮಳೆಗರೆಯಿರಿ. ಅಂದರೆ ಮಳೆ ಬೀಳುವುದರಿಂದ ಭೂಮಿಯ ಮೇಲೆ ಹುಟ್ಟುವ ಹಸಿರಿನಂತೆ ಅದರ ನಿಜ ಸ್ವರೂಪ ಸಹಜವಾಗಿ ಪ್ರಕಟವಾಗುವುದು.

ನೀವು ವಿದ್ಯುತ್ತನ್ನು ಹಿಡಿದು ಇಡಲಾರಿರಿ, ನೀವು ಜೀವನವನ್ನು ಯಾತಕ್ಕೂ ಬದ್ಧವನ್ನಾಗಿ ಮಾಡಲಾರಿರಿ. ಜೀವನವನ್ನು ಎದುರಾ ಎದುರು ನೋಡುವುದೆಂದರೆ ನೀವು ನಿಮ್ಮನ್ನೇ ನೋಡಿಕೊಂಡಂತೆ. ಆಗ ಕ್ಷಿತಿಜದ ಮೇಲೆ ಶಾಂತ ರೀತಿಯಲ್ಲಿ ಪಸರಿಸುವ ಸಂಧ್ಯಾರಾಗದಂತೆ ನೀವು ಸರ್ವವ್ಯಾಪಿಯಾಗುವಿರಿ. ಜೀವದ ಸಹಜತೆಯಲ್ಲಿ ಪ್ರಕಟವಾಗುವ ಮುಕ್ತ ಪ್ರೇಮಕ್ಕೆ ಮಾತ್ರ ಜೀವನದ ಗಂಗೋತ್ರಿ ಎಲ್ಲಿ ಉಗಮವಾಗುವುದು ಎಂದು ತಿಳಿಯುತ್ತದೆ. ಮೃತ್ಯುವಿನ ಕತ್ತಲು ಆಕಾಶದಲ್ಲಿ ಜೀವನದ ಅಂತ್ಯವಾಗುವುದಿಲ್ಲ, ಆದರೆ ಅದು ಅಲ್ಲಿ

ತನ್ನ ಮೂಲಸ್ಥಾನದತ್ತ ಒಯ್ಯುವ ಬಾಗಿಲನ್ನು ತೆರೆದು ಹೋಗಿರುತ್ತದೆ.

ನಿಮ್ಮ ಹೃದಯದ ಗಹನ ಗರ್ಭದಲ್ಲಿ ಅಡಗಿರುವ ಪ್ರಕಾಶಮಾನ ಆತ್ಮದಿಂದ ಹೊರಡುವ ಸೃಜನಶೀಲ ಪ್ರೇರಣೆಗೇ ಜೀವನವೆನ್ನುತ್ತಾರೆ.

ಯಾವುದೋ ಗೂಢ ಅಜ್ಞಾತವನ್ನು ಶೋಧಿಸುತ್ತ ಈ ಪ್ರೇರಣೆ ಅನಂತ ಕಾಲದಲ್ಲಿ ಓಡುತ್ತಲಿರುತ್ತದೆ.

ಒಂದು ರೂಪಾತೀತ, ನಾಮಾತೀತ ಮತ್ತು ಜ್ವಲಂತ ಶೂನ್ಯದ ಸುಳಿವು ಹಿಡಿಯುತ್ತ ಈ ಪ್ರೇರಣೆ ಅಸಂಖ್ಯ ರೂಪಗಳಲ್ಲಿ, ಹೆಸರುಗಳಲ್ಲಿ ಒಂದು ಮರುಭೂಮಿಯಲ್ಲಿ ಹಾದಿ ತಪ್ಪಿದ ಪಥಿಕನಂತೆ ಅಲೆದಾಡುತ್ತಲಿರುತ್ತದೆ.

ಅದಕ್ಕೆ ತನ್ನ ಉಗಮವನ್ನು ಪತ್ತೆ ಹಚ್ಚಬೇಕಾಗಿರುತ್ತದೆ. ಆ ಶೋಧಕ್ಕಾಗಿ ಅದು ದುಃಖದ ಕಂದರಗಳಲ್ಲಿ ಅಥವಾ ಸುಖದ ಮಹಾಸಾಗರದಲ್ಲಿ ಪ್ರವಾಸ ಮಾಡುತ್ತದೆ.

ಅದು ಸ್ತಬ್ಧವೂ ಶಾಂತವೂ ಆದಾಗಲೇ ಆ ನಿಮಿಷದಲ್ಲೆ ಅದಕ್ಕೆ ತನ್ನ ಉಗಮದ ದರ್ಶನವಾಗುತ್ತದೆ.

ಗಂಭೀರ ಶಾಂತತೆಯಲ್ಲೆ ಅದಕ್ಕೆ ತನ್ನ ಉಗಮದ ದರ್ಶನವಾಗುತ್ತದೆ. ಈ ಗಂಭೀರ ಶಾಂತತೆಯೆಂದರೆ "ನೇತಿ, ನೇತಿ" ಅಲ್ಲ. ಅದಲ್ಲ, ಇದಲ್ಲ ಎಂದು ವಿಶ್ವದ ಪೃಥಕ್ಕರಣ ಮಾಡಿದರೆ ಅದು ಸಿಗುವುದಿಲ್ಲ. ಅಥವಾ ಇಲ್ಲಿ ಅದಿದೆ, ಅಲ್ಲಿ ಇದಿದೆ ಎಂಬ ಗ್ರಹಿಕೆಯಿಂದಲೂ ಅದು ಪ್ರಾಪ್ತವಾಗುವುದಿಲ್ಲ. ಆದರೆ ಆತ್ಮಾರ್ಪಣದಿಂದ, ಸಮರ್ಪಣೆಯಿಂದ ಅದಕ್ಕೆ ಅದರ ಉಗಮಸ್ಥಾನ ಪ್ರಾಪ್ತವಾಗುತ್ತದೆ. ತನ್ನ ಅವ್ಯಾಹತವಾದ, ಮುಗಿಯದ ಪ್ರಯಾಣದಲ್ಲಿ ಅದು ದಣಿಯುತ್ತದೆ ಮತ್ತು ಯಾವಾಗ ಅದಕ್ಕೆ ತಾನು ಲಭ್ಯವಾಗದ ಮೃಗಜಲವನ್ನು ಬೆನ್ನಟ್ಟಿ ಓಡುತ್ತಿದ್ದೇನೆ ಎಂಬ ಅರಿವಾಗುವುದೊ ಆಗಲೇ ಅದರಲ್ಲೆ ಅಡಗಿರುವ ಅಮರ ವಿಶ್ರಾಂತಿಸ್ಥಾನ ಅದಕ್ಕೆ ಹೇಳುತ್ತದೆ, "ಎಲ್ಲೆಡೆಯಲ್ಲಿಯೂ ಇರುವ ಮಹಾನ್ ಆತ್ಮಕೇಂದ್ರ ನೀನೇ ಆಗಿರುವಿ, ಆದರೆ ನಿನ್ನ ಪರಿಘ ಮಾತ್ರ ಎಲ್ಲಿಯೂ ಇಲ್ಲ. ಅಂದಮೇಲೆ ನೀನು ನಿನ್ನನ್ನು ಪರಿಘ ಬದ್ಧ ಎಂದು ತಿಳಿದುಕೊಂಡು ಶೋಧ ಕಾರ್ಯ ಯಾಕೆ ನಡೆಸುತ್ತಿ?"

ಆ ಅಮರ ವಿಶ್ರಾಮದ ಗಂಭೀರ ಧ್ವನಿ ಕೇಳಿ ಬಂದೊಡನೆ ಆ ಪ್ರೇರಣೆ ಸ್ತಬ್ಧವಾಗುತ್ತದೆ ಮತ್ತು ಒಂದು ಕ್ಷುಬ್ಧ ನದಿಯಂತೆ ತನ್ನಲ್ಲಿಯ ವಿಶ್ರಾಮದ ಮಹಾಸಾಗರವನ್ನು ಕೂಡಿಕೊಳ್ಳುತ್ತದೆ.

ಆದರೆ ಅಲ್ಲಿ ಅದರ ಲಯವಾಗುವ ಬದಲು ಅದಕ್ಕೆ ನವ ಜನ್ಮ ಪ್ರಾಪ್ತವಾಗುತ್ತದೆ. ತನ್ನನ್ನೆ ಹುಡುಕುವ ಜೀವನ ಈಗ ತೃಪ್ತವಾಗಿರುತ್ತದೆ.

ಆದರೆ ಈ ತೃಪ್ತಿಯಲ್ಲಿ ರಾಜ್ಯ ಹೂಡುವಿಕೆ ಇರದೆ ಅದರಲ್ಲಿ ಅನಂತ ಗತಿ ಇರುತ್ತದೆ. ಮತ್ತು ಆ ಅನಂತ ಗತಿಯಲ್ಲಿ ಗುಳ್ಳೆಗಳಂತೆ ನಿರ್ಮಾಣವಾಗುವ ಮತ್ತು ಲಯವಾಗುವ ಅನೇಕ ವಿಶ್ವಗಳನ್ನು ಅದು ಬಾಲಕನ ನಿರ್ವ್ಯಾಜ ಭಾವದಿಂದ ನೋಡುತ್ತಿರುತ್ತದೆ.

ಎಲೈ ಜೀವನವೇ, ನಿನ್ನ ನೆನಪಾದೊಡನೆ ನನ್ನ ಭಾವನೆಯ ಝರಿ ಪುಟಿದೆದ್ದಿದೆ.

ನನ್ನ ವಿಚಾರಗಳಿಗೆ ಬಣ್ಣ ಬಂದಿಹೆ.

ನನ್ನ ಶಬ್ದಗಳಿಗೆ ರೆಕ್ಕೆ ಮೂಡಿವೆ.

ನನ್ನ ಕಣ್ಣುಗಳಲ್ಲಿ ಅಶ್ರುಗಳ ಮೂಲ ಬತ್ತಿದೆ.

ಜೀವನವೇ, ನಿನ್ನನ್ನು ಕರೆದೊಡನೆ ನನ್ನ ಭಾವನೆಗಳು ಪ್ರೇಮವಾಗಿಬಿಟ್ಟಿವೆ.

ನನ್ನ ವಿಚಾರಗಳು ಸ್ತಬ್ಧ ನೀಲ ಆಕಾಶವಾಗಿವೆ.

ನನ್ನ ಶಬ್ದಗಳು ಮೌನವಾಗಿವೆ.

ನನ್ನ ಕಂಗಳು ಮುಚ್ಚಿವೆ.

ಜೀವನವೇ, ನಿನ್ನನ್ನು ಕಂಡೊಡನೆ ನೀನೇ ಅವನೆಂದು ನಾನು ಗುರುತಿಸಿದೆ—ಯಾವನು ಭಕ್ತರ ಹೃದಯದಲ್ಲಿ ನರ್ತಿಸಿದನೊ, ಯಾವನು ಅವರನ್ನು ಮುಕ್ತ ಮಾಡಿದನೊ ಅವನೇ ನೀನೆಂದು ಗುರುತಿಸಿದೆ.

ಯಾವನು ಶಾಂತಿಯಲ್ಲಿ ಮಾತಾಡುವನೊ, ನಿರ್ಮಲತೆಯಲ್ಲಿ ನಗುವನೊ, ಯಾವನು ಸಹಜತೆಯಲ್ಲಿ ನರ್ತಿಸುವನೊ ಅವನೇ ನೀನೆಂದು ಗುರುತಿಸಿದೆ.

ನನ್ನ ಜೀವನವೆ, ನೀನು ನನ್ನ ಅಮರ ಸಂಗಾತಿಯಾಗಿರುವೆ. ನನ್ನ ಆತ್ಮದ ಅಮರ ಸ್ಮಿತವಾಗಿರುವ ಜೀವನವೇ, ನಿನಗೆ ಶತಶಃ ಪ್ರಣಾಮಗಳು. *



# ಅವರವರ ನೋಟ

ಭಗವಂತನ ದೃಷ್ಟಿ ವಿಚಿತ್ರವಾಗಿದೆ. [ಅಲ್ಲಿ] ಮೊಲ್ಲೆ ಮಲ್ಲಿಗೆ ಸಂಪಗೆ ಜಾಜಿ ಹೂಗಳು ಮೃದು ಮೃದುವಾಗಿ, ಬಣ್ಣ ಬಣ್ಣವಾಗಿ, ಸುವಾಸನೆಯನ್ನು ಬೀರಿ ಪೂಜಾವಸ್ತುವಾಗುತ್ತವೆ: ತೆಂಗು ಹೊಂಗೆ ಮುಂತಾದ ಹೂಗಳು ಒರಟಾಗಿ, ಕಟುವಾಗಿ, ತಾವಾಗಿ ಉದುರಿ ತಿಪ್ಪೆಯಂತೆ ಬಿದ್ದಿದ್ದರೂ ಕೇಳುವವರಿಲ್ಲದೆ, ದಾರಿಹೋಕರು ಅವನ್ನು ಕಚಪಚನೆ ತುಳಿದುಹಾಕುತ್ತಾರೆ. ಅದರ ಜನ್ಮ ಹಾಗೇ, ಇದರ ಜನ್ಮ ಹೀಗೇ. ಹೂವು ದೇವರ ತಲೆಯ ಮೇಲೆ ಕೂತು ಬಾಡಿ ನಿರ್ಮಾಲ್ಯವಾಗಬೇಕು; ಸಾಂಬ್ರಾಣಿ ಅವನ ಮುಂದೆ ಬೆಂಕಿಗೆ ಬಿದ್ದು ಕುದಿದು ಹೊಗೆಯಾಡಿ ಅದೃಶ್ಯವಾಗಬೇಕು. ಆಗಲೇ ಪ್ರಾಯಶಃ ಅದರ ಜನ್ಮ ಸಾರ್ಥಕ. ಅದನ್ನು ಹೂವಿನಂತೆ ನೋಯಿಸದ ಹಾಗೆ ಮುಡಿದರೆ ಅದರಿಂದ ವಾಸನೆ ಹೊರಟೀತೆ? ಹರಡೀತೆ? ಬೆಂಕಿಗೇ ಹಾಕಬೇಕು; ಅದು ತನ್ನ ಸುವಾಸನೆಯನ್ನು ಕೊಟ್ಟು ಅದೃಶ್ಯವಾಗಬೇಕು. ಈ ಅಗ್ನಿಸಂಸ್ಕಾರ ಅದಕ್ಕೆ ಉಪಕಾರವೋ ಅಪಕಾರವೋ ಸುಖವೋ ದುಃಖವೋ ಹೇಳಬಲ್ಲವರಾರು? ಹೂವು ಸುಂದರವಾಗಿದ್ದು, ರಸರಸವಾಗಿ ಮಕರಂದದಿಂದೊಡಗೂಡಿ, ಮುಟ್ಟಿದರೆ, ಮುಡಿದರೆ, ನಲುಗಿ ಬಾಡಿ ನಿರ್ಮಾಲ್ಯವಾಗುತ್ತದೆ — ಇದು ಅದರಲ್ಲಿ ಒಂದು ಗುಣವೆ? ಸಾಂಬ್ರಾಣಿ ಶುಷ್ಕವಾಗಿ ಕಟುಕಲಾಗಿದ್ದು ಬೆಂಕಿಯ ಮೇಲೆ ಹಾಕಿ ಸುಟ್ಟಹೊರತು ವಾಸನೆ ತೋರದು. ಇದು ಅದರಲ್ಲಿ ಒಂದು ದೋಷವೆ?

—ಎ. ಆರ್. ಕೃಷ್ಣಶಾಸ್ತ್ರಿ

"ಶ್ರೀಪತಿಯ ಕಥೆಗಳು" ಮುನ್ನುಡಿಯಲ್ಲಿ

ನನಗೆ ನನ್ನ ಜೀವನದಲ್ಲಿ ಗಾಂಧೀಜಿ, ಟಾಗೋರ್, ಕಾಶ್ಮೀರೀ ಭಾಷೆಯ ಮಹಾಕವಿ ಗುಲಾಂ ಅಹಮದ್ ಮಹಜೂರ್, ಬಂಗಾಲಿ ಸಾಹಿತಿ ಕ್ಷಿತಿಮೋಹನ ಸೇನ ಮೊದಲಾದ ಕೆಲ ಅಂತಾರಾಷ್ಟ್ರೀಯ ಖ್ಯಾತಿಯ ಮಹಾಪುರುಷರನ್ನು ನೋಡುವ ಸೌಭಾಗ್ಯ ಲಭಿಸಿದೆ. ಈ ನಿಕಟ ಸಂಪರ್ಕದಿಂದ ನನಗೆ ಒಂದು ಮಾತು ಖಚಿತವಾಗಿದೆ. ಇವರ ಜ್ಞಾನದ ಆಳ ಇವರ ಪುಸ್ತಕಗಳನ್ನೋದುವುದರಿಂದಷ್ಟೆ ನಮಗೆ ಅರಿವಾಗುವುದಿಲ್ಲ. ಅವರೊಡನೆ ಮಾತುಕತೆಯಾಡಬೇಕು; ಅವರ ಮಾತುಗಳಲ್ಲಿ ಹೊಮ್ಮಿ ಹರಿಯುವ ಹಾಸ್ಯಪರಿಹಾಸ್ಯಗಳನ್ನು ಆಲಿಸಬೇಕು. ಆಗ ಅವರ ಜ್ಞಾನದ ತಿರುಳು ನಮಗೆ ಸಿಗುತ್ತದೆ.

ಅಳುವುದಕ್ಕಿಂತ ನಗುವುದು, ಅಳಿಸುವುದಕ್ಕಿಂತ ನಗಿಸುವುದು ಅದೆಷ್ಟು ಕಷ್ಟ! ಅಳುವು ನಿರಾಶವಾದಿಯೂ ಅವನತಿಸೂಚಕವೂ ಆಗಿದೆ. ಅಳುವವನ ದೇಹ ಸಾಂಸಾರಿಕ ಮೋಹದಿಂದ ಬಂಧಿತವಾಗಿರುತ್ತದೆ. ಅದ್ದರಿಂದಲೇ ಅಂಥವನ ಮನೋವೃತ್ತಿಯಲ್ಲಿ ವೈವಿಧ್ಯ ಇರುವುದಿಲ್ಲ; ಅವನ ಜೀವನ ಸದಾ ಒಂದೇ ಮಟ್ಟದಲ್ಲಿ ಸಾಗುತ್ತದೆ. ಆದರೆ

ಹಾಸ್ಯದಲ್ಲಿ ನಿರ್ಲಿಪ್ತತೆ, ಯುಕ್ತಿ ಹಾಗೂ ಊರ್ಧ್ವಗಾಮಿ ಗುಣವಿದೆ. ಅದರಲ್ಲಿ ಬಗೆ ಬಗೆಯ ಬಣ್ಣ ರೂಪಗಳಿವೆ. ಅದರಲ್ಲಿ ಕೆಳಗಿನಿಂದ ಹಿಡಿದು ಮೇಲಿನ ವರೆಗೆ ಹಲವು ಸ್ತರಗಳಿರುತ್ತವೆ. ವ್ಯಕ್ತಿಯ ಮಾನಸಿಕ, ಭಾವನಾತ್ಮಕ ಹಾಗೂ ನೈತಿಕ ಶ್ರೇಷ್ಠತೆಯನ್ನು ಕೂಡ ಅವನ ನಗುವಿನಿಂದ ತಿಳಿಯಲು ಸಾಧ್ಯವುಂಟು. ಮೇಲೆ ಹೇಳಿದ ಮಹಾಪುರುಷರಿಗೆ ಹಾಸ್ಯವೇ ಎಲ್ಲಕ್ಕೂ ಮಿಗಿಲಾದ ಮನೋರಂಜನೆಯಾಗಿದ್ದುದನ್ನು ನಾನು ಕಂಡಿದ್ದೇನೆ. ಇದರಿಂದ ಅವರು ದಣಿವನ್ನು ನಿವಾರಿಸಿಕೊಳ್ಳುತ್ತಿದ್ದರಲ್ಲದೆ, ತಮ್ಮ ಕೆಲಸಗಳನ್ನೂ ಜೀವನವನ್ನೂ ಆಟವಾಡುವಂತೆ ನಿರ್ವಹಿಸಿಕೊಳ್ಳುತ್ತಿದ್ದರು.

— ಬಲರಾಜ ಸಾಹನಿ
"ಪಾಕಿಸ್ತಾನಕಾ ಸಫರ"ನಲ್ಲಿ

ವೈದ್ಯಶಾಸ್ತ್ರದಲ್ಲಿ ನಾನೊಂದು ಮಹಾಶೋಧ ಮಾಡಿದ್ದೇನೆ. "ಸದಾ ಕೆಲಸ ಮಾಡುವವರಿಗೆ ಅನಾರೋಗ್ಯಕ್ಕೆ ಪುರಸೊತ್ತಿಲ್ಲ." ಕಚೇರಿಯಲ್ಲಿ ತಾವಿಲ್ಲದಿದ್ದರೆ ಕೆಲಸ ಸಾಗದೆಂದು ತಿಳಿದುಕೊಂಡವರಿಗೆ ಶುಕ್ರವಾರ ರಾತ್ರಿ ಅಷ್ಟಿಷ್ಟು ದೇಹಾಲಸ್ಯ ಪ್ರಾರಂಭವಾಗಿ ಸೋಮವಾರ ಮುಂಜಾನೆ ಕಣ್ಮರೆಯಾಗಿ ಹೋಗುತ್ತದೆ. ದೊಡ್ಡ ಕೆಲಸವೇನನ್ನಾದರೂ ಮುಗಿಸಿದ ಮೇಲೆ ಒಮ್ಮೊಮ್ಮೆ ಅಂಥವರೂ ದೊಡ್ಡ ಅನಾರೋಗ್ಯಗಳಿಗೆ ತುತ್ತಾಗುವುದುಂಟಾದರೂ ಕೆಲಸದ ಸ್ಥಿತಿ ಬಿಗಿಯಾಗಿರುವಷ್ಟು ಕಾಲ ಅವರಿಗೆ ಅನಾರೋಗ್ಯವಾಗುವುದೇ ಇಲ್ಲ. ಇದರಿಂದ ನಮ್ಮ ಜಾಡ್ಯ ಜಾಪತ್ತಿಗಳಲ್ಲಿ ಏನೋ ಒಂದು ಸ್ವಯಂಪ್ರೇರಿತ ಅಂಶ ಇದೆಯೆಂದು ಅರ್ಥವಾಗುತ್ತದೆ. ರೋಗಿ ತನ್ನ ಸುಪ್ತಚಿತ್ತದ ಕಾವಲನ್ನು ತೆಗೆದು ಬಿಟ್ಟು ತಂತಾನೇ ಸೋಲಲು ತಂದುಕೊಂಡಿದ್ದಾನೆ. ಅವನಿಗೆ ವಿಶ್ರಾಂತಿ ಬೇಕಾಗಿದೆ. ಅದಕ್ಕೆ ಅನಾರೋಗ್ಯ ಹೊರತು ಬೇರೆ ದಾರಿ ಅವನಿಗೆ ಕಾಣುತ್ತಿಲ್ಲ- ಎಂದೇ ಇದರ ಅರ್ಥ.

— ಸಿ. ನಾರ್ಕೋಟ್ ಪಾರ್ಕಿನ್‌ಸನ್

ಏತರ ಮುಂದೆಯೂ ತಲೆವಾಗದವನು ತಾನೇ ತನಗೆ ತಾಳಲಾರದ ಹೊರೆಯಾಗುತ್ತಾನೆ.

— ದಾಸ್ತಾವಸ್ಕಿ

ಪ್ರಪಂಚದಲ್ಲಿ ಸತತೋದ್ಯೋಗವು ಮಾಡಬಲ್ಲ ಕೆಲಸವನ್ನು ಮಾಡಬಲ್ಲದ್ದು ಬೇರಾವುದೂ ಇಲ್ಲ. ಕೌಶಲ್ಯ ಅದರ ಕೆಲಸ ಮಾಡಲಾರದು; ಕೌಶಲ್ಯವಿದ್ದೂ ಜೀವನ ಅಸಾರ್ಥಕವಾದವರೆಷ್ಟೋ ಜನ ಇದ್ದಾರೆ. ಪ್ರತಿಭೆಯು ಅದರ ಕೆಲಸ ಮಾಡಲಾರದು; ನಿಷ್ಫಲವಾದ ಪ್ರತಿಭೆ ಗಾದೆ ಮಾತಿನಷ್ಟು ಸಾಮಾನ್ಯವಾಗಿದೆ. ವಿದ್ಯೆ ಆ ಕೆಲಸ ಮಾಡಲಾರದು; ವಿದ್ಯಾವಂತರಾದ ನಿರುಪಯೋಗಿಗಳಿಂದ ಪ್ರಪಂಚ ತುಂಬಿಹೋಗಿದೆ. ಸತತೋದ್ಯೋಗ ಮತ್ತು ನಿರ್ಧಾರ ಇವೇ ಸರ್ವಶಕ್ತವಾದವು.

— ಕ್ಯಾಲ್ವಿನ್ ಕೂಲಿಜ್



ಬುದ್ಧಿಯನ್ನು ಉಪಯೋಗಿಸದಾತ ನಾಡ ಪಶು; ಅದನ್ನು ದುರುಪಯೋಗಿಸುವಾತ ಕಾಡ ಪಶು.

* * *

ಎರಡು ಅತಿಗಳ ನಡುವಿನ ಸ್ಥಾನದಲ್ಲಿ ಸುಖ ಅಡಗಿದೆ.

# ಉತ್ತರಾಧಿಕಾರಿಯ ಆಯ್ಕೆ

ಗಂಗಾಧರ

ನೆಹರೂ ನಂತರ ಯಾರು?

೧೯೫೯ ರಲ್ಲಿ ಪ್ರಧಾನ ಮಂತ್ರಿ ಜವಾಹರಲಾಲ ನೆಹರೂಗೆ ೭೦ ತುಂಬಿದಾಗ ರಾಜಕೀಯ ಪ್ರಜ್ಞೆಯುಳ್ಳ ಭಾರತೀಯರ ಮನಸ್ಸಿನಲ್ಲಿಯೂ ಈ ದೇಶದ ಭವಿಷ್ಯಕ್ಕಾಗಿ ಕಳಕಳಿಯುಳ್ಳ ವಿದೇಶೀಯರ ಯೋಜನೆಯಲ್ಲಿಯೂ ಈ ಪ್ರಶ್ನೆ ಸಮರ್ಪಕ ಉತ್ತರವಿಲ್ಲದೆ ಸುಳಿದಾಡತೊಡಗಿತ್ತು. ಕೆಲ ವಿಘ್ನಸಂತೋಷಿಗಳು ಈ ಪ್ರಶ್ನೆಯನ್ನು ಬದಲಿಸಿ, ನೆಹರೂ ನಂತರ ಏನು? ಎಂಬುದಾಗಿ ಕೇಳಿ ಸಂತೋಷಪಡುತ್ತಿದ್ದರು.

ನೆಹರೂ ನಂತರ ಭಾರತದಲ್ಲಿ "ಅಪಾಯಕರ ದಶಕಗಳು" ಬರಲಿವೆ, ದೇಶವು ವಾಮಪಂಥಿ ಅಥವಾ ದಕ್ಷಿಣಪಂಥಿ ಸರ್ವಾಧಿಕಾರವಾದಿಗಳ ವಶಕ್ಕೆ ಹೋಗುವುದೆಂಬ ಭಯವನ್ನು ವ್ಯಕ್ತಪಡಿಸಿ ಒಬ್ಬ ವಿದೇಶೀಯನು ಪುಸ್ತಕ ಬರೆದಿದ್ದನು. ಕೆಲವರು ದೇಶದಲ್ಲಿ ಅರಾಜಕತೆ ಹಬ್ಬಲಿದೆಯೆಂದು ಕಣಿ ನುಡಿದಿದ್ದರು. ಸುತ್ತಲೂ ಕಣ್ಣು ಹಾಯಿಸಿದರೆ ೪೦ ಕೋಟಿ ಸಂಖ್ಯೆಯ ಈ ದೇಶದಲ್ಲಿ ನೆಹರೂ ಸ್ಥಾನವನ್ನು ತುಂಬಬಲ್ಲ ಇನ್ನೊಂದು ವ್ಯಕ್ತಿ ಇಲ್ಲ ಎಂಬುದು ಸ್ಪಷ್ಟವೇ ಇತ್ತು. ನೆಹರೂ ಆಲದ ಮರ ತನ್ನ ಬುಡದಲ್ಲಿ ಏನನ್ನೂ ಬೆಳೆಯಗೊಟ್ಟಿಲ್ಲ ಎಂಬುದು ಸಾಮಾನ್ಯ ಪಲ್ಲವಿಯಾಗಿತ್ತು.

ಆದರೂ ಏಕೈಕ ನಾಯಕ ಜವಾಹರಲಾಲ ನೆಹರೂ ತಮ್ಮ ಉತ್ತರಾಧಿಕಾರಿಯನ್ನು ಸೂಚಿಸಲು ಏನೂ ಮಾಡಲಿಲ್ಲ. ಬದಲಿಗೆ ತಮ್ಮ ಮಂತ್ರಿ ಸಂಪುಟದಲ್ಲಿ ತಮ್ಮ ಉತ್ತರಾಧಿಕಾರ ಪಟ್ಟಕ್ಕೇರಲು ಸಾಮರ್ಥ್ಯವುಳ್ಳವರೆಂದು ಗಣಿಸಬಹುದಾಗಿದ್ದವರನ್ನೆಲ್ಲ ನಿವೃತ್ತಿಪಡಿಸಿದ್ದರು. ಕೃಷ್ಣಮೆನನ್ನರು ಚೀನೀ ದಾಳಿಗೆ ಬಲಿಯಾಗಿದ್ದರು. ಮುರಾರಜಿ ದೇಸಾಯಿ, ಲಾಲಬಹಾದ್ದೂರ ಶಾಸ್ತ್ರಿ, ಎಸ್. ಕೆ. ಪಾಟೀಲ ಮತ್ತು ಜಗಜೀವನ ರಾಮರು ಕಾಮರಾಜ ಯೋಜನೆಯೆಂಬ ಹೊಸದಾದ ರಾಜಕೀಯ ತಂತ್ರದ ಬಲೆಯಿಂದ ಸಂಪುಟದಿಂದ ಹೊರಬಿದ್ದಿದ್ದರು.

ಹೀಗಿರುವಾಗ ೧೯೬೪ ಜನವರಿಯಲ್ಲಿ ಪ್ರಧಾನ ಮಂತ್ರಿಗಳು ಭುವನೇಶ್ವರ ಕಾಂಗ್ರೆಸ್ ಅಧಿವೇಶನದ ನಡುವೆಯೇ ಗಂಭೀರ ಪಕ್ಷಾಘಾತಕ್ಕೊಳಗಾದಾಗ ದೇಶವೇ ತಲ್ಲಣಿಸಿ ಹೋಯಿತು.

೧೯೬೪ ಮೇ ತಿಂಗಳ ಅಂತ್ಯದಲ್ಲಿ ಪ್ರಧಾನ ಮಂತ್ರಿಗಳು ಅನಿರೀಕ್ಷಿತವಾಗಿ ನಿಧನ ಹೊಂದಿದರು. ವಾರ್ತೆ ಕೇಳಿ ಸಹಜವಾಗಿಯೇ ದೇಶ ವಿದೇಶಗಳಲ್ಲಿ ತಳಮಳವೆದ್ದಿತು. ಉತ್ತರಾಧಿಕಾರದ ಪ್ರಶ್ನೆ ಹೇಗೆ ಬಗೆಹರಿದೀತು? ಅದು ಶಾಂತಿಯಿಂದ ಬಗೆಹರಿದೀತೆ? ದೇಶ ಅರಾಜಕತೆಗೆ ಗುರಿಯಾಗುವುದೆ? ಯಾವನಾದರೂ ಸೈನ್ಯಾಧಿಕಾರಿ ಅಧಿಕಾರ ಕಸಿದುಕೊಳ್ಳಬಹುದೆ?

ಆದರೆ ಪ್ರಧಾನ ಮಂತ್ರಿಗಳು ನಿಧನಹೊಂದಿ ಆರನೇ ದಿನ ಮುಗಿಯುವುದರೊಳಗೆ ಭಾರತ ಸಂಸತ್ತಿನ ಕಾಂಗ್ರೆಸ್ ಪಾರ್ಲಿಮೆಂಟರಿ ಪಕ್ಷ ಸಭೆ ಸೇರಿ ನೂತನ ನಾಯಕನನ್ನಾರಿಸಿತು. ಈ ಆರು ದಿನಗಳ ಅವಧಿಯಲ್ಲಿ ಮಂತ್ರಿಮಂಡಲದ ಅತಿ ಹಿರಿಯ ಸದಸ್ಯರಾಗಿದ್ದ ಗುಲಜಾರೀಲಾಲ ನಂದಾ ತಾತ್ಕಾಲಿಕ ಪ್ರಧಾನ ಮಂತ್ರಿಯಾಗಿ ಅಧಿಕಾರ ನಿರ್ವಹಿಸಿದ್ದರು. ಈಗ ಕಾಂಗ್ರೆಸ್ ಪಾರ್ಲಿಮೆಂಟರಿ ಪಕ್ಷ ಲಾಲಬಹಾದ್ದೂರ ಶಾಸ್ತ್ರಿಗಳನ್ನು ನಾಯಕನನ್ನಾಗಿ ಆರಿಸಿಕೊಂಡು ಅವರನ್ನು ಪ್ರಧಾನ ಮಂತ್ರಿಯಾಗಿ ಮಾಡಿತು. ಎಲ್ಲವೂ ಸುಗಮವಾಗಿ ಯಾವ ಕೋಲಾಹಲವೂ ಇಲ್ಲದೆ ನಡೆದುಹೋಯಿತು. ಶತಮಾನಗಳ ಪರಾಧೀನತೆಯ ನಂತರ ಸ್ವತಂ

ತ್ರವಾದ ಭಾರತ ಯಾವ ಗೊಂದಲವೂ ಇಲ್ಲದೆ ನವೀನ ನಾಯಕನನ್ನಾರಿಸಿಕೊಂಡ ರೀತಿ ಪ್ರಪಂಚವನ್ನೇ ಆಶ್ಚರ್ಯಗೊಳಿಸಿತು.

ಇದು ಹೇಗೆ ಸಾಧ್ಯವಾಯಿತು? ಈ ಅರು ದಿನಗಳ ನಾಟಕದಲ್ಲಿ ಪ್ರಧಾನ ಪಾತ್ರ ವಹಿಸಿದವರಾರು? ಪ್ರಧಾನ ಮಂತ್ರಿ ಪದಕ್ಕೆ ಯಾರು ಯಾರು ಕೈಹಾಕಿದರು? ಕೊನೆಗೆ ಸ್ಪರ್ಧೆಯೇ ಇಲ್ಲದೆ ಹೊಸ ನಾಯಕನ ಆಯ್ಕೆಯಾಗುವಂತೆ ವ್ಯವಸ್ಥೆ ಮಾಡಿದ ಸೂತ್ರಧಾರನಾರು? ಇದಕ್ಕೆ ಉತ್ತರ ಈಚೆಗೆ ಪ್ರಕಟವಾದ ಮೈಕೆಲ್ ಬ್ರೆಚರರ ಪುಸ್ತಕದಲ್ಲಿ* ದೊರೆಯುತ್ತದೆ. ಪೂರ್ಣ ಆಧಾರಗಳಿಂದ ಯುಕ್ತವಾಗಿದ್ದರೂ ಈ ಪುಸ್ತಕ ನಾಟಕಸದೃಶವಾಗಿ ತನ್ನ ಕತೆಯನ್ನು ಹೇಳುತ್ತದೆ.

*

ಈ ಉತ್ತರಾಧಿಕಾರದ ಶಕ್ತಿಪರೀಕ್ಷೆಯಲ್ಲಿ ಇಬ್ಬರು ಪ್ರತಿಸ್ಪರ್ಧಿಗಳೆಂದರೆ ಲಾಲಬಹಾದ್ದೂರ ಶಾಸ್ತ್ರಿ ಮತ್ತು ಮೊರಾರಜಿ ದೇಸಾಯಿ ಆಗಿದ್ದರೆಂಬುದು ಎಲ್ಲರಿಗೂ ನೆನಪಿರಬೇಕು. ಧೈರ್ಯ, ನಿರ್ಧಾರಶಕ್ತಿ ಮೊದಲಾದ ಗುಣಗಳಲ್ಲಿ ಮೊರಾರಜಿಯೇ ಪ್ರಬಲರಾಗಿದ್ದರು. ಆದರೆ ಕೊನೆಗೆ ಅವರು ಸೋಲೊಪ್ಪಬೇಕಾಯಿತು—ಇದು ನಾಟಕದ ಪರ್ಯವಸಾನವೆಂಬುದೂ ನೆನಪಿದೆ. ಒಂದು ರೀತಿಯಲ್ಲಿ ಇದು ಆಮೆ ಮೊಲವನ್ನು ಸೋಲಿಸಿದ ಕತೆಯಾಗಿತ್ತು.

*

ಈ ಉತ್ತರಾಧಿಕಾರ ನಾಟಕದ ಪೂರ್ವರಂಗ ಯಾರಿಗೂ ಗೊತ್ತಿಲ್ಲದೆನೇ ನೆಹರೂ ನಿಧನದ ಹಿಂದಿನ ವರ್ಷವೇ ಸಿದ್ಧವಾದುದನ್ನು ನಾವು ನೋಡುತ್ತೇವೆ. ಅದು "ಕಾಮರಾಜ ಯೋಜನೆ"ಯಿಂದ ಪ್ರಾರಂಭವಾಗುತ್ತದೆ. ಅದರ ಉದ್ದೇಶ ಕಾಂಗ್ರೆಸ್ ಸಂಘಟನೆಯನ್ನು ಬಲಪಡಿಸುವುದಾಗಿತ್ತು. ಮಂತ್ರಿಗಳಾಗಿರುವ ಕೆಲ ಪ್ರಮುಖ ಕಾಂಗ್ರೆಸ್ ನಾಯಕರು ಅಧಿಕಾರತ್ಯಾಗ ಮಾಡಿ ಶಿಥಿಲವಾಗುತ್ತಿರುವ ಕಾಂಗ್ರೆಸ್ಸಿನ ಬಲ ಹೆಚ್ಚಿಸಲು ದುಡಿಯಬೇಕು, ಎಂದು ಅದು ಯೋಜಿಸಲ್ಪಟ್ಟಿತ್ತು. ವಿಚಿತ್ರವೆಂದರೆ ಅದರ ಜನಕರು ಕಾಮರಾಜರಲ್ಲ, ಬಿಜು ಪಾಟನಾಯಕರೆಂದು ಬ್ರೆಚರರ ಮತ. ಪಾಟನಾಯಕರು ಅದನ್ನು ಜವಾಹರರ ಮುಂದಿಟ್ಟರು. ಅವರು ಕಾಮರಾಜರನ್ನು ವಿಚಾರಿಸಲು ಸೂಚಿಸಿದರು.

ಮದ್ರಾಸಿನಲ್ಲಿ ಕಾಂಗ್ರೆಸ್ಸು ಕುಂಟತೊಡಗಿದ್ದರಿಂದ ಕಾಮರಾಜರು ಅದಕ್ಕೊಪ್ಪಿ ತಾವೂ ರಾಜೀನಾಮೆ ಕೊಡಲು ಮುಂದೆ ಬಂದರು. ನೆಹರೂಗೆ ಅದು ಹಿಡಿಸಿತು. ಅನೇಕ ರಾಜ್ಯ ಮುಖ್ಯ ಮಂತ್ರಿಗಳೂ ಕೇಂದ್ರ ಮಂತ್ರಿಗಳೂ ರಾಜೀನಾಮೆಗಳನ್ನು ಜವಾಹರರ ಕೈಲಿಟ್ಟರು. ಅವುಗಳಲ್ಲಿ ಒಂಭತ್ತನ್ನು ನೆಹರೂ ಸ್ವೀಕರಿಸಿದರು. ಅವರಲ್ಲಿ ಮೊರಾರಜಿ ದೇಸಾಯಿಯವರೊಬ್ಬರಾಗಿದ್ದರು. ಪರಿಣಾಮವಾಗಿ ಉತ್ತರಾಧಿಕಾರದ ಸ್ಪರ್ಧೆಯಲ್ಲಿ ಮೊರಾರಜಿಯ ಸ್ಥಿತಿ ಹೇಗೆ ದುರ್ಬಲವಾಯಿತೆಂಬುದು ಮುಂದೆ ಸ್ಪಷ್ಟವಾಗುತ್ತದೆ.

ಕಾಮರಾಜ ಯೋಜನೆಯೇನೋ ಮೊರಾರಜಿಯನ್ನು ಹೊರಗೆ ಹಾಕಲು ಹುಟ್ಟಿರಲಿಲ್ಲ. ಆದರೆ ಮುಂದೆ ನಡೆದದ್ದರ ಬಗ್ಗೆ ಹಾಗೆ ಹೇಳಲಾಗದು. ಕಾಮರಾಜ ಯೋಜನೆಗೆ ಮನ್ನಣೆ ದೊರೆತು ಎರಡು ತಿಂಗಳೊಳಗೆ ೧೯೬೩ ಅಕ್ಟೋಬರದಲ್ಲಿ ತಿರುಪತಿಯಲ್ಲಿ ಮದ್ರಾಸಿನ ಕಾಮರಾಜ, ಆಂಧ್ರದ ಸಂಜೀವ ರೆಡ್ಡಿ, ಮೈಸೂರಿನ ನಿಜಲಿಂಗಪ್ಪ, ಮತ್ತು ಬಂಗಾಲದ ಅತುಲ್ಯ ಘೋಷರು ಸೇರಿ ಒಂದು "ಸಿಂಡಿಕೇಟ್" ಸ್ಥಾಪಿಸಿಕೊಂಡರು. ಕಾಮರಾಜ ಯೋಜನೆಯನ್ವಯ ಕೇಂದ್ರ ಸರಕಾರದಿಂದ ಹೊರಬಿದ್ದ ಮುಂಬಯಿಯ ಎಸ್. ಕೆ. ಪಾಟೀಲರು ಫೋನ್ ಮೂಲಕ ಸಿಂಡಿಕೇಟಿನಲ್ಲಿ ಸೇರಿದ್ದರು.

---

* Succession in India, by Michael Brecher, Oxford University.

ಈ ಗುಂಪಿನ ಸ್ಥಾಪನೆ ಮುಖ್ಯವಾಗಿ ಮುರಾರಜಿಯ ವಿರುದ್ಧವೇ ಆಗಿತ್ತು. ಮುಂಬರುವ ಕಾಂಗ್ರೆಸ್ ಅಧ್ಯಕ್ಷ ಆಯ್ಕೆಯಲ್ಲಿ ಮುರಾರಜಿ ಆರಿಸಿ ಬಾರದಂತೆ ಮಾಡಲು ಬದ್ಧಕಂಕಣವಾದ ಈ ಗುಂಪು ಕಾಮರಾಜ ಯೋಜನೆಯನ್ವಯ ಹೊರಬಿದ್ದಿದ್ದ ಕೇಂದ್ರಮಂತ್ರಿ ಲಾಲಬಹಾದ್ದೂರರನ್ನಾದರೂ ಅಧ್ಯಕ್ಷತೆಗೇರಿಸಬೇಕು, ತಪ್ಪಿದರೆ ಕಾಮರಾಜರನ್ನಾದರೂ ಆ ಪದವಿಗೆ ತರಬೇಕು ಎಂದು ನಿರ್ಧರಿಸಿಕೊಂಡಿತು. ದಾಕ್ಷಿಣಾತ್ಯರಾದ ಕಾಮರಾಜರು ಅಧ್ಯಕ್ಷರಾಗಲು ನೆಹರೂ ಅನುಕೂಲರಾಗಿದ್ದುದರಿಂದ ಕಾಮರಾಜರು ಕಾಂಗ್ರೆಸ್ ಅಧ್ಯಕ್ಷರಾದರು. ಮುಂದೆ ನೆಹರು ನಿಧನ ಹೊಂದಿದಾಗ ನಾಯಕನ ಆಯ್ಕೆಯಲ್ಲಿ ಸೂತ್ರಧಾರನ ಪಾತ್ರ ವಹಿಸಲು ಮುರಾರಜಿ ದೇಸಾಯಿಯ ಕಡು ವಿರೋಧಿಗೆ ಇದರಿಂದ ಆಸ್ಪದ ದೊರೆತಂತಾಯಿತು. ಆಗ ಸ್ಥಾಪಿತವಾದ ಸಿಂಡಿಕೇಟು ದಕ್ಷಿಣ ಮತ್ತು ಪೂರ್ವದ ಹಿಂದೀ ಭಾಷೇತರ ರಾಜ್ಯಗಳ ಪ್ರತಿನಿಧಿಯಾಗಿ ಉತ್ತರಾಧಿಕಾರದ ಸ್ಪರ್ಧೆಯಲ್ಲಿ ಬಲವಾದ ಪಾತ್ರವಹಿಸಲಿತ್ತು.

"ಸಿಂಡಿಕೇಟ್" ನ ನಿರ್ಮಾಣವಾಗಿ ಮೂರು ತಿಂಗಳು ಕಳೆಯುವುದರೊಳಗೆ ೧೯೬೪ ಜನವರಿ ಪ್ರಾರಂಭದಲ್ಲಿ ಪ್ರಧಾನಮಂತ್ರಿ ನೆಹರೂಗೆ ತೀವ್ರ ಪಕ್ಷಾಘಾತವಾಯಿತು. ಈಗ ಉತ್ತರಾಧಿಕಾರಿಯ ಪ್ರಶ್ನೆ ನಿಕರಕ್ಕೇ ಬಂದುಬಿಟ್ಟಿತು. ನಾಯಕನ ದಿನಗಳು ಮುಗಿಯುತ್ತ ಬಂದವೆಂದು ಸ್ಪಷ್ಟವಾದ್ದರಿಂದ ಹಿನ್ನೆಲೆಯಲ್ಲಿ ಚಟುವಟಿಕೆ ಬಲವಾಯಿತು. ಕಾಮರಾಜ ಯೋಜನೆ ತಮಗೆ ಮುಂಗಾಲ್ಪುಟಿಕೆ ಹೊಡೆಯಿತೆಂಬುದರ ಅರಿವು ಮುರಾರಜಿಯವರಿಗೆ ಈಗ ಬರತೊಡಗಿತ್ತು. ಪ್ರಧಾನ ಮಂತ್ರಿಗಳ ಕೆಲಸವನ್ನು ಹಗುರುಗೊಳಿಸಲು ಲಾಲಬಹಾದುರ ಶಾಸ್ತ್ರಿಗಳನ್ನು ಪುನಃ ಮಂತ್ರಿಮಂಡಲದಲ್ಲಿ ಕರೆದುಕೊಳ್ಳಬೇಕೆಂಬ ಒತ್ತಾಯ ಬರಲಾಗಿ ನೆಹರೂ ಕಾಮರಾಜ ಯೋಜನೆಯನ್ವಯ ಹಿಂದಿನ ವರ್ಷ ಹೊರಬಿದ್ದಿದ್ದ ಶಾಸ್ತ್ರಿಗಳು ಮಂತ್ರಿಮಂಡಲಕ್ಕೆ ಮರಳಿದರು. ಇದು ಅವರ ಸ್ಥಾನವನ್ನು ಬಲಪಡಿಸಿತು.

ಹೀಗೆ ನೆಹರೂ ನಿಧನಹೊಂದಿದಾಗ ಮುರಾರಜಿಯ ವಿರುದ್ಧ ಪ್ರಬಲ ಶಕ್ತಿಗಳು ಆಗಲೇ ಕಲೆತಿದ್ದವು. ಕಾಮರಾಜ ಯೋಜನೆಯನ್ವಯ ನಿಜವಾಗಿ ಪೆಟ್ಟು ಬಿದ್ದದ್ದು ಮುರಾರಜಿಗೇ. ಪಾಪ, ಬಿಜು ಪಾಟನಾಯಕರ ಕಾಮರಾಜ ಸೂತ್ರವನ್ನು ಪ್ರಥಮತಃ ಚರ್ಚಿಸಿದ ನಾಯಕರಲ್ಲಿ ಮುರಾರಜಿಯವರೂ ಒಬ್ಬರಾಗಿದ್ದರು. ಮುಂದೆ ಅದೇ ತಮಗೆ ಮುಳುವಾದೀತೆಂದರಿಯದೆ ಮುರಾರಜಿ ಅದಕ್ಕೆ ಬೆಂಬಲವಿತ್ತಿದ್ದರಂತೆ. ವಿಧಿ ಕಣ್ಣು ಕಟ್ಟುವಾಗ ಯಾರು ಎಚ್ಚತ್ತಿರುವರು?

*

ಡೆಹರಾಡೂನಿನಲ್ಲಿ ವಿಶ್ರಾಂತಿ ಪಡೆದು ತುಂಬ ಉಲ್ಲಸಿತರಾಗಿಯೇ ದಿಲ್ಲಿಗೆ ಮರಳಿದ ಮರುದಿನವೇ ೧೯೬೪ ಮೇ ೨೭ ರಂದು ಮಧ್ಯಾಹ್ನ ೧-೪೫ ರ ಸುಮಾರಿಗೆ ನೆಹರೂ ಆಕಸ್ಮಾತ್ತಾಗಿ ನಿಧನಹೊಂದಿದರು. ದೇಶ ಶೋಕದಲ್ಲಿ ಮುಳುಗಿತು. ಎಲ್ಲೆಲ್ಲೋ ಇದ್ದ ನಾಯಕರು ದಿಲ್ಲಿಗೆ ಧಾವಿಸಿದರು. ಸಿಂಡಿಕೇಟ್ ಸದಸ್ಯರಾರೂ ರಾಜಧಾನಿಯಲ್ಲಿದ್ದಿಲ್ಲ. ಕಾಮರಾಜ, ಸಂಜೀವರೆಡ್ಡಿ, ಅತುಲ್ಯ ಘೋಷ, ನಿಜಲಿಂಗಪ್ಪನವರು ದಕ್ಷಿಣದಲ್ಲಿದ್ದವರು ವಿಮಾನದಲ್ಲಿ ದಿಲ್ಲಿಗೆ ಹಾರಿದರು. ಎಸ್. ಕೆ. ಪಾಟೀಲರು ಲಂಡನ್ನಿನಿಂದ ಓಡಿ ಬಂದರು. ಸಂರಕ್ಷಣ ಮಂತ್ರಿ ಚವ್ಹಾಣರು ಅಮೇರಿಕದಿಂದ ಹಿಂದಿರುಗಿದರು. ಅಂದು ಸಂಜೆಯೊಳಗೆ ಮುಂದಿನ ನಾಟಕದ ಮುಖ್ಯ ಪಾತ್ರಗಳೆಲ್ಲ ದಿಲ್ಲಿಯಲ್ಲಿದ್ದರು.

ಪ್ರಮುಖ ನಾಯಕರೆಲ್ಲ ದಿಲ್ಲಿಗೆ ಬರುವ ಮೊದಲೇ ರಾಷ್ಟ್ರಪತಿ ರಾಧಾಕೃಷ್ಣನ್ನರು ಧೀರ ಹೆಜ್ಜೆಯನ್ನಿಟ್ಟು ಮಂತ್ರಿಸಂಪುಟದ "ಅವಸರ ಸಮಿತಿ"ಯ ಸೂಚನೆಯನ್ವಯ ಮಂತ್ರಿಮಂಡಲದ ಅತಿ ಹಿರಿಯ ಸದಸ್ಯರಾದ ಗೃಹ

ಮಂತ್ರಿ ಗುಲಜಾರಿಲಾಲ ನಂದಾ ಅವರನ್ನು ತಾತ್ಕಾಲಿಕ ಪ್ರಧಾನ ಮಂತ್ರಿಯನ್ನಾಗಿ ಪ್ರತಿಜ್ಞೆ ಮಾಡಿಸಿಕೊಂಡಿದ್ದರು. ಹೀಗೆ ರಾಷ್ಟ್ರರಥ ಒಂದು ತಾಸು ಕೂಡ ಸಾರಥಿರಹಿತವಾಗಿ ಉಳಿಯದೆ ಮುಂದೆ ಸಾಗಿತು. ಇದನ್ನು ಕೇಳಿ ಮುರಾರಜಿಭಾಯಿ ಈ ಮುಲಾಜ ಸೂತ್ರವನ್ನು ಪುನಸಾ ಶಪಿಸಿರಬೇಕು. ಅವರು ಹೊರಬೀಳದೆ ಇನ್ನೂ ಮಂತ್ರಿಯಾಗಿದ್ದಿದ್ದರೆ ನಂದಾರಲ್ಲ, ಮುರಾರಜಿಯೇ ಎಲ್ಲರಿಗಿಂತ ಹಿರಿಯ ಸದಸ್ಯರಾಗಿರುತ್ತಿದ್ದರು. ಅವರೇ ತಾತ್ಕಾಲಿಕ ಪ್ರಧಾನ ಮಂತ್ರಿಯಾಗುತ್ತಿದ್ದರು. ಆ ಮೇಲೆ ಅವರನ್ನು ಅಲ್ಲಿಂದ ಕದಲಿಸುವುದು ಸುಲಭವಾಗುತ್ತಿರಲಿಲ್ಲ.

*

ಮೃತ ನಾಯಕನ ಅಂತ್ಯಕ್ರಿಯೆ ಮರುದಿನಕ್ಕೆ— ತಾ. ೨೮ಕ್ಕೆ — ಆಗಲಿತ್ತು. ಅವರ ಕಳೇವರ ಇನ್ನೂ ಪೂರ್ತಿ ತಣ್ಣಗಾಗುವ ಮೊದಲೇ, ಅವರಿಗೆ ದುಃಖಾಶ್ರುಗಳನ್ನರ್ಪಿಸುವುದಕ್ಕಾಗಿ ಅವರ ವಸತಿಗೆ ಬಂದಿದ್ದ ನಾಯಕರ ಮನಸಿನಲ್ಲಿ ಉತ್ತರಕ್ರಿಯೆಗಿಂತ ಉತ್ತರಾಧಿಕಾರದ ವಿಚಾರವೇ ಸುತ್ತುತ್ತಿತ್ತು. ಪ್ರಧಾನ ಮಂತ್ರಿ ಸದನದಲ್ಲಿ ಕಳೇವರದ ಸಮ್ಮುಖದಲ್ಲೇ ನಡೆದ ಎರಡು ಚಿಕ್ಕ ಘಟನೆಗಳು ಮುಂದೆ ನಾಯಕತ್ವದ ಮುಖ್ಯ ಸ್ಪರ್ಧಿಗಳಾದ ಶಾಸ್ತ್ರಿ ಹಾಗು ಮುರಾರಜಿಯ ಸ್ವಭಾವ ಭಿನ್ನತೆಯನ್ನೂ ಬಹುಶಃ ಕೊನೆಗೆ ಶಾಸ್ತ್ರಿಗಳೇ ಏಕೆ ಗೆದ್ದರೆಂಬುದನ್ನೂ ಸಂಕೇತಿಸುತ್ತದೆ. ಶಾಸ್ತ್ರಿಗಳ ಮಿತ್ರನೊಬ್ಬ ಅವರನ್ನು ಸಂಧಿಸಿ ನೀವೇ ಮುಂದಿನ ದೇಶದ ನಾಯಕ ಎಂದನಂತೆ. ಶಾಸ್ತ್ರಿಗಳು ನಿರ್ವಿಕಾರವಾಗಿ, ಹೌದು, ಸದ್ಯಕ್ಕೇನೊ ನಂದಾ ನಾಯಕರು ಎಂದರಂತೆ. ಶಾಸ್ತ್ರಿಗಳು ಗತನಾಯಕನ ಮನೆಯಲ್ಲಿ ಯಾವ ಅಧಿಕಾರ ದರ್ಪವಿಲ್ಲದೆ ಶಾಂತವಾಗಿ ಕಾರ್ಯಮಗ್ನರಾಗಿದ್ದರು. ಮುರಾರಜಿಯವರೂ ನಿಧನ ವಾರ್ತೆ ಕೇಳಿದೊಡನೆ ಅಲ್ಲಿ ಬಂದಿದ್ದರು. ಬಂದವರೇ ಯಾರೂ ಕೇಳಿಕೊಳ್ಳದಿದ್ದರೂ ತಾವೇ ಹೊಣೆ ತೆಗೆದುಕೊಂಡು ಹಾಗೆ ಮಾಡಿ ಹೀಗೆ ಮಾಡಿ ಎಂದು ಅಪ್ಪಣೆ ಹೊರಡಿಸತೊಡಗಿದರು. ಸ್ವಲ್ಪ ಹೊತ್ತಿನಲ್ಲಿ ಡಾ. ಸುಶೀಲಾ ನಯ್ಯರ್ ಕಳೇವರವನ್ನಿರಿಸಿದ ರೀತಿಯನ್ನು ತುಸು ಬದಲಿಸದಿದ್ದರೆ ಸಂದರ್ಶಕರಿಗೆ ಸರಿಯಾಗಿ ಕಾಣಿಸದು ಎಂದರಂತೆ. ಒಡನೆ ಮುರಾರಜಿ, "ನಿರ್ಣಯ ಆಗಿ ಹೋಗಿದೆ, ಇನ್ನು ಬದಲಾಯಿಸಲು ಸಾಧ್ಯವಿಲ್ಲ" ಎಂದು ದಬಾಯಿಸಿದರಂತೆ. ಇದನ್ನು ಕೇಳಿ ಆ ದುಃಖದ ವೇಳೆಯಲ್ಲೂ ಸೈರಣೆಗೆಟ್ಟು ಡಾ. ಸುಶೀಲಾ, "ನೀವ್ಯಾರು ನಿರ್ಣಯ ಮಾಡಲು?" ಎಂದು ನುಡಿದರು. ಮುರಾರಜಿಯವರ ಸ್ವಭಾವದ ಒರಟುತನ ಅವರಿಗೆ ಹೇಗೆ ವಿರೋಧ ಹೆಚ್ಚಿಸಿತೆಂಬುದಕ್ಕೆ ಇದೊಂದು ನಿದರ್ಶನ.

ನೆಹರೂ ನಿಧನದ ನಂತರದ ಆರು ದಿನಗಳಲ್ಲಿ ರಾಜಧಾನಿಯಲ್ಲಿ ನಡೆದ ಜಟಿಲ ಮತ್ತು ಕೆಲಮಟ್ಟಿಗೆ ಕುಟಿಲ ನಾಟಕವನ್ನು ಬ್ರೆಚರ್ ಬಲು ಚಿತ್ರವತ್ತಾಗಿ ಬಣ್ಣಿಸಿದ್ದಾರೆ. ಭಾರತದಲ್ಲಿ ರಾಜಕೀಯ ನಿರ್ಣಯಗಳನ್ನು ಹೇಗೆ ಮಾಡಲಾಗುತ್ತಿದೆಯೆಂಬ ಬಗ್ಗೆಯೂ ಅವರು ಒಳನೋಟವನ್ನೊದಗಿಸಿದ್ದಾರೆ.

ನೆಹರೂ ನಿಧನದ ದಿನ ಸೂರ್ಯಾಸ್ತಮಯದೊಳಗೆ ಮುರಾರಜಿ ನಾಯಕತ್ವ ಪಟ್ಟವನ್ನು ಪಡೆಯಲು ಸರ್ವಪ್ರಯತ್ನ ಮಾಡುವರೆಂಬುದು ಸ್ಪಷ್ಟವಾಗಿತ್ತು. ಸಂಸತ್ತಿನ ಅಧಿವೇಶನ ನಡೆಯುತ್ತಿದ್ದ ಕಾಲವಾದ್ದರಿಂದ ಅಧಿಕಾಂಶ ಸಂಸತ್ಸದಸ್ಯರು ರಾಜಧಾನಿಯಲ್ಲಿ ಹಾಜರಿದ್ದರು. ಅಂದೇ ಸಂಜೆ ಮುರಾರಜಿಯ ಪರವಾಗಿ ಸಂಸತ್ಸದಸ್ಯರನ್ನು ಕಂಡು ಮಾತಾಡುವುದು ಪ್ರಾರಂಭವಾಗಿದೆಯೆಂದು ವರದಿಗಳು ಬರತೊಡಗಿದವು. ಸಿಂಡಿಕೇಟಿನ ಪ್ರಭಾವದಲ್ಲಿದ್ದ ಕಾಂಗ್ರೆಸ್ ಕಾರ್ಯ ಸಮಿತಿ ತಮಗನುಕೂಲವಿಲ್ಲೆಂದು ಮುರಾರಜಿಯವರಿಗೆ ಗೊತ್ತೇ ಇತ್ತು. ಆದರೆ ಹೊಸ ನಾಯಕನನ್ನಾರಿಸ

ಬೇಕಾದ್ದು ಸಂಸತ್ತಿನಲ್ಲಿನ ಕಾಂಗ್ರೆಸ್ ಸದಸ್ಯರು— ಅರ್ಥಾತ್ ಕಾಂಗ್ರೆಸ್ ಪಾರ್ಲಿಮೆಂಟರಿ ಪಕ್ಷ. ಈ ವರೆಗೆ ಮುಖ್ಯ ವಿಷಯಗಳಲ್ಲಿ ಕಾಂಗ್ರೆಸ್ ವರಿಷ್ಠರ ಆದೇಶಕ್ಕೆ ಪಾರ್ಲಿಮೆಂಟರಿ ಪಕ್ಷ ವಿಧೇಯತೆಯಿಂದ ಮುದ್ರೆಯೊತ್ತುತ್ತಿತ್ತು. ಆದರೆ ೧೯೬೨ ರಲ್ಲಿ ಕೃಷ್ಣಮೆನನ್ನರನ್ನು ಹೊರಗೆ ಹಾಕಿಸುವುದರಲ್ಲಿ ವರಿಷ್ಠರನ್ನು ಕೇಳದೆಯೆ ಅದು ಮುಖ್ಯ ಪಾತ್ರ ವಹಿಸಿ ತನ್ನ ಸ್ವಾತಂತ್ರ್ಯವನ್ನು ಪ್ರದರ್ಶಿಸಿತ್ತು. ಪ್ರತಿಯೊಂದು ವಿಷಯದಲ್ಲೂ ಕಾಂಗ್ರೆಸ್ ವರಿಷ್ಠರ ಆದೇಶಕ್ಕೆ ಪಾರ್ಲಿಮೆಂಟರಿ ಪಕ್ಷ ಕಣ್ಮುಚ್ಚಿ ಮುದ್ರೆಯೊತ್ತಬೇಕಾದ ಪ್ರಸಂಗವು ಹಲವಾರು ಸ್ವತಂತ್ರವೃತ್ತಿಯ ಸಂಸತ್ಸದಸ್ಯರಿಗೆ ಸಂತಾಪವನ್ನೂ ಹುಟ್ಟಿಸುತ್ತಿತ್ತು. ಈಗ ದೇಶವನ್ನೆಲ್ಲ ಅಂಕೆಯಲ್ಲಿಟ್ಟುಕೊಂಡ ನಾಯಕ ನಿಧನ ಹೊಂದಿದ್ದರಿಂದ ಸಂಸತ್ ಪಕ್ಷವು ತನ್ನ ಪಾರಮ್ಯವನ್ನು ಸ್ಥಾಪಿಸಿ ವರಿಷ್ಠರ ನೊಗವನ್ನು ಕಳಚಿ ಒಗೆಯಲು ಸುಸಂಧಿ ಪ್ರಾಪ್ತವಾಗಿದೆಯೆಂದು ಅವರೆಣಿಸಿದ್ದರು. ಈ ಭಾವನೆಯನ್ನು ತಮಗನುಕೂಲ ಮಾಡಿಕೊಳ್ಳಬಹುದೆಂದು ಮುರಾರಜಿ ಭಾವಿಸಿದಂತೆ ಕಾಣುತ್ತದೆ.

ಆದರೆ ಅವರು ದುಡುಕಿದರು. ತಾ. ೨೮ ರಂದು ಅವರು ಬಹಿರಂಗವಾಗಿ ತಾವು ನಾಯಕತ್ವಕ್ಕಾಗಿ ಚುನಾವಣೆಗೆ ನಿಲ್ಲಲು ಸಿದ್ಧರಿದ್ದೇವೆಂದು ಸಾರಿದರು. ತಾನಾಗಿ ಮುಂದೆ ಬಂದು ಅಧಿಕಾರ ಸ್ಥಾನಕ್ಕೆ ಸಿದ್ಧನಿದ್ದೇನೆ ಎಂದು ಹೇಳುವುದು ಭಾರತೀಯ ಶಿಷ್ಟಾಚಾರಕ್ಕೆ ವಿರುದ್ಧವೆಂಬುದನ್ನು ಅವರು ಮರೆತದ್ದರಿಂದ ಜನಾಭಿಪ್ರಾಯ ಸ್ವಲ್ಪ ಮಟ್ಟಿಗೆ ಮುರಾರಜಿಯ ವಿರುದ್ಧ ತಿರುಗಿತು.

ತದ್ವಿರುದ್ಧವಾಗಿ ಶಾಸ್ತ್ರಿಗಳು ತಾವು ಸಿದ್ಧರಿದ್ದೇವೆ ಎಂದು ಕೊನೆವರೆಗೂ ಬಹಿರಂಗಪಡಿಸಲಿಲ್ಲ ಆದರೆ ಅವರ ಅನುಯಾಯಿಗಳು ಮುರಾರಜಿಯ ಈ ದುಡುಕಿನಿಂದ ಉಂಟಾದ ಭಾವನೆಯನ್ನು ಉಪಯೋಗಿಸಿಕೊಂಡರೆಂದು ಹೇಳಲಾಗಿದೆ. "ಸಿಂಡಿಕೇಟು" ಅಷ್ಟರಲ್ಲೇ ಲಾಲ ಬಹಾದೂರರ ಪರವಾಗಿ ಕೆಲಸಮಾಡಲು ನಿರ್ಧರಿಸಿಬಿಟ್ಟಿತ್ತು. ಬಂಗಾಲದ ಅತುಲ್ಯ ಘೋಷರೂ ಆಂಧ್ರದ ಸಂಜೀವರೆಡ್ಡಿಯವರೂ ಸದ್ದಿಲ್ಲದೆ ಸಂಸತ್ಸದಸ್ಯರನ್ನು ತಡವಿ ನೋಡುತ್ತಲೇ ಇದ್ದರು. ದಿನವೂ ಸಂಜೆ ಪಾಟನಾಯಕರ ಮನೆಯಲ್ಲಿ ಸಿಂಡಿಕೇಟ್ ಸದಸ್ಯರು ಸೇರಿ ಅಂದಿನ ಸಮಾಚಾರಗಳನ್ನು ಸಂಯೋಜಿಸುತ್ತಿದ್ದರು. ಸಿಂಡಿಕೇಟಿಗೆ ಸಮೀಪಸ್ಥರಾದವರಲ್ಲಿ ಒಡಿಸಾದ ಪಾಟನಾಯಕರೊಬ್ಬರು ಮಾತ್ರ ಮುರಾರಜಿಯ ಪರವಾಗಿ ಘೋಷರನ್ನು ಒಲಿಸಲು ಯತ್ನಿಸುತ್ತಿದ್ದರು. ಆದರೆ ಸಿಂಡಿಕೇಟು ಅದನ್ನು ಕಿವಿಗೆ ಹಾಕಿಕೊಳ್ಳಲು ಸಿದ್ಧವಿರಲಿಲ್ಲ.

*

ಈ 'ಸ್ವಯಂವರ'ದಲ್ಲಿನ ಎರಡು ಪ್ರಧಾನ ವರರು ಮುರಾರಜಿ ಮತ್ತು ಶಾಸ್ತ್ರಿಗಳಾಗಿದ್ದರೂ ಇತರ ವರರೂ ಆಸೆಗಣ್ಣಿನಿಂದ ವಧುವನ್ನು ನೋಡುತ್ತಿದ್ದರೆಂಬುದು ಸ್ವಾರಸ್ಯದ ಸಂಗತಿ. ಮೊದಲನೆಯದಾಗಿ ಗುಲಜಾರಿಲಾಲ ನಂದಾ. ಅವರು ತಾತ್ಕಾಲಿಕ ಪ್ರಧಾನ ಮಂತ್ರಿಯಾಗಿದ್ದು ತಾನೇ ಏಕೆ ಮುಂದುವರಿಯಬಾರದು ಎಂದೆಣಿಸುತ್ತಿದ್ದರು. ಆದರೆ ತಾವು ವರನಾಗಿದ್ದೇವೆ ಎಂದು ಸಾರಲು ಅವರು ಸಿದ್ಧರಿರಲಿಲ್ಲ. ನೀವು ಬಯಸಿದರೆ ಮುಂದುವರಿಯುತ್ತೇನೆಂದು ಹೇಳುತ್ತಿದ್ದರು. ಪ್ರಧಾನ ಮಂತ್ರಿ ನೆಹರೂ ಜನವರಿಯಲ್ಲಿ ಕಾಯಿಲೆ ಬೀಳುವ ಮೊದಲೇ ಲಾಲಬಹಾದೂರರನ್ನು "ನಿಷ್ಕಾಮರಾಜೀಕೃತ"ರನ್ನಾಗಿ ಮಾಡಿ ಪುನಃ ಮಂತ್ರಿ ಮಂಡಲದಲ್ಲಿ ತಂದುಕೊಂಡು ಉಪಪ್ರಧಾನ ಮಂತ್ರಿಯಾಗಿ ಮಾಡೋಣವೆ ಎಂದು ನಂದಾ ಅವರನ್ನು ಕೇಳಿದ್ದರಂತೆ. ನಂದಾ ಆಗ ಏನೂ ಉತ್ತರ ಕೊಡದ್ದರಿಂದ ಜವಾಹರರು ಆ ವಿಚಾರ ಬಿಟ್ಟರಂತೆ. ಇದರಿಂದ ಮುರಾರಜಿ-ರಹಿತ ಮಂತ್ರಿ ಮಂಡಲದಲ್ಲಿ ನೆಹರೂ ನಂತರ ತಮಗೆ ಪ್ರಧಾನ ಮಂತ್ರಿ ಪದ ಸಿಕ್ಕಬೇಕೆಂಬ

ಅವರ ಹಂಬಲ ವ್ಯಕ್ತವಾಗುತ್ತದೆ. ಮುಂದೆ ತಾತ್ಕಾಲಿಕ ಪ್ರಧಾನ ಮಂತ್ರಿಯಾದೊಡನೆ ಅವರು ಜವಾಹರರ ವಿದೇಶ ಮತ್ತು ಪರಮಾಣು ಶಕ್ತಿ ಶಾಖೆಗಳನ್ನು ತಾವೇ ವಹಿಸಿಕೊಂಡದ್ದೂ ಸಂಸತ್ತಿನಲ್ಲಿ ನೆಹರೂ ಪೀಠವನ್ನು ಏರಿದ್ದೂ ನೋಡಿದರೆ ಕಾಯಂ ಪ್ರಧಾನಿಯಾಗುವ ವಿಷಯದಲ್ಲಿ ಅವರು ಅನಾಸಕ್ತರಾಗಿರಲಿಲ್ಲೆಂದು ತೋರುತ್ತದೆ. ಆದರೆ ಇವೆರಡೂ ಕ್ರಮಗಳು ಅವರ ಬಗ್ಗೆ ಸಹಾನುಭೂತಿಯನ್ನು ಕೆಡಿಸಲು ಮಾತ್ರ ಸಹಾಯವಾದವು.

ಆದರೂ ಅವರ ಆಸೆ ತೀರ ನಿರಾಧಾರವಾಗಿರಲಿಲ್ಲ. ಪಾರ್ಲಿಮೆಂಟರಿ ಕಾಂಗ್ರೆಸ್ ಪಕ್ಷದ ವಾಮಪಂಥೀಯ ಸದಸ್ಯರು ಇಂದಿರಾ ಗಾಂಧಿ, ತಪ್ಪಿದರೆ ನಂದಾ ಅವರಿಗೆ ಬೆಂಬಲವೀಯಲು ಸಿದ್ಧರಿದ್ದರು. ಕೆ. ಡಿ. ಮಾಳವೀಯರ ಮನೆಯಲ್ಲಿ ನಡೆದ ಸಭೆಗಳಲ್ಲಿ ಇದರ ಬಗ್ಗೆ ಚರ್ಚೆಗಳೂ ಆಗುತ್ತಿದ್ದವು.

ಹರಿಜನ ನಾಯಕರಾದ ಜಗಜೀವನ ರಾಮರ ಕೈಲಿ ಹರಿಜನ ಗುಂಪಿನ ೬೦ ರಷ್ಟು ಮತಗಳು ಇದ್ದವೆಂದು ನಂಬಲಾಗಿತ್ತು. ಅವರ ಬೆಂಬಲಕ್ಕಾಗಿ ಎಲ್ಲ ಗುಂಪುಗಳೂ ಯತ್ನಿಸುತ್ತಿದ್ದವು. ಅವರು ಲಾಲ ಬಹಾದೂರರನ್ನು ತಿರಸ್ಕಾರದಿಂದ ಕಾಣುತ್ತಿದ್ದರು. ಅವರಿಗಿಂತ ತಾನೇ ಪ್ರಧಾನಮಂತ್ರಿಯಾಗಲು ಯೋಗ್ಯ ಎಂದು ಅವರು ಹೇಳುತ್ತಿದ್ದರು. ಕಾಮರಾಜರಿಗೆ ಹಾಗೆ ತಿಳಿಸಿಯೂ ಇದ್ದರು. ಮೊರಾರಜಿ ಅವರ ಬೆಂಬಲ ಕೇಳಿದ್ದರು. ಅದು ಸಿಕ್ಕುವುದೆಂದೂ ನಂಬಿದ್ದರು. ಆದರೆ ತಾ. ೩೦ ರಂದು ಜಗಜೀವನ ರಾಮರು ತಾವೂ ವರ ಎಂದು ಸಾರಿ ಎಲ್ಲರನ್ನೂ ಚಕಿತಗೊಳಿಸಿಬಿಟ್ಟರು. ಕಾಮರಾಜೀಕೃತರಾಗಿ ಮಂತ್ರಿಮಂಡಲ ಬಿಟ್ಟರೂ ಎಲ್ಲರಿಗಿಂತಲೂ ದೀರ್ಘಕಾಲ ತಾನು ಕೇಂದ್ರ ಮಂತ್ರಿಯಾಗಿದ್ದುದರಿಂದ ತಾನೇ ವರನಾಗಲು ಯೋಗ್ಯ, ಎಂದವರ ವಾದವಾಗಿತ್ತು!

ಇಂದಿರಾಗಾಂಧಿ ಆಗ ಪ್ರಧಾನ ಮಂತ್ರಿಯಾಗಬಯಸುತ್ತಿದ್ದರೆ? ಈ ಪ್ರಶ್ನೆಗೆ ಬ್ರೆಚರರು ಸಾಕಷ್ಟು ಗಮನವಿತ್ತಿದ್ದಾರೆ. ತಂದೆಯ ಮರಣದಿಂದ ಅವರ ಮನಸು ತೀರ ತ್ರಸ್ತವಾಗಿತ್ತೆಂಬುದು ನಿಜ. ಆದರೆ ಅವರ ಪರವಾಗಿ ಕೃಷ್ಣಮೆನನ್ನರ ಸಮ್ಮತಿಯಿಂದ ಕೆ. ಡಿ. ಮಾಲವೀಯ ಮೊದಲಾದ ವಾಮ ಪಂಥೀಯರು ಕೆಲಸ ಮಾಡುತ್ತಿದ್ದರೆಂಬುದೂ ಅಷ್ಟೇ ನಿಜ. ಜಗಜೀವನರಾಮರೂ ಸಂದರ್ಭ ಬಂದರೆ ಅವರಿಗೆ ಬೆಂಬಲ ಕೊಡಬಹುದಿತ್ತು. ನೆಹರೂ ನಿಧನದ ಕೆಲ ಕಾಲ ಹಿಂದೆ ಹಾಂಗ್ ಕಾಂಗಿನಲ್ಲಿ ಯಾರೋ ಕೇಳಿದಾಗ ಇಂದಿರಾ ತಂದೆಯ ನಂತರ ತಾವು ಪ್ರಧಾನಮಂತ್ರಿಯಾಗಲು ಒಪ್ಪಬಹುದು ಎಂದಿದ್ದರೆಂದು ವರದಿಯಿತ್ತು. ನೆಹರೂ ನಿಧನಾನಂತರವೂ ನೀವು ನಿಲ್ಲಲು ಸಿದ್ಧರಿದ್ದೀರಾ ಎಂದು ಯಾರೋ ಕೇಳಿದಾಗ ಅವರು "ನನ್ನನ್ನಾರೂ ಕೇಳಿಯೆ ಇಲ್ಲವಲ್ಲ" ಎಂದು ಹೇಳಿದ್ದರಂತೆ. ಮುಂದಾಳುಗಳು ಒಟ್ಟಾಗಿ ಕೇಳಿಕೊಂಡಿದ್ದರೆ ಆಗಲೆ ಅವರು ಪ್ರಧಾನ ಮಂತ್ರಿಯಾಗಲು ಒಪ್ಪಬಹುದಿತ್ತೇನೋ ಎಂಬ ಭಾವನೆಯಾಗುತ್ತದೆ. ಆದರೆ "ಸಿಂಡಿಕೇಟ್"ಗೆ ಆಗ ಅವರನ್ನು ಕಂಡರಾಗುತ್ತಿರಲಿಲ್ಲೆಂದು ಪಾಟನಾಯಕರು ಹೇಳುತ್ತಾರೆ. ನೆಹರೂ ಅಸ್ವಸ್ಥ ಕಾಲದಲ್ಲಿ ಇಂದಿರಾ ಮುಂದಾಳುಗಳನ್ನು ತುಚ್ಛವಾಗಿ ನಡೆಸಿಕೊಂಡ ಉರಿ ಅವರ ಮನಸಿನಿಂದ ಇನ್ನೂ ಮಾಯ್ದಿರಲಿಲ್ಲ.

ಸಂಸತ್ತಿನಲ್ಲಿ ಇನ್ನೊಂದು ಪ್ರಬಲ ಗುಂಪೆಂದರೆ ಆಗಿನ ಸಂರಕ್ಷಣ ಮಂತ್ರಿ ಚವ್ಹಾಣರ ೩೨ ಸದಸ್ಯರುಳ್ಳ ಮಹಾರಾಷ್ಟ್ರ ಗುಂಪು. ಚವ್ಹಾಣರು ಯಾರಿಗೂ ಮೊದಲು ಮಾತುಕೊಡಲಿಲ್ಲ. ಮೊರಾರಜಿ ತಾವು ಹಿಂದೆ ಚವ್ಹಾಣರಿಗೆ ಎಸಗಿದ ಉಪಕಾರ (ಚವ್ಹಾಣರು ಮಹಾರಾಷ್ಟ್ರದ ಮುಖ್ಯ ಮಂತ್ರಿಯಾಗಲು ಮೊರಾರಜಿ ಕಾರಣರಾಗಿದ್ದರು) ದಿಂದ ಅವರ ಬೆಂಬಲ ತಮಗಿದೆಯೆಂದು ನಂಬಿದ್ದರು. ಆದರೆ ಶಿಷ್ಯ ಗುರುವಿಗೆ

ಮಾತು ಕೊಡಲು ಒಪ್ಪಲಿಲ್ಲ. ಸ್ವತಃ ಎಂದಾದರೂ ಪ್ರಧಾನ ಮಂತ್ರಿಯಾಗುವ ಆಸೆ ಇಟ್ಟುಕೊಂಡ ಅವರು ಸೋಲಬಹುದಾದವರ ಕಡೆ ಸೇರಿ ಬಲವದ್ವೈರ ಕಟ್ಟಿಕೊಳ್ಳಲು ಸಿದ್ಧರಿರಲಿಲ್ಲ. ಮೇಲಾಗಿ ತಾವು ಬೆಂಬಲಿಸಿದ್ದರೂ ಮುರಾರಜಿಯನ್ನು ದ್ವೇಷಿಸುತ್ತಿದ್ದ ಮಹಾರಾಷ್ಟ್ರೀಯ ಸದಸ್ಯರು ತಮ್ಮ ಮಾತು ಕೇಳುವರೆಂಬ ಭರವಸೆ ಇದ್ದಿಲ್ಲವೆಂದು ಆ ಮೇಲೆ ಚವ್ಹಾಣರು ಹೇಳಿದರು.

*

ಮೇ ೩೦ ಸಂಜೆಯೊಳಗೆ ಚಿತ್ರ ಸ್ಪಷ್ಟವಾಗತೊಡಗಿತ್ತು. ಸಂಸತ್ಸದಸ್ಯರು ವರಿಷ್ಠರ ನೊಗವನ್ನು ಕಳಚಿ ಹಾಕುವುದು ಅಷ್ಟು ಸುಲಭವಲ್ಲೆಂದು ಬಂಡಾಯಗಾರರಿಗೆ ಗೊತ್ತಾಯಿತು. ಪೂರ್ವದ ಬಂಗಾಲ, ದಕ್ಷಿಣದ ಮೈಸೂರು, ಆಂಧ್ರ, ಮದ್ರಾಸುಗಳು, ಮತ್ತು ಮುಂಬಯಿ ನಗರ ಸಂಪೂರ್ಣವಾಗಿ ಸಿಂಡಿಕೇಟಿನ ಕೈಲಿದ್ದವು. ಅತುಲ್ಯ ಘೋಷ, ನಿಜಲಿಂಗಪ್ಪ, ಸಂಜೀವರೆಡ್ಡಿ, ಕಾಮರಾಜ ಇವರು ಆಯಾ ರಾಜ್ಯ ಕಾಂಗ್ರೆಸ್ಸುಗಳ ಅಪ್ರತಿಭಟಿತ ಪ್ರಭುಗಳಾಗಿದ್ದರು. ಇನ್ನೊಮ್ಮೆ ಚುನಾವಣೆಗೆ ನಿಲ್ಲುವ ಆಸೆಯುಳ್ಳವರಾರೂ ಅವರ ವಿರುದ್ಧ ಬಂಡಾಯವೇಳುವ ಸಾಧ್ಯತೆ ಇರಲಿಲ್ಲ. ಮಹಾರಾಷ್ಟ್ರ ಸಿಂಡಿಕೇಟಿನೊಡನೆ ಸೇರುವುದೆಂಬುದೂ ಸ್ಫುಟವೇ ಇತ್ತು. ಉತ್ತರ ಪ್ರದೇಶದ ಗುಪ್ತರು ಮುರಾರಜಿಯ ಮಿತ್ರರಿದ್ದರು ನಿಜ. ಆದರೆ ಲಾಲಬಹಾದೂರರೂ ಉತ್ತರ ಪ್ರದೇಶದವರೇ ತಾನೆ. ಬಿಹಾರಿನಲ್ಲಿ ಎರಡು ಬಣಗಳಿದ್ದವು. ಇಡೀ ರಾಜ್ಯದ ಬೆಂಬಲ ಮುರಾರಜಿಗೆ ಸಿಗುವ ಸಂಭವವಿರಲಿಲ್ಲ. ಕೆ. ಡಿ. ಮಾಲವೀಯರ ವಾಮ ಪಂಥೀಯರು ಮೊದಲೇನೋ ಮುರಾರಜಿಗೆ ಬೆಂಬಲವಿತ್ತಿದ್ದರು. ಆದರೆ ಈ ಗುಂಪು ಮುಂಚೆ ಇಂದಿರಾ ಗಾಂಧಿಯವರಿಗೆ, ಅವರು ನಿಲ್ಲುವುದಿಲ್ಲೆಂದಾದ ಮೇಲೆ ಮುರಾರಜಿ—ಶಾಸ್ತ್ರಿ ಬಿಕ್ಕಟ್ಟನ್ನು ತಪ್ಪಿಸಲು ನಂದಾ ಅವರಿಗೆ ತಮ್ಮ ಬೆಂಬಲವನ್ನು ಪಲ್ಲಟಿಸಿದರು. ಮಧ್ಯಪ್ರದೇಶದ ಡಿ. ಪಿ. ಮಿಶ್ರರು ಮುರಾರಜಿಯ ಮಿತ್ರರಾದರೂ ಕಾಂಗ್ರೆಸ್ ಬಿಟ್ಟು ಹೋಗಿ ಭವಿಷ್ಯ ಕೆಡಿಸಿಕೊಂಡಿದ್ದ ತಮಗೆ ತಿರುಗಿ ಬರಲು ನೆರವಾಗಿದ್ದ ಇಂದಿರಾ ಅವರನ್ನು ಮೀರಿಹೋಗುವಂತಿರಲಿಲ್ಲ. ಕೊನೆಯ ಗಳಿಗೆಯಲ್ಲಿ ಪ್ರತಿಯೊಬ್ಬರೂ ತಂತಮ್ಮ ಹಿತವನ್ನೇ ನೋಡಿಕೊಂಡರು.

ಇಷ್ಟನ್ನು ಸ್ಥಿರಪಡಿಸಿಕೊಂಡು ತಾ ೩೦ ಕ್ಕೆ ಪಾರ್ಲಿಮೆಂಟರಿ ಪಕ್ಷದ ಕಾರ್ಯ ಸಮಿತಿಯ ಸಭೆ ಸೇರಿಸಲಾಯಿತು. ಬಂಡಾಯದ ಕಾವು ತಗ್ಗಿತ್ತು. ಪಕ್ಷದ ಸಭೆ ಕರೆಯಬೇಕು, ಒಮ್ಮತದ ಚುನಾವಣೆ ಆಗಬೇಕು, ಕಾಂಗ್ರೆಸ್ ವರಿಷ್ಠರ ಸೂಚನೆ ಕೇಳಲು ಕಾಮರಾಜರ ಕಡೆ ಉಪನಾಯಕ ಕೆ. ಸಿ. ರೆಡ್ಡಿಯವರನ್ನು ಕಳಿಸಬೇಕು—ಎಂದು ನಿರ್ಣಯವಾಯಿತು. ಕಾಂಗ್ರೆಸ್ ವರಿಷ್ಠರ ಹಾಗು ರಾಜ್ಯ ಮುಖ್ಯ ಮಂತ್ರಿಗಳ ಶಕ್ತಿಯ ಅರಿವು ಪಾರ್ಲಿಮೆಂಟರಿ ಪಕ್ಷಕ್ಕೆ ಆಗ ಬಂದಿತ್ತು.

ಈಗ ಮುರಾರಜಿ ಗುಂಪಿಗೆ ಉಳಿದಿದ್ದ ಆಸೆ ಒಂದೇ. ಪಾರ್ಲಿಮೆಂಟರಿ ಪಕ್ಷದ ಸಭೆಯಲ್ಲಿ ಗುಪ್ತಮತದಾನವನ್ನು ಕೇಳಬೇಕು. ಅಂದರೆ ವರಿಷ್ಠರ ಭಯವಿಲ್ಲದೆ ಮತದಾನ ಮಾಡಿ ಸದಸ್ಯರು ತಮಗೆ ಬೆಂಬಲ ಕೊಡಬಹುದು. ಆದರೆ ಇದೂ ಫಲಕಾರಿಯಾಗದಂತೆ ಮುಂದೆ ವರಿಷ್ಠರು ಏರ್ಪಾಡು ಮಾಡಿದರು.

ಮುಂದಿನ ಕಥೆ ಬಹಳ ಇಲ್ಲ. ಕಾಂಗ್ರೆಸ್ ಕಾರ್ಯಕಾರಿ ಸಮಿತಿ, ಮುಖ್ಯ ಮಂತ್ರಿಗಳು, ಮತ್ತು ಕೇಂದ್ರ ಮಂತ್ರಿಗಳ ಸಂಯುಕ್ತ ಸಭೆ ಸೇರಿತು. ಒಬ್ಬಿಬ್ಬರು ಪಾರ್ಲಿಮೆಂಟರಿ ಪಕ್ಷಕ್ಕೆ ಸ್ವಾತಂತ್ರ್ಯ ಕೊಡಬೇಕೆಂದು ವಾದಿಸಿದರು. ಆದರೆ ಕೊನೆಗೆ ಕಾಂಗ್ರೆಸ್ ಅಧ್ಯಕ್ಷರು ಸಂಸತ್ ಕಾಂಗ್ರೆಸ್ ಸದಸ್ಯರನ್ನು ಪ್ರತ್ಯೇಕವಾಗಿ ಬರಮಾಡಿಕೊಂಡು ಹೆಚ್ಚಿನವರ ಬೆಂಬಲ ಯಾರಿಗಿದೆಯೆಂದು ಕಂಡುಹಿಡಿಯಬೇಕು, ಅಧಿಕ ಬೆಂಬ

ಲವುಳ್ಳವರಾರೆಂದು ಗೊತ್ತಾದ ಮೇಲೆ ಪಾರ್ಲಿಮೆಂಟರಿ ಪಕ್ಷದ ಸಭೆ ಸೇರಿಸಿ ಆ ಬೆಂಬಲವುಳ್ಳವನನ್ನು ಒಮ್ಮತದಿಂದ ಆರಿಸಬೇಕು — ಎಂದು ನಿರ್ಣಯವಾಯಿತು. ಅಂದರೆ ಕಾಮರಾಜರ ಕೈಲಿ ತುಂಬಳವನ್ನೂ ಕಡುಗೋಲನ್ನೂ ಕೊಡಲಾಯಿತು.

ಕಾಮರಾಜರು ಕಾಣಬೇಕಾದವರನ್ನೆಲ್ಲ ಬರಮಾಡಿಕೊಂಡರು. ಲಾಲಬಹಾದ್ದೂರರಿಗೇ ಬೆಂಬಲವಿದೆಯೆಂದು ಕಂಡುಕೊಂಡರು. ಮುರಾರಜಿಗೆ ತಾವು ಸೋತೆವೆಂದು ಖಚಿತವಾಗಿ ಹೋಗಿತ್ತು. ಕೊನೆಗೆ ಕಾಮರಾಜರು ಮುರಾರಜಿಯನ್ನು ಕರೆಸಿ "ಲಾಲಬಹಾದುರ" ಎಂದಷ್ಟೇ ಹೇಳಿದರು!

ಸೋತ ಜಟ್ಟಿ ಜೂನ್ ೨ರಂದು ಪಕ್ಷದ ಸಭೆಯಲ್ಲಿ ಗೆದ್ದ ಜಟ್ಟಿಯ ಹೆಸರನ್ನು ತಾವೇ ನಾಯಕತ್ವಕ್ಕೆ ಸೂಚಿಸುವುದಾಗಿ ಮುಂದೆ ಬಂದರು. ಆದರೆ ಆ ಗೌರವವೂ ಅವರಿಗೆ ಸಿಗಲಿಲ್ಲ. ನಂದಾಗೇ ಅದು ಲಭಿಸಿತು.

ಲಾಲ ಬಹಾದುರರು ಅವಿರೋಧವಾಗಿ ಆಯ್ಕೆ ಹೊಂದಿದರು.

•

ಆದರೆ ಇದೆಲ್ಲ ಸರಿಯೇ? ಪಾರ್ಲಿಮೆಂಟರಿ ಪಕ್ಷಕ್ಕೆ ಸ್ವಾತಂತ್ರ್ಯ ಕೊಡದ ವರಿಷ್ಠರು ತಮ್ಮ ಇಚ್ಛೆಯನ್ನು ಹೇರಬೇಕೆ? ಈ ಪ್ರಶ್ನೆಯನ್ನು ಬ್ರಿಟನರು ಚರ್ಚಿಸಿದ್ದಾರೆ.

ಇದರಲ್ಲಿ ತಪ್ಪೇನೂ ಇಲ್ಲವೆಂದು ಅವರ ಅಭಿಪ್ರಾಯ. ಭಾರತವೊಂದು ಸಂಯುಕ್ತ ರಾಜ್ಯ. ಸಂಸತ್ತು ಸಾರ್ವಭೌಮ ಸಂಸ್ಥೆಯಾದರೂ ರಾಷ್ಟ್ರ ಪ್ರಧಾನಿಯಾರಾಗುವರೆಂಬುದರಲ್ಲಿ ರಾಜ್ಯಗಳ ಆಸ್ಥೆ ನ್ಯಾಯವಾದದ್ದೇ. ಪ್ರಬಲ ನಾಯಕನ ಅಸ್ತಮಾನದ ನಂತರ ಅಧಿಕಾರವು ದಿಲ್ಲಿಯಿಂದ ರಾಜ್ಯ ಮುಖ್ಯಮಂತ್ರಿಗಳ ಕಡೆ ದೊಡ್ಡ ಪ್ರಮಾಣದಲ್ಲಿ ಹರಿದುದನ್ನು ಇದು ಸಂಕೇತಿಸುತ್ತದೆ. ಆದರೆ ಇದು ಅನಿವಾರ್ಯವಾಗಿತ್ತು.

ಸಿಂಡಿಕೇಟು ದೇಶದ ಹಿಂದೀತರ ಪ್ರಾಂತಗಳ ಪ್ರತಿನಿಧಿಯಾಗಿತ್ತು. ಮಹಾರಾಷ್ಟ್ರವನ್ನೂ ಸೇರಿಸಿಕೊಂಡು ಅದು ಹಿಂದೀತರ ಪ್ರಾಂತಗಳ ಹಕ್ಕು ಹಿತಗಳ ರಕ್ಷಣೆಗೆ ಹೆಣಗಿತು. ಎಸ್. ಕೆ. ಪಾಟೀಲರಂಥ ಒಬ್ಬಿಬ್ಬರು ಮುರಾರಜಿಯವರೊಡನೆ ತಮ್ಮ ಹಳೇ ಕಲಹದ ಬೆಲೆ ತುಕಾಯಿಸಿರಬಹುದು. ಮುರಾರಜಿಯ ದರ್ಪ, ಹಟವಾದ, ಇತರರ ಭಾವನೆಯನ್ನು ಲೆಕ್ಕಿಸದೆ ತನಗೆ ತೋಚಿದಂತೆ ಸಾಗುವ ಪ್ರವೃತ್ತಿ ಇವುಗಳಿಂದ ವಿರಕ್ತಿ ಹೊಂದಿ ಅವರ ಮೇಲೆ ತಿರುಗಿ ಬಿದ್ದವರೇ ಹೆಚ್ಚು. ಮಂತ್ರಿಯಾಗಿದ್ದಾಗ ಅವರು ಸಂಸತ್ತನ್ನೂ ಧಿಕ್ಕರಿಸಿ ಸಂಸತ್ತಿನಲ್ಲೇ ಮಾತಾಡಿ ವಿರೋಧಿಗಳನ್ನು ಬೆಚ್ಚಿಸಿಕೊಂಡಿದ್ದರು.

ಈ ಪ್ರಸಂಗದಿಂದ ಸ್ಪಷ್ಟವಾದ ಇನ್ನೊಂದು ಅಂಶವೆಂದರೆ ಕಾಂಗ್ರೆಸ್ಸಿನ ವರಿಷ್ಠರು ಇನ್ನೂ ಅಧಿಕಾರ ಉಳಿಸಿಕೊಂಡಿದ್ದಾರೆಂಬುದು. ಪ್ರದೇಶ ಕಾಂಗ್ರೆಸ್ಸುಗಳ ಮೇಲೆ ಹಿಡಿತವಿಟ್ಟ ಮುಖ್ಯಮಂತ್ರಿಗಳ ಸಹಾಯದಿಂದ ಅವರು ಸಂಸತ್ತಿನ ಮೇಲೆ ಪರಿಣಾಮಕಾರಿ ಅಧಿಕಾರವನ್ನು ನಡೆಸಬಲ್ಲರು. ಒಂದು ಮಾತಿನಲ್ಲಿ ಇದು ಸಂಯುಕ್ತ ರಾಜ್ಯಪದ್ಧತಿ ವಿಜಯವಾಗಿತ್ತು.

ಬ್ರಿಟನರು ಇನ್ನೊಂದು ವಿಷಯದಲ್ಲಿ ಪ್ರಶಂಸೆ ವ್ಯಕ್ತಪಡಿಸಿದ್ದಾರೆ. ನೆಹರೂ ನಂತರ ದೇಶ ಏನಾಗುವುದೋ ಎಂದು ಹೇಳುತ್ತಿದ್ದವರ ಭಯವನ್ನು ಸುಳ್ಳುಗಳೆದು ಭಾರತದ ಮುಂದಾಳುಗಳು ಬಲು ಚಾತುರ್ಯದಿಂದ, ಶಾಂತಿಯಿಂದ, ಅನುಚಿತ ಅಸಹ್ಯ ದೃಶ್ಯಗಳಿಲ್ಲದೆ, ಒಂದೇ ವಾರದಲ್ಲಿ ಹೊಸ ನಾಯಕನನ್ನಾರಿಸಿದರು. ಭಾರತವು ಹೊಸ ಪ್ರಜಾಸತ್ತೆಯಾದರೂ ಬ್ರಿಟನ್ ಅಮೇರಿಕೆಗಳಿಗೆ ಕಡಿಮೆಯಿಲ್ಲದ ರಾಜಕೀಯ ಪಕ್ವತೆಯನ್ನೂ ಜಾಣ್ಮೆಯನ್ನೂ ಅದು ಪ್ರದರ್ಶಿಸಿದೆ. ಮುಂದೆ ನಡೆದ ಎರಡನೇ ಉತ್ತರಾಧಿಕಾರ ಸ್ಪರ್ಧೆ (ಶಾಸ್ತ್ರೀ ನಿಧನಾನಂತರ) ಯನ್ನೂ ಚರ್ಚಿಸಿ ಬ್ರಿಟನರು ಇದೇ ತೀರ್ಮಾನಕ್ಕೆ ಬಂದಿದ್ದಾರೆ. •

ಕೊಡಗಿನ ಸಾಹಿತಿ
ಕನ್ನಡ 'ಕವಿಶಿಷ್ಯ'ನಿಗೆ
ಶಿಷ್ಯನಾಗಿದ್ದಾಗಿನ ರಸನಿಮಿಷಗಳು

# ಪಂಜೆಯವರ ನೆನಪು

ಭಾರತೀಸುತ

ದಿವಂಗತ ಶ್ರೀ ಪಂಜೆಯವರ ಹೆಸರೆತ್ತಿದೊಡನೆ ನನ್ನ ಮನಸ್ಸು ನಲವತ್ತು ವರ್ಷಗಳ ಹಿಂದೆ ಓಡುವುದು. ನಾನು ಅಂದು ಹಳ್ಳಿಯ ಶಾಲೆಯೊಂದರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದ್ದೆ. ಮುಂದೆ ಹೈಸ್ಕೂಲನ್ನು ಸೇರಿ ಹೆಚ್ಚಿನ ವ್ಯಾಸಂಗಮಾಡಬೇಕೆಂಬ ಉತ್ಕಟ ಆಕಾಂಕ್ಷೆ ನನ್ನದು. ಆದರೆ ತಂದೆಯನ್ನು ಕಳೆದುಕೊಂಡ ನಾನು ಕುಚೇಲ ಸಂತಾನ. ಬಡತನದ ಬವಣೆಗೆ ಒಳಗಾಗಿ ನಮ್ಮ ಕುಟುಂಬ ನವೆಯುತ್ತಿತ್ತು. ಹೆಚ್ಚಿನ ಓದು ಕೈಗೆ ಸಿಗದ ಕನ್ನಡಿಯೊಳಗಿನ ಗಂಟು ಎಂದು ನನಗೆ ಅನಿಸಿತ್ತು. ಆ ವೇಳೆಯಲ್ಲಿ ನನ್ನ ಹತ್ತಿರದ ಬಂಧುಗಳೊಬ್ಬರು, "ಮಡಿಕೇರಿಯ ಸೆಂಟ್ರಲ್ ಹೈಸ್ಕೂಲಿನಲ್ಲಿ ಪಂಜೆ ಮಂಗೇಶರಾಯರು ಎಂಬುವವರು ಹೆಡ್ಮಾಸ್ಟರರಾಗಿದ್ದಾರೆ. ಅವರು ಬಡ ಹುಡುಗರಲ್ಲಿ ಅನುಕಂಪೆಯುಳ್ಳವರು. ನೀನು ಹೋಗಿ ಅವರನ್ನು ಕಾಣು. ಅವರು ನಿನಗೆ ಸ್ಕಾಲರ್‌ಶಿಪ್ಪು ಕೊಡಿಸಿಯಾರು" ಎಂದರು.

ನನ್ನ ಆಸೆಯ ಕುಡಿ ಚಿಗುರಿತು. ನಾನೊಬ್ಬನೇ ಮಡಿಕೇರಿಗೆ ಹೋದೆ.

"ಒಳಗೆ ಬಾ," ಎಂದರು ಪಂಜೆಯವರು.

ನಾನು ಕಚೇರಿಯೊಳಗೆ ಹೋಗಿ ಗುರುವರ್ಯರಿಗೆ ನಮಿಸಿ ನಿಂತೆ.

"ಏನು ಬಂದೆ?" ಮೆದುದನಿಯಲ್ಲಿ ಕೇಳಿದರು ಅವರು.

"ನಾನು ತಮ್ಮ ನೆರವನ್ನು ಯಾಚಿಸಲು ಬಂದೆ," ಎಂದು ನುಡಿದು ನಾನು ನನ್ನ ಬಡತನದ ಕತೆಯನ್ನು ಹೇಳಿ, ನನ್ನ ಹಂಬಲವನ್ನು ತೋಡಿಕೊಂಡೆ.

ಪಂಜೆಯವರು ಮಾತಾಡಲಿಲ್ಲ. ತಮ್ಮ ದೀಪ್ತಿಮಂತ ನೇತ್ರಗಳ ಪ್ರಭೆಯನ್ನು ನನ್ನ ಮೋರೆಯ ಮೇಲೆ ಎರಚಿ, ನನ್ನನ್ನೊಮ್ಮೆ ದಿಟ್ಟಿಸಿ ನೋಡಿದರು. ಹನ್ನೆರಡರ ಹರೆಯದ ಹಳ್ಳಿಯ ಪೋರ ತಮ್ಮ ಮುಂದೆ ನಿಂತು ದಿಟ್ಟತನದಿಂದ ಮಾತಾಡುವುದನ್ನು ಕಂಡು ಅವರಿಗೆ ಸೋಜಿಗವೆನಿಸಿರಬೇಕು. ಅವರು "ಶಾಲೆಗೆ ಸೇರಿ ಓದು ಕಲಿ ಮಗು. ಜಾಣನಿಗೆ ನನ್ನ



ನೆರವು ಇದ್ದೇ ಇರುವುದು," ಎಂದು ಆಶ್ವಾಸನೆ ನೀಡಿದರು.

ಪಂಜೆಯವರ ನುಡಿಯಲ್ಲಿ ಭರವಸೆಯನ್ನಿಟ್ಟು ನಾನು ಶಾಲೆಯನ್ನು ಸೇರಿದೆ. ಅವರಿತ್ತ ಆಶ್ವಾಸನೆ ಹುಸಿಯಾಗಲಿಲ್ಲ. ಅವರು ನನಗೊಂದು ಶಿಷ್ಯವೃತ್ತಿಯನ್ನು ದೊರಕಿಸಿಕೊಟ್ಟರು. ಈ ಅಪರಿಚಿತ ಪೋರನಿಗೆ ಅವರಿಂದ ಮರುಕವನ್ನು ಕಂಡು ನನಗೆ ಸೋಜಿಗವೆನಿಸಿತು. ಮುಂದೆ ಮೂವತ್ತು ವರ್ಷಗಳ ಅನಂತರ ಡಾಕ್ಟರ್ ಕಾರಂತರು ಸಂಪಾದಿಸಿದ "ಪಂಜೆಯವರ ನೆನಪು" ಎಂಬ ಹೊತ್ತಿಗೆಯಲ್ಲಿ ನನ್ನ ಗುರುವರ್ಯರ ಜೀವನದ ಕತೆಯನ್ನು ಓದಿದ ಮೇಲೆ ಅವರೇಕೆ ನನ್ನ ಮೇಲೆ ಮರುಕದ ಅಮೃತಜಲವನ್ನು ಮಳೆಗರೆದರು ಎಂಬುದು ನನಗೆ ಹೊಲಬಾಯಿತು. ಅವರು ಸಹ ಬಾಲ್ಯದಲ್ಲಿ ಬಡತನದಲ್ಲಿ ನವೆದು ವಿದ್ಯಾರ್ಜನೆಯ ಸಲುವಾಗಿ ಪರಿಪರಿಯ ಬನ್ನಬಟ್ಟಿದ್ದರು.

ಪಂಜೆಯವರ ಹೆಸರನ್ನು ನೆನೆದೊಡನೆ ಅವರ ಧೀರಗಂಭೀರ ಮೋಹನಾಕಾರವು ಚಿತ್ತಭಿತ್ತಿಯಲ್ಲಿ ಮೂಡುವುದು. ಸರಳತೆಯೇ ಮೈತಳೆದು ಬಂದು ನಿಂತಂತೆ ಇದ್ದರವರು. ಗೌರವರ್ಣದ ದುಂಡಗಿನ ಮುಖಮಂಡಲ ಅವರದು. ಆ ದುಂಡಗಿನ ಕಪೋಲಗಳ ಕೆಳ ಅಂಚಿನಲ್ಲಿ ಗೆರೆಗಳೆರಡು ಎದ್ದು ತೋರುತ್ತಿದ್ದುವು. ಕೂದಲಿಲ್ಲದ ಬೋಳುತಲೆ, ವಿಶಾಲವಾದ ಲಲಾಟ. ತುಟಿಯಿಂದ ಆಗಾಗ ಎಳೆನಗೆಯ ಮೊಗ್ಗುಗಳು ಉದುರುತ್ತಿದ್ದುವು. ವಯಸ್ಸಿನ ಭಾರದಿಂದ ಅವರ ಬೆನ್ನು ನಸು ಮುಂದಕ್ಕೆ ಬಾಗಿತ್ತು. ಅವರು ಉಡುತ್ತಿದ್ದುದು ಶುಭ್ರ ಧೌತಾಂಬರ. ತೊಡುತ್ತಿದ್ದುದು ಎದೆಮುಚ್ಚುವ ಕಪ್ಪು ವರ್ಣದ ಆಲ್ಪಾಕ ಕೋಟು. ಹೊರಗೆ ಬೀದಿಯಲ್ಲಿ ಸಂಚರಿಸುವಾಗ ತಲೆಯ ಮೇಲೆ ಜರಿಯಿಲ್ಲದ ಸಾದಾ ಬಿಳಿಮುಂಡಾಸು.

ತೊಡಗು ಬೆಡಗು ಆಡಂಬರಗಳ ತವರು. ಪಂಜೆಯವರ ಈ ಸರಳತನದ ಉಡುಗೆತೊಡುಗೆಗಳು ಜನಕ್ಕೆ ಮೆಚ್ಚುಗೆಯಾಗಲಿಲ್ಲವಂತೆ. ಜನರು ಪಂಜೆಯವರ ವಿಚಾರದಲ್ಲಿ ಸ್ವಲ್ಪ ಅಪ್ರೀತರಾದರಂತೆ. ಇದರಿಂದ ಅವರು ಸ್ವಲ್ಪ ಕಿರುಕುಳ ಅನುಭವಿಸಬೇಕಾಯಿತಂತೆ.

ಮೇಲಿನ ತರಗತಿಗಳ ಪಾಠಗಳನ್ನು ತೆಗೆದುಕೊಳ್ಳುವುದೆಂದರೆ ದೊಡ್ಡ ಗೌರವ ಎಂದು ತಿಳಿಯುವ ಅಧ್ಯಾಪಕರು ಹಲವರಿರುವರು. ಆದರೆ ಪಂಜೆಯವರು ಆ ಗುಂಪಿಗೆ ಸೇರಿದವರಲ್ಲ. ಅವರು ಹೈಸ್ಕೂಲಿನಲ್ಲಿ ಯಾವಾಗಲೂ ಅತಿ ಕೆಳಗಿನ ತರಗತಿಗಳನ್ನೇ ತೆಗೆದುಕೊಳ್ಳುತ್ತಿದ್ದರು.

ಒಮ್ಮೆ ನಾನು ಮೂರನೆಯ ಫಾರಮ್ಮಿನಲ್ಲಿದ್ದಾಗ ಒಂದು ದಿನ ನಮ್ಮ ಕನ್ನಡ ಅಧ್ಯಾಪಕರು ಬಂದಿರಲಿಲ್ಲ. ಪಂಜೆಯವರೇ ಕ್ಲಾಸಿನೊಳಗೆ ಹೊಕ್ಕರು. ಆ ವರುಷದ ನಮ್ಮ ಕನ್ನಡ ಪಠ್ಯಪುಸ್ತಕದಲ್ಲಿ ಸೀತಾವನವಾಸ ಪದ್ಯಭಾಗವಿತ್ತು. ಪಂಜೆಯವರು ಪಠ್ಯವನ್ನು ಎತ್ತಿಕೊಂಡರು. ಅವರ ದೃಷ್ಟಿ ಸೀತಾ ವನವಾಸದ ಕಡೆಗೆ ಹೊರಳಿತು. ಅವರು ಇನಿದನಿಯಲ್ಲಿ "ಇಳಿದು ರಥದಿಂದ ಮಂದಾಕಿನಿಗೆ ಪೊಡಮಟ್ಟು....." ಎಂದು ನಾಲ್ಕಾರು ಪದ್ಯಗಳನ್ನು ಓದಿದರು. ಒಂದು ಸಲವಲ್ಲ; ಮೂರು ನಾಲ್ಕು ಸಲ ಓದಿದರು. ಅನಂತರ ನಾಲ್ಕೆಂಟು ಮಂದಿ ವಿದ್ಯಾರ್ಥಿಗಳಿಂದ ಓದಿಸಿದರು. ಮರಳಿ ತಾವೂ ಓದಿದರು. ಅವರು ಓದಿಯಾದ ಮೇಲೆ ನಮಗೆ ಪದ್ಯಗಳ ವಿವರಣೆ ಅಗತ್ಯವೆಂದು ತೋರಲಿಲ್ಲ. ಆ ಕವಿತೆಯ ಭಾವ ತಾನಾಗಿಯೇ ನನಗೆ ಹೃದ್ಗತವಾಗಿ ಹೋಯಿತು. "ಕರುಣಾಳು ರಾಘವನಲಿ ತಪ್ಪಿಲ್ಲ" ಎಂಬ ಸೀತೆಯ ನುಡಿಯಲ್ಲಿ ಹುದುಗಿದ ವ್ಯಂಗ್ಯವನ್ನು ಗ್ರಹಿಸುವ ಸಾಮರ್ಥ್ಯವನ್ನು ಒದಗಿಸಿತ್ತು. ಲಕ್ಷ್ಮಣನು ಸೀತೆಯನ್ನು ಅರಣ್ಯದಲ್ಲಿ ಬಿಟ್ಟು ತೆರಳುವಾಗ ವನದೇವತೆಗಳಿಗೆ ಮಾಡಿದ ಆ ಪ್ರಾರ್ಥನೆ, "ಎಲೆ ವನಸ್ಥಂಗಳಿರ, ಕ್ರಿಮಿಕೀಟಗಳಿರ....." ಎಂಬ ಪದ್ಯವನ್ನು ಓದುವಾಗ ಪಂಜೆಯವರ ಕೊರಳು ನಡುಗಿತು. ಕರುಣಾರಸದ ಚಿಲುಮೆ ಅವರ ಎದೆಯಿಂದ ಸೆಲೆಯೊಡೆದಿತು. ನಮ್ಮ ಕಣ್ಣುಗಳಲ್ಲಿಯೂ ಹನಿಗಳು ನೆರೆದುವು. ಪಂಜೆಯವರ ಕೃಪೆಯಿಂದ ಲಕ್ಷ್ಮಣನ ಶೋಕದಲ್ಲಿ

ನಾವೂ ಪಾಲ್ಗೊಂಡೆವು.

ನಾನು ಎರಡನೆಯ ಫಾರಮ್ಮಿನಲ್ಲಿದ್ದಾಗ ಎಂದು ನನ್ನ ನೆನಪು. ಆರನೆಯ ಫಾರಮ್ಮಿನಲ್ಲಿರುವ ನನ್ನ ಗೆಳೆಯ ವಿದ್ಯಾರ್ಥಿಯೊಬ್ಬ ಕತೆ ಬರೆಯುತ್ತಿರುವನೆಂದು ನನಗೆ ತಿಳಿಯಿತು. ಅತನನ್ನು ಅನುಕರಿಸಿ ಕತೆ ಬರೆಯಬೇಕೆಂಬ ಹುಚ್ಚು ನನ್ನನ್ನು ಬಾಧಿಸಿತು. ಹಾಗೆಯೇ ಕುಳಿತು ಆರೆಂಟು ಪುಟಗಳಲ್ಲಿ ಕತೆಯೊಂದನ್ನು ಗೀಚಿ ಹಾಕಿದೆ. ಅದನ್ನು ತಿದ್ದಿ ಬರೆದು ನಮ್ಮ ಕನ್ನಡ ಅಧ್ಯಾಪಕರಿಗೆ ಕೊಟ್ಟೆ. ಆಮೇಲೆ ಅವರನ್ನು ಕಾಣಲು ಅಧ್ಯಾಪಕರ ಕೊಠಡಿಗೆ ಹೋದೆ. ಅಲ್ಲಿ ಬೇರೆ ಮೂರು ನಾಲ್ಕು ಮಂದಿ ಅಧ್ಯಾಪಕರು ಕುಳಿತಿದ್ದರು. ಕನ್ನಡ ಅಧ್ಯಾಪಕರು ನಾನು ಕೊಟ್ಟ ಕತೆಯನ್ನು ಬಿಚ್ಚಿದರು. ಅವರು ನಾನು ಬರೆದ ವಾಕ್ಯಗಳ ಅಡಿಯಲ್ಲಿ ಅಲ್ಲಲ್ಲಿ ಕೆಂಪು ಗೆರೆಗಳನ್ನು ಬರೆದಿದ್ದರು. ಅವರು ಅಲ್ಲಲ್ಲಿ ಓದಿ ಹೇಳುತ್ತಾ, "ನೋಡು ಇಲ್ಲಿ ವ್ಯಾಕರಣ ತಪ್ಪು; ಇಲ್ಲಿ ಅಕ್ಷರ ತಪ್ಪಿದೆ; ಇಲ್ಲಿ ನೀನು ಕೊಟ್ಟ ಉಪಮಾನ ಅಸಂಬದ್ಧ" ಎಂದು ವಿಮರ್ಶೆಯ ದಂಡವನ್ನೆತ್ತಿ ನನ್ನ ಮೇಲೆ ಬೀಸಿದರು. ಉಳಿದ ಅಧ್ಯಾಪಕರು ನನ್ನನ್ನು ನೋಡಿ ನಕ್ಕರು, ನಾಚಿಕೆಯಿಂದ ನನ್ನ ಮೈಯೆಲ್ಲ ಬೆವರಿ ಹೋಯಿತು. ಕನ್ನಡ ಅಧ್ಯಾಪಕರ ಮಾತುಗಳನ್ನು ಕೇಳಿದಮೇಲೆ "ಕಥೆ ಬರೆಯುವೆನೆಂದು ಲೇಖನಿಯನ್ನು ಹಿಡಿಯುವುದೇ ಒಂದು ಮಹಾಪರಾಧ" ಎಂದು ನನಗೆ ಅನಿಸಿತು.

ನಾನು ಪೆಚ್ಚುಮೋರೆ ಹಾಕಿಕೊಂಡು ಕ್ಲಾಸಿನೊಳಗೆ ಬಂದು ಕುಳಿತೆ. ನನ್ನ ಪಕ್ಕದಲ್ಲಿದ್ದ ಹುಡುಗ ನನ್ನ ಕೈಯಲ್ಲಿದ್ದ ಹಾಳೆಗಳನ್ನು ಕಸಿದುಕೊಂಡು ಓದತೊಡಗಿದ. ಅನಿತರಲ್ಲಿ ಪಂಜೆಯವರು ದಿಗ್ಗನೆ ಕ್ಲಾಸಿನೊಳಗೆ ನುಗ್ಗಿದರು. ಅಂದು ನಮ್ಮ ಚರಿತ್ರೆಯ ಅಧ್ಯಾಪಕರು ಬಂದಿರಲಿಲ್ಲ. ಗುರುವರ್ಯರು ಚರಿತ್ರೆಗೆ ಸಂಬಂಧಿಸಿದ ಯಾವುದೋ ಒಂದು ವಿಷಯವನ್ನು ಎತ್ತಿಕೊಂಡು ಪಾಠವನ್ನು ಆರಂಭಿಸಿದರು. ಆದರೆ ನನ್ನ ಗೆಳೆಯ ಪಾಠದ ಕಡೆಗೆ ಗಮನವನ್ನು ಕೊಡದೆ ಓದುವುದರಲ್ಲಿಯೇ ಮಗ್ನನಾಗಿದ್ದ. ಪಂಜೆಯವರ ಚುರುಕು ಕಣ್ಣುಗಳಿಗೆ ಇದು ಗೋಚರಿಸದೆ ಇರಲಿಲ್ಲ. ಅವರು ಹತ್ತಿರ ಬಂದು, "ಮಗು, ಅದೇನು ಓದುತ್ತಿರುವೆ?" ಎಂದು ಕೇಳಿದರು.

ನನ್ನ ಗೆಳೆಯ ಬೆಚ್ಚಿಬಿದ್ದು ಎದ್ದು ನಿಂತ. "ಕತೆ ಸಾರ್" ಎಂದು ತೊದಲು ದನಿಯಲ್ಲಿ ಉಲಿದ.

"ಕತೆ! ಯಾವ ಕತೆ ಅದು?" ಪಂಜೆಯವರು ವಿಸ್ಮಯದ ದನಿಯನ್ನೆತ್ತಿದರು.

"ಇವನು ಬರೆದ ಕತೆ ಸಾರ್" ಆ ಗೆಳೆಯ ನನ್ನ ಕಡೆ ಬೆರಳು ತೋರಿಸಿದ.

"ಇಲ್ಲಿ ಕೊಡು" ಗುರುವರ್ಯರು ಗೆಳೆಯನ ಕೈಯಿಂದ ಹಾಳೆಗಳನ್ನು ತೆಗೆದುಕೊಂಡರು. ಅವುಗಳ ಮೇಲೆ ಒಮ್ಮೆ ಕಣ್ಣೋಡಿಸಿದರು.

ನನ್ನ ಎದೆ ಡಬಡಬನೆ ಹಾರಿತು. ನಾನು ತಲೆತಗ್ಗಿಸಿ ಕುಳಿತೆ.

ಪಂಜೆಯವರು ಪಾಠವನ್ನು ಮುಂದುವರಿಸಿದರು. ಪಾಠ ಮುಗಿಸಿ ತರಗತಿಯಿಂದ ಹೊರಡುವಾಗ ಅವರು ನನ್ನ ಕಡೆ ದೃಷ್ಟಿ ಹೊರಳಿಸಿದರು. "ನೋಡು, ಶಾಲೆ ಮುಗಿದು ಮನೆಗೆ ಹೋಗುವ ಮುನ್ನ ನನ್ನ ಆಫೀಸಿಗೆ ಬಾ" ಎಂದು ಆಜ್ಞಾಪಿಸಿದರು.

ಈ ಅಣತಿಯನ್ನು ಕೇಳಿದಾಗ ನನಗೆ ನಡುಕ ಹುಟ್ಟಿತು, ಮೈ ಬೆವರಿತು. "ಶಾಲೆಯ ಹುಡುಗ ಕತೆ ಬರೆಯತೊಡಗುವುದು ಒಂದು ಅಪರಾಧವಾಗಿರಲೇಬೇಕು. ಯಾವ ಶಿಕ್ಷೆ ಕಾದಿದೆಯೋ! ನನ್ನ ಶಿಷ್ಯವೃತ್ತಿಯ ಮೇಲೆ ಅಡ್ಡಗೆರೆ ಎಳೆಯುವರೇನೋ!" ಎಂದು ನಾನು ತುಂಬಾ ಭೀತನಾದೆ.

ಶಾಲೆ ಬಿಟ್ಟ ಮೇಲೆ ನಾನು ಹೆಡ್ಮಾಸ್ಟರರ ಕಚೇರಿಗೆ ತಲ್ಲಣಿಸುತ್ತಾ ಹೋದೆ.

"ಮಗು, ನೀನು ಬರೆದ ಕತೆಯನ್ನು ನಾನು ಓದಿದೆ." ಗುರುವರ್ಯರು ಮೆಲುದನಿಯಲ್ಲಿ ಉದ್ಗಾರವೆತ್ತಿದರು. ನನ್ನ ಭಯ ದೂರವಾದ ಮೇಲೆ "ತುಂಬಾ ತಪ್ಪುಗಳಿವೆ ಎಂಬುದು ನಿಜ. ಆದರೆ......"

ನಾನು ಪಡಿಯಲಿಲ್ಲ.

"ಆದರೆ ನೀನು ಬರೆಯಬಲ್ಲೆ," ಗುರು

ವರ್ಯರು ಉಸುರಿದರು: "ನಿನ್ನಲ್ಲಿ ಬರೆಯುವ ಶಕ್ತಿ ಇದೆ."

ನನಗೆ ಧೈರ್ಯ ಬಂತು. "ಏನೋ ಬರೆಯಬೇಕೆಂಬ ಆಸೆ ಆಯಿತು. ಹಾಗೆ ಬರೆದೆ" ಎಂದು ನಾನು ನುಡಿದೆ.

"ಬರೆ, ನೀನು ಬರೆಯುವುದನ್ನು ನಿಲ್ಲಿಸಬೇಡ" ಅವರ ಕೊರಳಿಂದ ಪ್ರೋತ್ಸಾಹದ ವಚನ ಹೊಮ್ಮಿತು.

ಆ ಮೇಲೆ ಅವರು ನಾನು ಓದುತ್ತಿರುವ ಕನ್ನಡ ಪುಸ್ತಕಗಳು ಯಾವ ಬಗೆಯವು ಎಂದು ವಿಚಾರಿಸಿದರು. ನಾನು ಆ ದಿನಗಳಲ್ಲಿ ವಿದ್ಯಾರ್ಥಿಗಳು ಹೆಚ್ಚಾಗಿ ಓದುತ್ತಿದ್ದ ಗಳಗನಾಥ ಮತ್ತು ವೆಂಕಟಾಚಾರ್ಯರ ಕೆಲವು ಕಾದಂಬರಿಗಳ ಹೆಸರು ಹೇಳಿದೆ.

"ನೋಡು ಮಗು. ನೀನು ಶ್ರೀನಿವಾಸ, ಎಮ್. ಎನ್. ಕಾಮತರು ಬರೆದ ಕತೆಗಳನ್ನು ಓದಬೇಕು. ಓದಿ ಸರಿಯಾಗಿ ಅರ್ಥ ಮಾಡಿಕೊಳ್ಳಬೇಕು," ಎಂದು ಹೇಳಿ ಅವರು ನನಗೆ ಹಲವು ಸಲಹೆಗಳನ್ನು ನೀಡಿದರು.

"ನೀನು ಬರೆಯ ಬಲ್ಲೆ; ಬರೆಯುವ ಶಕ್ತಿ ನಿನಗಿದೆ," ಎಂಬ ಗುರುವರ್ಯರ ಆ ಎರಡು ನುಡಿಗಳು ನನ್ನಲ್ಲಿ ಉತ್ಸಾಹವನ್ನು ತುಂಬಿದುವು. ಇಂದಿಗೂ ಬರವಣಿಗೆಯ ವಿಚಾರದಲ್ಲಿ ನನ್ನನ್ನು ಆಲಸ್ಯ ಮತ್ತು ನಿರಾಶೆಗಳು ಮುಸುಕಿದಾಗ, ಅವರು ಅಂದಾಡಿದ ಆ ಎರಡು ವಚನ ಮೌಕ್ತಿಕಗಳ ಪ್ರಭೆಯು ನನ್ನನ್ನು ಆವರಿಸಿದ ಆಲಸ್ಯದ ತಮವನ್ನು ಸೀಳಿ, ಮುಂದೆಸಾಗಲು, ಪ್ರಚೋದನೆಯನ್ನು ನೀಡುವುದು.

ಮುಂದೊಂದು ದಿನ ಹೆಡ್ಮಾಸ್ತರರಿಂದ ನನ್ನ ತರಗತಿಯ ಅಧ್ಯಾಪಕರಿಗೊಂದು ಚೀಟಿ ಬಂತು, ಗಂಟೆಯಾದ ಮೇಲೆ ನನ್ನನ್ನು ಆಫೀಸಿಗೆ ಕಳುಹಬೇಕೆಂದು. ಅಂಜಿಕೆಯಿಂದ ಕತ್ತರಿಸುತ್ತಾ ನಾನು ಅವರ ಆಫೀಸಿಗೆ ಹೋದೆ.

"ಇಲ್ಲಿ ಬಾ," ಗುರುವರ್ಯರು ನನ್ನನ್ನು ತಮ್ಮ ಕಚೇರಿಯೊಳಗೆ ಕರೆದು ಹೇಳಿದರು: "ಕೊಡಗಿನ ಉಪಾಧ್ಯಾಯರು 'ವಿದ್ಯಾರ್ಥಿ' ಎಂಬ ತ್ರೈಮಾಸಿಕ ಪತ್ರಿಕೆಯೊಂದನ್ನು ನಡೆಸುತ್ತಿದ್ದಾರೆ. ನೀನು ಆ ಪತ್ರಿಕೆಗೆ ಒಂದು ಕತೆಯನ್ನು ಬರೆದುಕೊಡಬೇಕು. ಕತೆಯನ್ನು ಬರೆದು ನನಗೆ ತಂದುಕೊಡು."

"ನನ್ನ ಕತೆ ಪತ್ರಿಕೆಯಲ್ಲಿ ಅಚ್ಚು ಹಾಕುವಷ್ಟು ಚೆನ್ನಾಗಿ ಇರುತ್ತದೋ ಇಲ್ಲವೋ!" ನಾನು ಅಳುಕು ದನಿಯನ್ನು ಎತ್ತಿದೆ.

"ಮೊದಲು ಬರೆದು ತಾ."

ನಾನು ಗುರುವರ್ಯರ ಆಜ್ಞೆಯನ್ನು ನೆತ್ತಿಯಲ್ಲಿ ಹೊತ್ತೆ. ಚರಿತ್ರೆಯಲ್ಲಿ ಬರುವ ಸಂಯುಕ್ತೆಯ ವೃತ್ತಾಂತವನ್ನೇ ಆಧಾರವಾಗಿ ಇಟ್ಟುಕೊಂಡು ಕತೆಯೊಂದನ್ನು ಹೊಸೆದೆ. ಆ ಕತೆಯನ್ನು ಕೊಂಡು ಹೋಗಿ ನಾನು ಗುರುವರ್ಯರ ಮುಂದಿರಿಸಿದೆ. ಅವರು ಕತೆಯನ್ನು ಓದಿನೋಡಿದರು. ಓದಿ ಮುಗಿಸಿದ ಮೇಲೆ ನನ್ನ ಕಡೆಗೆ ಕಣ್ಣು ಹೊರಳಿಸಿ, "ಕತೆಯ ವಸ್ತುವೇನೋ ಚೆನ್ನಾಗಿದೆ. ಆದರೆ ಇಲ್ಲಿ ನೋಡು. ನೀನು ತಪ್ಪಿದ್ದೀಯೆ. ಇಗೋ, ಇಲ್ಲಿ ಎಡವಿದ್ದೀಯೆ— ನೀನು ವರ್ಣಿಸಿದ ಈ ಘಟನೆ ಅಸಹಜ. ಕತೆಯನ್ನು ಓದಿ ನೋಡಿ ತಿದ್ದಿ ತಾ," ಎಂದು ಸಲಹೆ ನೀಡಿದರು.

ಗುರುವರ್ಯರ ಸಲಹೆಯಂತೆ ಕತೆಯನ್ನು ತಿದ್ದಿ ಬರೆದು ಅವರಲ್ಲಿಗೆ ಕೊಂಡುಹೋದೆ. ಆದರೆ ಆ ಬರಹವನ್ನು ನೋಡಿ ಅವರು ತೃಪ್ತರಾಗಲಿಲ್ಲ. ಆಗಾಗ ಹೊಸ ಹೊಸ ಸೂಚನೆಗಳನ್ನು ನೀಡಿ ಕತೆಯನ್ನು ತಿದ್ದಿ ಬರೆಯಿಸಿದರು. ಅವರು "ಬರೆಯುವವನು ಆತುರಪಡಬಾರದು; ಬೇಸರ ಪಡಬಾರದು; ಮರಳಿ ಮರಳಿ ಯತ್ನವನ್ನು ಮುಂದುವರಿಸಬೇಕು." ಎಂಬ ಮಂತ್ರವನ್ನು ಉಪದೇಶಿಸಿದರು. ಮುಂದೆ ಸಾಹಿತ್ಯ ಲೋಕದಲ್ಲಿ ನಾನು ಅಡಿಯಿಡತೊಡಗಿದಾಗ ಈ ಮಂತ್ರವೇ ನನಗೆ ಊರುಗೋಲಾಯಿತು.

ಕೊನೆಗೆ 'ವಿದ್ಯಾರ್ಥಿ' ಪತ್ರಿಕೆಯಲ್ಲಿ ನನ್ನ ಕತೆ ಅಚ್ಚಾಗಿ ಬಂತು. ಅದೇ ಅಚ್ಚಾದ ನನ್ನ ಮೊದಲನೆ ಕತೆ. ಆ ಕತೆ ಅಚ್ಚಾದುದನ್ನು ಕಂಡಾಗ ನನ್ನ ಸಂತೋಷವನೇನು! ಸಡಗರವೇನು!

ಮುಂದಿನ ವರ್ಷವೆಂದು ತೋರುತ್ತದೆ. ಅಂದು ನಮ್ಮ ಶಾಲೆಯ ಭಾಷಣ ಸ್ಪರ್ಧೆಗಳು ನಡೆಯುವ ದಿನ. ಏನೋ ಕೆಲಸಕ್ಕೆಂದು

ಆಫೀಸಿನಿಂದ ಸಭಾಂಗಣಕ್ಕೆ ಬಂದ ಗುರುವರ್ಯರು ನನ್ನನ್ನು ಕಂಡು "ಇಲ್ಲಿ ಬಾ," ಎಂದು ಕರೆದರು.

ನಾನು ಓಡಿ ಹೋಗಿ ಅವರ ಸಮೀಪದಲ್ಲಿ ತಲೆಬಾಗಿ ನಿಂತೆ. "ನೀನು ಭಾಷಣ ಸ್ಪರ್ಧೆಗೆ ಹೆಸರು ಕೊಟ್ಟಿದ್ದೀಯಾ?" ಎಂದು ಕೇಳಿದರು.

"ಇಲ್ಲ," ಎಂದೆ ನಾನು.

"ಏಕೆ ಕೊಡಲಿಲ್ಲ?" ಪಂಜೆಯವರು ಗುಡುಗಿದರು:

"ಬೇಗ ಹೋಗಿ ಹೆಸರು ಕೊಡು."

"ಸಭೆಗಳಲ್ಲಿ ಮಾತಾಡಲು ನನಗೆ ತಿಳಿಯದು."

"ನಿನಗೆ ನಡೆಯಲು, ಓಡಾಡಲು ಯಾರಾದರೂ ಕಲಿಸಿಕೊಟ್ಟರೇ?" ಎಂದು ನುಡಿದ ಗುರುವರ್ಯರು ನನ್ನನ್ನು ಭಾಷಣ ಸ್ಪರ್ಧೆಯ ವ್ಯವಸ್ಥಾಪಕರಾದ ಅಧ್ಯಾಪಕರಲ್ಲಿಗೆ ಕರೆದುಕೊಂಡು ಹೋದರು. ಆ ಅಧ್ಯಾಪಕರಿಗೆ "ಕನ್ನಡ ಭಾಷಣಸ್ಪರ್ಧೆಯಲ್ಲಿ ಈ ಹುಡುಗ ಮಾತಾಡುತ್ತಾನೆ. ಈತನ ಹೆಸರು ಬರೆದುಕೊಳ್ಳಿ" ಎಂದು ಆಜ್ಞೆ ಮಾಡಿದರು.

ನಾನು ಗುರುವರ್ಯರ ಆಜ್ಞೆಗೆ ಕಟ್ಟುಬಿದ್ದು ಅಂದಿನ ಭಾಷಣಸ್ಪರ್ಧೆಯಲ್ಲಿ ಮಾತಾಡಿದೆ. ನನಗೆ ಬಹುಮಾನವೇನೂ ದೊರೆಯಲಿಲ್ಲ. ಆದರೆ ಅಂದಿನಿಂದ ಸಭೆಗಳಲ್ಲಿ ಮಾತಾಡಲು ನನ್ನ ಹೆಕ್ಕಳಿ ಬಿಟ್ಟಿತು. ಹತ್ತು ಜನರ ಮುಂದೆ ಮಾತಾಡುವ ಧೈರ್ಯ ನನಗೆ ಬಂತು. ನಾನು ಉತ್ತಮ ವಾಗ್ಮಿ ಎಂದು ಹೆಸರು ಪಡೆಯದಿದ್ದರೂ ತುಂಬಿದ ಸಭೆಗಳಲ್ಲಿ ನನ್ನ ಅಭಿಪ್ರಾಯವನ್ನು ಮಂಡಿಸುವ ಎದೆಗಾರಿಕೆಯನ್ನು ಗಳಿಸಿಕೊಂಡೆ.

ನನ್ನ ದುರದೃಷ್ಟದಿಂದ ಪಂಜೆಯವರು ಹೆಚ್ಚು ಕಾಲ ಸೆಂಟ್ರಲ್ ಹೈಸ್ಕೂಲಿನ ಪ್ರಧಾನ ಅಧ್ಯಾಪಕರಾಗಿ ಉಳಿಯಲಿಲ್ಲ. ಮುಂದಿನ ವರ್ಷವೇ ಅವರು ಉದ್ಯೋಗದಿಂದ ನಿವೃತ್ತರಾದರು. ಅವರು ಮಡಿಕೇರಿಯಿಂದ ಮಂಗಳೂರಿಗೆ ತೆರಳುವ ಮುನ್ನ ಅವರನ್ನು ಬೀಳ್ಕೊಡಲೆಂದು ನಾವು ಕೆಲವರು ಹೋಗಿದ್ದೆವು. ಆಗ ಅವರು ನನ್ನನ್ನು ನೋಡಿ "ಮಗು, ನೀನು ಬರೆಯುವುದನ್ನು ಬಿಡಬೇಡ. ಮರಳಿ ಯತ್ನ ಮಾಡು. ನೀನು ಕತೆಗಾರನಾಗುವೆ." ಎಂದು ಉಸುರಿದರು.

ಅದೇ ಗುರುವರ್ಯರು ನನಗಿತ್ತ ಕೊನೆಯ ಹರಕೆ!

ಪಂಜೆಯವರು ಸೆಂಟ್ರಲ್ ಹೈಸ್ಕೂಲಿನ ಹೆಡ್ಮಾಸ್ತರರಾಗುವ ಮುನ್ನ ಒಂದೆರಡು ವರ್ಷ ಕೊಡಗಿನ ಶಾಲೆಗಳ ಅಸಿಸ್ಟೆಂಟ್ ಇನ್ಸ್ಪೆಕ್ಟರರಾಗಿದ್ದರು. ಅವರು ಇನ್ಸ್ಪೆಕ್ಟರರಾಗಿದ್ದಾಗ ಕೆಲಸ ಮಾಡುತ್ತಿದ್ದ ಅಧ್ಯಾಪಕರಲ್ಲಿ ಕೆಲವರು ಮುಂದೆ ನನ್ನ ಸಹೋದ್ಯೋಗಿಗಳಾದರು. ಈ ಅಧ್ಯಾಪಕರು ಪಂಜೆಯವರ ಶಾಲಾ ಪರಿಶೋಧನೆಗಳ ಬಗ್ಗೆ ಅನೇಕ ಕತೆಗಳನ್ನು ಹೇಳಿದ್ದಾರೆ. ಅಂತಹ ಕತೆಗಳಲ್ಲಿ ಒಂದು ಈಗ ನೆನಪಾಗುತ್ತದೆ.

ಅಸಹಕಾರ ಆಂದೋಲನದ ಬಿರುಗಾಳಿ ಬೀಸುತ್ತಿದ್ದ ದಿನಗಳವು. ಪಂಜೆಯವರು ಪೊನ್ನಂಪೇಟೆಯ ಶಾಲೆಯ ಪರಿಶೋಧನೆಗೆ ಹೋಗಿದ್ದರು. ಶಾಲೆಯ ಪರಿಶೋಧನೆ ಮುಗಿದ ಮೇಲೆ ಅವರು ಶಾಲೆಯ ಅಧ್ಯಾಪಕರೊಡನೆ ಲೋಕಾಭಿರಾಮವಾಗಿ ಸರಸ ಸಲ್ಲಾಪವನ್ನು ತೊಡಗಿದರು. ಅವರ ಸಂಭಾಷಣೆ ಅಸಹಕಾರ ಆಂದೋಲನದ ಕಡೆಗೆ ಹೊರಳಿತು. ಆಗ ಅಧ್ಯಾಪಕರು "ಗಾಂಧಿ...." ಎಂದು ತಾತ್ಸಾರದ ದನಿಯಲ್ಲಿ ಮಾತು ಪ್ರಾರಂಭಿಸಿದರಂತೆ.

ಆ ನುಡಿಯನ್ನು ಕೇಳಿದಾಗ ಎಂದೂ ಮುನಿಯದಿದ್ದ ಪಂಜೆಯವರು ಸಿಡಿಲ ಮರಿಯಾದರು. ಅವರು, "ಏನು ಹೇಳಿದೆ? ಗಾಂಧಿ ಗಾಂಧಿ ಎಂದು ಹೇಳುತ್ತಿರುವಿಯಲ್ಲ! ಮಹಾತ್ಮಾ ಗಾಂಧಿ ಎಂದು ಹೇಳು. ಬಿದ್ದ ಭಾರತವನ್ನು ಎತ್ತಲು ಬಂದವರು ಅವರು!" ಎಂದು ಗುಡುಗಿದರಂತೆ.

ಪಂಜೆಯವರು ಬ್ರಿಟಿಷ ಸರಕಾರದ ಸೇವೆಯಲ್ಲಿ ತಮ್ಮ ದೇಹವನ್ನು ತೇದಿದ್ದರೂ, ಅವರ ಅಂತರಂಗದಲ್ಲಿ ಉಜ್ವಲ ದೇಶಾಭಿಮಾನ ದೇದೀಪ್ಯಮಾನವಾಗಿತ್ತು. ಅಂತಹ ದೇಶಭಕ್ತಿಯ ದಿವ್ಯ ದೀಧಿತಿ ಅವರ ಹೃದಯಾಂತರಾಳದಲ್ಲಿ ಬೆಳಗದಿದ್ದರೆ, "ಭಾರತ ಜನನಿ,"

"ಏಳು ಕೋಳಡಿಕೆಯು ಬಿಟ್ಟು ಎದ್ದೇಳು," "ಉಳ್ಳಯ್ಯಾ, ದಯೆಗೊಳ್ಳಯ್ಯಾ?" ಎಂಬ ಉಜ್ವಲ ರಾಷ್ಟ್ರಾಭಿಮಾನದ ಗೀತೆಗಳು ಹೇಗೆ ಹೊರಹೊಮ್ಮುತಿದ್ದುವು?

ಅಂದು ಪಾಶ್ಚಾತ್ಯ ಸಂಸ್ಕೃತಿ ಮತ್ತು ನಾಗರಿಕತೆಗಳ ಪ್ರಭಾವಕ್ಕೆ ಒಳಗಾದ ಕೊಡಗು ಪಂಜೆಯವರ ಹಿರಿಮೆಯನ್ನು ಗುರುತಿಸಲಿಲ್ಲ. ಆದರೆ ಪಂಜೆಯವರು ತಮಗೆ ಸೇವಾಕಾಶವನ್ನು ಒದಗಿಸಿಕೊಟ್ಟ, ಅರೆಂಟು ವರ್ಷಗಳ ಕಾಲ ಗಾಳಿ ಬೆಳಕು ನೀರುಗಳನ್ನಿತ್ತು ಪೋಷಿಸಿದ ಕೊಡಗನ್ನು ಮರೆಯಲಿಲ್ಲ. "ಹುತ್ತರಿ ಹಾಡು" ಎಂಬ ಅವರ ಗೀತೆಯನ್ನು ಹಾಡಿ ಅವರು ಕೊಡಗಿಗೆ ತಮ್ಮ ಋಣವನ್ನು ಸಲ್ಲಿಸಿದರು.

ಅಂದು ಪಂಜೆಯವರು ನಮ್ಮ ಹೆಡ್ಮಾಸ್ಟರರಾಗಿದ್ದಾರೆಂದು ಮಾತ್ರ ಅರಿತಿದ್ದೆ. ಅವರ ಅಗಾಧ ವಿದ್ವತ್ತೆಯನ್ನಾಗಲೀ, ಸಹೃದಯತೆಯನ್ನಾಗಲೀ, ಅವರು ಆಧುನಿಕ ಕನ್ನಡ ಸಾಹಿತ್ಯದ ಆಚಾರ್ಯ ಪುರುಷರೆಂಬುದನ್ನಾಗಲೀ ನಾನು ಅರಿಯೆನು. ಈಗ ಅವರ ಪಾಂಡಿತ್ಯ, ಉನ್ನತಿಕೆಗಳು ನನಗೆ ಹೊಳಬಾಗಿದೆ. ಅಂತಹ ಮಹಿಮಾವಂತ ಗುರುವರ್ಯರ ಅಡಿದಾವರೆಯ ಸನ್ನಿಧಿಯಲ್ಲಿ ಕಳೆದೆನಲ್ಲಾ ಎಂಬ ಧನ್ಯತೆಯ ಭಾವ ಅವರನ್ನು ನೆನೆದಾಗಲೆಲ್ಲ ನನ್ನ ಎದೆಯಲ್ಲಿ ತುಂಬುವುದು. *



## ಅನುಕೂಲ ಶಾಸ್ತ್ರ

ಗುರುಗಳು ಗಂಭೀರವಾಗಿ ಕುಳಿತು ಅಧ್ಯಯನ ನಡೆಸುತ್ತಿದ್ದರು. ಹಳ್ಳಿಗನೊಬ್ಬ ಸಮಸ್ಯೆಯ ಪರಿಹಾರಕ್ಕಾಗಿ ಬಂದನು. ಆತನೆಂದ: "ಒಂದು ಹೋರಿ ಇನ್ನೊಂದನ್ನು ತಿವಿದು ಕೊಂದಿತು. ಸತ್ತ ಹೋರಿಯ ಮಾಲಕನಿಗೆ ಪರಿಹಾರ ಸಿಗಬಹುದೆ ಸ್ವಾಮಿ?" ಗುರುಗಳು ತೀಕ್ಷ್ಣಮತಿ. ಈಗ ಬಂದವನೆ ಕೊಂದ ಹೋರಿಯ ಮಾಲಕನೆಂದು ಸಂಶಯಪಟ್ಟರು.

"ನೀನು ಯಾರು?" ಗುರುಗಳು ಕೇಳಿದರು.

"ನಾನು ಹಳ್ಳಿಯ ಗಾಣಿಗೆ ಸ್ವಾಮಿ" ಆತನ ಉತ್ತರ. ಹಿಂಡಿ ತಿಂದು ಕೊಬ್ಬಿದ ಈತನ ಹೋರಿಯೆ ಕೊಂದಿರಬೇಕು. ಗುರುಗಳ ಸಂಶಯಕ್ಕೆ ಬಲ ಬಂದಿತು.

ಗುರುಗಳು ಹೀಗೆ ತೀರ್ಪು ನೀಡಿದರು: ಸತ್ತ ಹೋರಿಯ ಮಾಲಕನಿಗೆ ಕೊಂದ ಹೋರಿಯ ಮಾಲಕ ಒಂದು ಹೋರಿಯನ್ನು ತೆಗೆಸಿ ಕೊಡಬೇಕು; ಮತ್ತು ಹತ್ತು ರೂಪಾಯಿ ದಂಡವನ್ನೂ ಕೊಡಬೇಕು.

ಗಾಣಿಗ ಸಂತುಷ್ಟನಾಗಿ, "ಮಹಾಸ್ವಾಮಿ, ನನ್ನ ಹೋರಿಯನ್ನು ನಿಮ್ಮ ಹೋರಿ ಕೊಂದುಬಿಟ್ಟಿತು. ನನಗೆ ಪರಿಹಾರ ಸಿಗಬೇಕು" ಎಂದ.

ಗುರುಗಳು ಪುಸ್ತಕಗಳ ರಾಶಿಯನ್ನು ಅಡಿ ಮೇಲು ಮಾಡಿ ದೊಡ್ಡ ಗ್ರಂಥವನ್ನು ಎತ್ತಿಕೊಂಡು ಓದಿ ಹೀಗೆ ಹೇಳಿದರು "ಹುಟ್ಟಿದ ಮೇಲೆ ಸಾವು ನಿಶ್ಚಯ. ಜಗತ್ತು ನಶ್ವರ. ನಿನ್ನ ಎತ್ತು ಹೀಗೆ ಸಾಯಬೇಕೆಂದು ದೇವರ ಸಂಕಲ್ಪವಾಗಿತ್ತು. ಸತ್ತು ಹೋಯಿತು. ಅದಕ್ಕೆ ಪರಿಹಾರ ಕೊಡಲು ಮನುಷ್ಯ ಎಷ್ಟರವನು? ಎಲ್ಲ ದೇವರ ಚಿತ್ತ."

ಸಂ. — ಕಿರಣ

# ಸಂಚಿ ಹೊನ್ನಮ್ಮನ ಆದರ್ಶ

ಸಂಗ್ರಹ : ಜಿ. ಬಸವಯ್ಯ

ಸತಿಯರೊಲಿದು ಪರಸಿದುದೆಯನುಗ್ರಹ
ಖತಿಗೊಂಡು ನುಡಿದುದೆ ಶಾಪ.

*

ಕುವರನಾದೊಡೆ ಬಂದ ಗುಣವೇನದರಿಂದ
ಕುವರಿಯಾದೊಡೆ ಕುಂದೇನು ?

*

ಗುಣ ಜವ್ವನ ಕುಲ ರೂಪುಗುಂದಿದ ನಡೆ-
ವೆಣಕೀಯಲಾಗದು ಪೆಣ್ಣ.

*

ಮುಗುದೆ ನಾಚಿಕೆಗೊಳೆ ಮುದ್ದಿಸಿ ತಿಳುಪದೆ
ಪಗೆ ಸಾಧಿಸಿ ಬಲ್ಮೆದೋರೆ
ಉಗುರೊಳು ಬಾಜಿಪ ವೀಣೆಗೊನಕೆಗೊಂಬ
ಖಗೆಯೆನಿಪುದು ಭಾವಿಪೊಡೆ.

*

ತನ್ನ ಮನೆಯ ಬಡತನಗಳ ಧನಗಳ
ತನ್ನಿನಿಯನ ತಪ್ಪುಗಳ
ತನ್ನ ಮರವೆ ಮೋಸಗಳನವರಿವರೊಳು
ಬಿನ್ನವಿಸದೆ ಮರಸುವುದು.

*

ಸಾರಿಸಿ ರಂಗವಲ್ಲಿಯ ಸರಿಗೊಳಿಸಿ ದೀ-
ಪಾರೋಪಣವನಾಚರಿಸಿ
ಹಾರುತ ಮನದನ್ನನ ಬರವನೆ ಮನ
ವಾರೆ ಕಾದಿಹುದು ಕಾಂತೆಯರು.

*

ಕುಲಪುತ್ರನೋದಿ ತಿಳಿದು ನಡೆದಲ್ಲದೆ
ಕುಲವನುದ್ಧರಿಸಲರಿಯನು
ಕುಲಪುತ್ರಿಯೊಳ್ಳುವರನಿಗಿತ್ತ ಮಾತ್ರಕೆ
ಕುಲಕೋಟಿಯನುದ್ಧರಿಪಳು.

*

ಅನುಗೊಳೆ ಪಾಲು ನೀರುಗಳಂತಿನಿಯನು-
ಮಿನಿಯಳುಮೇಕವೆನಿಪುದು.

*

ಕನ್ನಡ ನಾಡೊಳು ಕಲಿಯುಗ ಪುಗದಿರ್ಕೆ
ಕನ್ನಡಿಗರು ಘನರಕ್ಕೆ.

ಭಾರತದ ಕಷ್ಟಗಳಿಗೆ
ಅಮೇರಿಕನ್ ಪ್ರಮುಖನ ಪರಿಹಾರ !

# ಆತ್ಮನಿಂದೆ ಸಾಕು. ಆತ್ಮವಿಶ್ವಾಸ ಬೇಕು!



ಚೆಸ್ಟರ್ ಬೌಲ್ಸ್

ಹಲವಾರು ದಿನಗಳ ಹಿಂದೆ ಆಗ ತಾನೇ ೧೮ ತಿಂಗಳ ಕಾಲ ಚೀನದಲ್ಲಿದ್ದು ಬಳಿಕ ದೀರ್ಘ ಕಾಲವನ್ನು ಭಾರತದಲ್ಲಿ ಕಳೆದಿದ್ದ ಯುರೋಪಿಯನ್ ಸುದ್ದಿಗಾರನೊಂದಿಗೆ ನಾನು ಮಹತ್ವಪೂರ್ಣವಾದ ಚರ್ಚೆ ಮಾಡಿದೆ.

ಜಗತ್ತಿನ ದೊಡ್ಡ ರಾಷ್ಟ್ರಗಳಲ್ಲಿ ಎರಡಾದ ಭಾರತ ಮತ್ತು ಚೀನಗಳಲ್ಲಾಗಿರುವ ಆರ್ಥಿಕ ಪ್ರಗತಿಯ ಬಗ್ಗೆ ಅತನ.ವಿಚಾರಗಳನ್ನು ತಿಳಿದುಕೊಳ್ಳಲು ನಾನು ಆತುರನಾಗಿದ್ದೆ. ಈ ಎರಡು ದೇಶಗಳಲ್ಲಿ ಒಂದು ಕಮ್ಯುನಿಸ್ಟ್ ಸರ್ವಾಧಿಕಾರಿ ಆಡಳಿತದಲ್ಲಿದ್ದರೆ ಇನ್ನೊಂದು ಪ್ರಜಾಪ್ರಭುತ್ವ ದೇಶವಾಗಿದೆ.

ಎರಡೂ ದೇಶಗಳು ವಿಸ್ತಾರವಾದವು; ಎರಡೂ ಬಲು ತೊಡಕಿನ ದೇಶಗಳು. ಅದ್ದರಿಂದ ಆ ಸುದ್ದಿಗಾರ ನನ್ನೆಲ್ಲ ಪ್ರಶ್ನೆಗಳಿಗೆ ಸ್ಪಷ್ಟ ಉತ್ತರ ಕೊಡಲು ಹಿಂಜರಿದದ್ದು ನ್ಯಾಯವೇ ಸರಿ.

ಹಾಗಿದ್ದರೂ ಅವನ ಅಭಿಪ್ರಾಯದಲ್ಲಿ ತಮ್ಮ ಜನಕ್ಕೆ ಆಹಾರ, ವಸತಿ, ಬಟ್ಟೆಗಳನ್ನು ಪೂರೈಸುವಲ್ಲಿ ಈ ಎರಡೂ ದೇಶಗಳು ಸಾಧಿಸಿರುವ ಪ್ರಗತಿ ತಕ್ಕಮಟ್ಟಿಗೆ ಸರಿಸಮಾನವೇ ಆಗಿದ್ದವು.

ಭಾರತ ಮತ್ತು ಚೀನ ಎರಡರಲ್ಲೂ ಆತ ವಿಶಾಲವಾದ ಹೊಲಸು ಕೇರಿಗಳನ್ನೂ ಅಪರಿಪೂರ್ಣ ಆಹಾರದಿಂದ ಬಳಲುವ ಸಹಸ್ರಾರು ಜನರನ್ನೂ ಕಂಡ. ಅದರಂತೆ ತಮ್ಮ ಸಮಸ್ಯೆಗಳನ್ನು ಬಿಡಿಸುವಲ್ಲಿ ಪ್ರತಿಯೊಂದೂ ದೇಶವು ಸಾಧಿಸಿದ ಮಹತ್ವದ ಪ್ರಗತಿಯೂ ಆತನ ದೃಷ್ಟಿಗೆ ಬಿತ್ತು.

ಎರಡೂ ದೇಶಗಳಲ್ಲಿ ಆತ ಅನೇಕ ಆಧುನಿಕ ಕಾರಖಾನೆಗಳನ್ನು ಕಂಡ. ಆದರೆ ಚೀನದಲ್ಲಿ ಅಂಕೆ ಸಂಖ್ಯೆಗಳು ಸಿಗುವುದಿಲ್ಲ. ಸಿಕ್ಕರೂ ಅವು ಸುಳ್ಳಿನ ಕಂತೆಗಳೇ ಆಗಿರುತ್ತವೆ. ಆದ್ದರಿಂದ ಎರಡೂ ರಾಷ್ಟ್ರಗಳ ಸಾಧನೆ ಹೆಚ್ಚು ಕಡಿಮೆ ಸರಿಸಮಾನ ಎನ್ನುವುದಕ್ಕಿಂತ ಹೆಚ್ಚಿನ ಆಳಕ್ಕೆ ಆತ ಹೋಗಲೊಪ್ಪಲಿಲ್ಲ. ಹಾಗಿದ್ದರೂ ಚೀನದ ಅಣ್ವಸ್ತ್ರ ಸಂಗ್ರಹದ ಅಪಾರ ಯೋಜನೆಗಳಿಂದಾಗಿ ಮುಂಬರುವ ದಿನಗಳಲ್ಲಿ ಚೀನದ ಸಾರಿಗೆ ವ್ಯವಸ್ಥೆಯು ಆಧುನಿಕೀಕರಣಕ್ಕೆ ನಿಶ್ಚಯವಾಗಿಯೂ ಹಿಂದೇಟು ಬೀಳುವುದು. ಅದರಂತೆ ಅದರ ಗೊಬ್ಬರ ಉತ್ಪಾದನೆಯನ್ನು ಹೆಚ್ಚಿಸುವ

ಬಡೋದೆಯಲ್ಲಿ ಕೊಟ್ಟ ಭಾಷಣದಿಂದ

ಹಾಗೂ ಇತರ ಅಗತ್ಯದ ಔದ್ಯಮಿಕ ಪ್ರಗತಿಯ ಪ್ರಯತ್ನಗಳೂ ಕುಂಠಿತವಾಗುವವು ಎಂದವನ ಅಭಿಪ್ರಾಯವಾಗಿದೆ.

ಎರಡೂ ರಾಷ್ಟ್ರಗಳಲ್ಲಿಯ ಸಾಮ್ಯಗಳನ್ನು ಹೇಳಿದ ನಂತರ ಆ ಸುದ್ದಿಗಾರ ತನಗೆ ಕಾಣಿಸಿದ ಎರಡು ಮಹತ್ವದ ಭೇದಗಳನ್ನು ಒತ್ತಿ ಹೇಳಿದ. ಇವುಗಳಲ್ಲಿ ಒಂದು ಹಿತವಾಗಿದ್ದರೆ ಇನ್ನೊಂದು ಅನಿಷ್ಟವೂ ಚಿಂತೆಗೀಡುಮಾಡುವಂಥದೂ ಆಗಿದೆ.

ಹಿತವೆನಿಸಿದ ಅಂಶ ಇದು: ಭಾರತದಲ್ಲಿ ಪ್ರತಿಯೊಂದೆಡೆ ಕಂಡುಬಂದ ಸ್ವತಂತ್ರ ವಾತಾವರಣ ಮತ್ತು ಚೀನದಲ್ಲಿ ಅತನಿಗೆ ಹೆಜ್ಜೆಹೆಜ್ಜೆಗೆ ಅನುಭವಕ್ಕೆ ಬಂದ ಪೋಲೀಸ್ ನಿಯಂತ್ರಣ ಇವು ಅವನ ಮೇಲೆ ತುಂಬ ಪ್ರಭಾವ ಬೀರಿದವು.

ಅತ ಭಾರತದಲ್ಲಿ ಎಲ್ಲಿಯೆ ಹೋಗಲಿ, ಅಲ್ಲಿ ಸರಕಾರೀ ಅಧಿಕಾರಿಗಳನ್ನೂ ರಾಜಕೀಯ ಧುರೀಣರನ್ನೂ ಕಾಣಲು ಅವನಿಗೆ ಸ್ವಾತಂತ್ರ್ಯವಿತ್ತು. ಅತ ನೇರ ಪ್ರಶ್ನೆಗಳನ್ನು ಕೇಳಿ ಸ್ಪಷ್ಟ ಉತ್ತರಗಳನ್ನು ಪಡೆದ. ಆದರೆ ಚೀನದಲ್ಲಿ ಇಂಥ ಸ್ವಾತಂತ್ರ್ಯವನ್ನು ಕುರಿತು ಯೋಚಿಸಲೂ ಅಸಾಧ್ಯವಾಗಿತ್ತು.

ಆದರೆ ಅನಿಷ್ಟಾಂಶ ಇದು: ಈ ಸುದ್ದಿಗಾರನಿಗೆ ಭಾರತಕ್ಕೂ ಚೀನಕ್ಕೂ ಕಂಡು ಬಂದ ಮಹತ್ವದ ಅಂತರವೆಂದರೆ ಚೀನದಲ್ಲಿ ಎಲ್ಲಿ ನೋಡಿದರೂ ಭವಿಷ್ಯತ್ತಿನ ಬಗ್ಗೆ ಒಂದು 'ಇಜಂ' ಮೂಲಕವೇ ಆಗಿದ್ದರೂ ಅಮಿತ ಉತ್ಸಾಹ ವಿಶ್ವಾಸಗಳು ವ್ಯಕ್ತವಾಗುತ್ತಿದ್ದರೆ ಭಾರತದಲ್ಲಿ ಪ್ರತಿಯೊಂದೆಡೆಯಲ್ಲಿ ಹತಾಶಭಾವ ಮೂಡಿ ಬಂದಿದೆ.

"ಕನಿಷ್ಠಪಕ್ಷ ಚೀನದಷ್ಟೇ ಪ್ರಗತಿಯನ್ನು ಹೊಂದಿದ್ದರೂ ಭಾರತವು ಏಕೆ ತನ್ನ ಸಿದ್ಧಿಗಳ ಬಗ್ಗೆ ಅಭಿಮಾನಪಟ್ಟುಕೊಳ್ಳುವುದಿಲ್ಲ? ಚೀನ ಏಕೆ ಅಷ್ಟೊಂದು ಆತ್ಮವಿಶ್ವಾಸದಿಂದಿದೆ? ಭಾರತವೇಕೆ ಅಷ್ಟು ಅಧೀರವಾಗಿದೆ?" ಎಂದು ಆ ಸುದ್ದಿಗಾರ ನನ್ನನ್ನು ಕೇಳಿದ.

ಚಿಂತಿಸಿ ಉತ್ತರ ಕೊಡಬೇಕಾದಂಥ ಬಿಗಿಯಾದ ಪ್ರಶ್ನೆಗಳಿವು. ನಾನು ಆ ಉತ್ತರಗಳನ್ನು ಕೊಡಬಲ್ಲೆನೆ ಎಂಬುದು ಸಂದೇಹಾಸ್ಪದ ಮಾತು.

ಭಾರತಕ್ಕೆ ಬರುವ ಪ್ರತಿಯೊಬ್ಬನ ಮನಸ್ಸಿನ ಮೇಲೆ ಅಚ್ಚೊತ್ತುವ ಸಂಗತಿಯೆಂದರೆ, ಸ್ವಾತಂತ್ರ್ಯೋತ್ತರದ ಅನತಿದೀರ್ಘ ಕಾಲದಲ್ಲೇ ಈ ದೇಶ ಸಾಧಿಸಿದ ವಿಷಯಗಳ ಮೇಲೆ ಸಾರ್ವಜನಿಕರ ಗಮನ ಕೇಂದ್ರೀಕೃತವಾಗಿಲ್ಲ; ಬದಲಿಗೆ ಅಪಯಶಸ್ಸು, ಕುಂದುಕೊರತೆಗಳ ಮೇಲೆಯೇ ಜನರ ದೃಷ್ಟಿ ಇರುತ್ತದೆ, ಎಂಬುದು. ಎಲ್ಲಿ ಹೋದರೂ ಆತ ಲಂಚಗುಳಿತನ, ಗೊಂದಲ, ಆಲಸ್ಯ, ಅಯೋಗ್ಯತೆಗಳ ಬಗ್ಗೆ ದೂರುಗಳನ್ನಷ್ಟೇ ಕೇಳುತ್ತಾನೆ. ಮಾಡಿದ ಸಾಧನೆಗಳನ್ನು ಜನ ಅಲಕ್ಷಿಸುತ್ತಾರೆ, ಅಥವಾ ಮಹತ್ವದ್ದಲ್ಲವೆಂದು ಕಡೆಗಣಿಸಿ ಮಾತನಾಡುತ್ತಾರೆ.

ನಾವೀಗ ಸ್ವಾತಂತ್ರ್ಯ ಪ್ರಾಪ್ತಿಯ ನಂತರ ಭಾರತದಲ್ಲಾದ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಯನ್ನು ವಿಮರ್ಶಿಸೋಣ.

೧೯೫೨ ರಲ್ಲಿ ಭಾರತದಲ್ಲಿ ಒಂದು ಕೋಟಿ ಮಲೇರಿಯಾ ಜ್ವರದ ಪ್ರಕರಣಗಳಾಗಿದ್ದರೆ ೧೯೬೬ ರಲ್ಲಿ ಕೇವಲ ೫೦,೦೦೦ ಪ್ರಕರಣಗಳಿವೆ. ಈಗ ಹದಿನೈದು ವರ್ಷಗಳ ಹಿಂದೆ ಇದ್ದದ್ದಕ್ಕಿಂತ ಮೂರು ಪಟ್ಟು ಹೆಚ್ಚು ಹುಡುಗರಿಗೆ ಭಾರತದಲ್ಲಿ ಪ್ರಾಥಮಿಕ ಶಿಕ್ಷಣ ದೊರೆಯುತ್ತಿದೆ. ಪ್ರತಿ ವರ್ಷ ಭಾರತದಲ್ಲಿ [illegible],೦೦೦ಕ್ಕಿಂತ ಹೆಚ್ಚು ಡಾಕ್ಟರರು ಮತ್ತು ೧೦,೦೦೦ ಕ್ಕಿಂತ ಹೆಚ್ಚು ಇಂಜನಿಯರರು ತಯಾರಾಗುತ್ತಿದ್ದಾರೆ.

೧೯೫೪ ರಲ್ಲಿದ್ದುದಕ್ಕಿಂತ ಈಗ ಐದು ಪಟ್ಟು ಹೆಚ್ಚು ವಿದ್ಯುಚ್ಛಕ್ತಿ ನಿರ್ಮಾಣವಾಗುತ್ತಿದ್ದು ಇನ್ನೈದು ವರ್ಷಗಳಲ್ಲಿ ಅದು ಈಗಿನ ಇಮ್ಮಡಿಯಾಗುವ ನಿರೀಕ್ಷೆಯಿದೆ.

ಭಾರತದ ರೇಲ್ವೆ ಮಾರ್ಗಗಳ ಬಹಳ ಮಟ್ಟಿಗೆ ಅಧುನಿಕೀಕರಿಸಲ್ಪಟ್ಟಿವೆ. ರಾಜಮಾರ್ಗಗಳು ಸುಧಾರಿಸಲ್ಪಟ್ಟು ಅವುಗಳ ವಿಸ್ತಾರ ಹೆಚ್ಚಿದೆ. ಭಾರ ಉದ್ದಿಮೆಗಳು ತ್ವರಿತಗತಿಯಲ್ಲಿ ಅಭಿವೃದ್ಧಿ ಹೊಂದುತ್ತಿವೆ.

ಕೃಷಿ ವಿಷಯದಲ್ಲಿ ಭಾರತದ ಆಹಾರ ಕೊರತೆಯ ಬಗ್ಗೆ ತುಂಬ ಬರೆಯಲ್ಪಟ್ಟಿದೆ. ಆದರೆ

ಆಹಾರ ಉತ್ಪಾದನೆಯನ್ನು ಹೆಚ್ಚಿಸಲು ಈಗ ನಡೆಯುತ್ತಿರುವ ಅಪಾರ ಪ್ರಯತ್ನದ ಬಗ್ಗೆ ಹೇಳುವವರು ತೀರ ಅಪರೂಪ.

ಈ ವರ್ಷ ೩೦ ಲಕ್ಷ ಎಕರೆ ಭೂಮಿಯಲ್ಲಿ ಹೊಸ ಬೀಜ, ವೈಜ್ಞಾನಿಕ ನೀರಾವರಿ, ಕೃತಕಗೊಬ್ಬರ, ಕ್ರಿಮಿನಾಶಕ ಔಷಧಿಯ ಉಪಯೋಗಗಳಿಂದ ಸಾಂದ್ರ ಬೇಸಾಯ ನಡೆದಿದೆಯೆಂದೂ ರಾಸಾಯನಿಕ ಗೊಬ್ಬರ ಉದ್ಯಮದ ವಿಸ್ತರಣೆ ಭರದಿಂದ ಆಗುತ್ತಿದೆಯೆಂದೂ ಎಷ್ಟು ಜನ ಭಾರತೀಯರಿಗೆ ಗೊತ್ತಿದೆ?

ಹಿಂದಿನ ಯಶ-ಅಪಯಶಗಳನ್ನು ಪೃಥಕ್ಕರಿಸಿ, ಹಿಂದಿನ ತಪ್ಪುಗಳು ಮುಂದಾಗದಂತೆ ನೋಡಿಕೊಳ್ಳಲು ಮತ್ತು ಮುಂದಿನ ಕಾರ್ಯಕ್ರಮಗಳನ್ನು ಸುಯೋಜಿತವಾಗಿ ಮಾಡಿಕೊಳ್ಳಲು ನೆರವಾಗುವಂಥ ಆತ್ಮವಿಮರ್ಶೆ ಹಿತಕರವೇ ಸೈ. ಆದರೆ ರಾಷ್ಟ್ರೀಯ ನಿರಾಶೆಯಲ್ಲಿ ಕೊನೆಗೊಳ್ಳುವ ಪಾರ್ಶ್ವಿಕ ಅಸಮಾಧಾನವು ವಿನಾಶಕಾರಿಯೂ ಆತ್ಮಘಾತಕವೂ ಆಗಿದೆ.

ಭಾರತವನ್ನು ಬಲ್ಲ ಪ್ರತಿಯೊಬ್ಬನೂ ಅದರ ಸಮಸ್ಯೆಗಳ ಅಪಾರ ಗಾತ್ರವನ್ನು ಬಲ್ಲ. ಈ ಸಮಸ್ಯೆಗಳನ್ನೆದುರಿಸಿ ನಿವಾರಿಸಬೇಕಾದರೆ ಭಾರತೀಯರು, ವಿಶೇಷತಃ ಸರಕಾರ ಮತ್ತು ಉದ್ಯಮರಂಗದ ಧುರೀಣರು, ಈಗಾಗಲೇ ಈ ದೇಶ ಪಡೆದ ಅನೇಕ ಸಿದ್ಧಿಗಳನ್ನು ಗುರುತಿಸಿ ಅವನ್ನು ಭವಿಷ್ಯತ್ತಿನ ಪ್ರಗತಿಗೆ ತಳಹದಿಯೆಂದು ಭಾವಿಸಿಕೊಳ್ಳುವುದು ಅತ್ಯಗತ್ಯವಾಗಿದೆ.

ತಮ್ಮ ಸುತ್ತಲೂ ಕಂಡುಬರುವ ಅಗಾಧ ದಾರಿದ್ರ್ಯವನ್ನು ಕಂಡು ಅನೇಕ ಭಾರತೀಯ ಸುಶಿಕ್ಷಿತ ಯುವಕರು ನಿರಾಶೆಯಿಂದ ಕೈಚೆಲ್ಲಿ ಸರಕಾರವನ್ನೂ ತಮ್ಮ ಮಾಲಕರನ್ನು ಅಥವಾ ವಿಶ್ವವಿದ್ಯಾಲಯಗಳನ್ನೂ ಜರೆಯುತ್ತಾರೆ.

ಆದರೆ ಅವರು ಸಂಯಮ ತಾಳಿ ಶಾಂತಚಿತ್ತದಿಂದ ಸ್ವಾತಂತ್ರ್ಯ ಪ್ರಾಪ್ತಿಯ ನಂತರದ ೧೯ ವರ್ಷಗಳಲ್ಲಿ ಸಾಧಿಸಿದ ಪ್ರಗತಿಯನ್ನು ವಿಚಾರಿಸಿದರೆ ಆ ಪ್ರಗತಿಯಲ್ಲಿ ಭಾರತದ ಭವಿಷ್ಯತ್ತಿನ ಬಗ್ಗೆ ಸಾಧಾರ ವಿಶ್ವಾಸ ತಾಳಲು ಬೇಕಷ್ಟು ಅವಕಾಶವಿದೆಯೆಂದು ಅವರಿಗೆ ಮನವರಿಕೆಯಾಗದಿರದು.

ಭಾರತದ ತರುಣರು ವಿಶ್ವದಲ್ಲಿಯೆ ಎರಡನೇ ವಿಶಾಲ ರಾಷ್ಟ್ರದ, ಸಹಸ್ರಾರು ವರ್ಷಗಳ ಸಾಂಸ್ಕೃತಿಕ ಪರಂಪರೆಯುಳ್ಳ ರಾಷ್ಟ್ರದ ನಾಗರಿಕರು. ಸುತ್ತೆಲ್ಲ ಇಲ್ಲಿ ಕಟ್ಟಲ್ಪಟ್ಟ ಮಹಾ ನಾಗರಿಕತೆಗಳ ಕುರುಹುಗಳನ್ನು ಅವರು ಕಾಣಬಲ್ಲರು.

ನವಭಾರತದ ನಾಗರಿಕರಾಗಿ ಅವರು ತಮ್ಮ ಸಮಾಜದಲ್ಲೂ ವಿಜ್ಞಾನ ಮತ್ತು ತಾಂತ್ರಿಕ ವಿಷಯಗಳಲ್ಲಿ ಹಿರಿಯ ಬುದ್ಧಿಮತ್ತೆಯನ್ನು ತೋರಿರುವ ಜನರಿದ್ದಾರೆಂದು ಗಮನಿಸಬಹುದು. ಸರಿಯಾದ ಪ್ರೋತ್ಸಾಹ ದೊರೆತಾಗ ಪರಿಣಾಮಕಾರಕ ಹಾಗೂ ಕಠಿನ ಕೆಲಸ ಮಾಡುವಲ್ಲಿ ಈ ಜನ ತಮ್ಮ ಯೋಗ್ಯತೆಯನ್ನು ಪ್ರದರ್ಶಿಸಬಲ್ಲವರಾಗಿದ್ದಾರೆ.

ನವ ಭಾರತದಲ್ಲಿ ಒಳ್ಳೆಯ ಹಾಗೂ ಸಮೃದ್ಧ ಜೀವನ ಸಾಧಿಸಲು ಸಿಗುವ ಅವಕಾಶಗಳತ್ತ ಲಕ್ಷಾವಧಿ ರೈತರು ಜಾಗೃತರಾಗುತ್ತಿದ್ದಾರೆಂದು ಈ ತರುಣರು ಕಾಣಬಲ್ಲರು. ಕಳೆದ ಎರಡು ಮೂರು ವರ್ಷಗಳಲ್ಲಿ ಈ ರೈತರಲ್ಲಿ ಹೆಚ್ಚಿನವರು ಕೃತಕಗೊಬ್ಬರ, ಕ್ರಿಮಿನಾಶಕ ಔಷಧಗಳು, ಉತ್ತಮ ಬೀಜ ಮತ್ತು ನೀರಾವರಿಯಲ್ಲಿ ಸುಧಾರಣೆ ಇವುಗಳಿಗೆ ಹೆಚ್ಚೆಚ್ಚು ಬೇಡಿಕೆಗಳನ್ನು ಮಂಡಿಸುತ್ತಿದ್ದಾರೆ.

ನಿರಾಶಾವಾದಿಗಳು ತಮಗಿಂತ ಕಡಿಮೆ ಅದೃಷ್ಟಶಾಲಿಗಳಾದ ಲಕ್ಷಗಟ್ಟಲೆ ನಾಗರಿಕರನ್ನು ನಿರುತ್ಸಾಹಿಗಳೆಂದೂ ವಿಚಾರಹೀನರೆಂದೂ ತಿಳಿಯುತ್ತಾರೆ. ಆದರೆ ಹೆಚ್ಚು ದೂರದೃಷ್ಟಿಯುಳ್ಳವರಿಗೆ ಇವರು ಬರಬರುತ್ತ ಹೆಚ್ಚು ಹೆಚ್ಚು ನುರಿತ ರೈತರು ಮತ್ತು ಕೂಲಿಕಾರರ ರೂಪದಲ್ಲಿ ಕಾಣಿಸುತ್ತಾರೆ. ಪೂರ ದೃಷ್ಟಿಯ ಉದ್ದಿಮೆದಾರರಿಗೆ ಇದೇ ಜನರು ಭಾರತದ ಕಾರಖಾನೆಗಳು ಸದ್ಯದಲ್ಲೇ ಉತ್ಪಾದಿಸಬಹುದಾದ ಸರಕುಗಳಿಗೆ ಮಹತ್ವದ ಗಿರಾಕಿಗಳಾಗಬಹುದು ಎಂಬ ಅರಿವು ಬರತೊಡಗಿದೆ.

ಭಾರತವು ನಮ್ಮ ಈ ಆಧುನಿಕ ಜಗತ್ತಿನಲ್ಲಿ ಮಹತ್ವದ ಸ್ಥಾನ ಪಡೆಯಲಾರದು ಎಂದು ನಿರಾಶಾವಾದಿಗಳು ಹೇಳುವುದು ನಿಜವಿರಲೂ ಬಹುದು. ಆದರೆ ಭಾರತವನ್ನು ಬಲ್ಲ ಯಾವನೇ

ಆಗಲಿ, ಭಾರತದ ಜನರಲ್ಲಿರುವ ಬುದ್ಧಿಮತ್ತೆ, ಕಾರ್ಯಶಕ್ತಿ ಮತ್ತು ಪ್ರಜಾಪ್ರಭುತ್ವದಲ್ಲಿ ಬಲವಾದ ನಂಬಿಕೆಯನ್ನು ಎಂದೂ ಉಪೇಕ್ಷಿಸಲಾರ.

ಭಾರತದ ತ್ವರಿತ ಪ್ರಗತಿಗೆ ಒಂದು ಹಂಚಿಕೆಯನ್ನು ನಾನು ಹೇಳುವುದಾದರೆ ನಾನು ಕೆಳಗಿನವುಗಳಿಗೆ ಅಗ್ರಸ್ಥಾನವನ್ನು ಕೊಡುತ್ತೇನೆ.

೧) ಭಾರತದ ಕೃಷಿ ವ್ಯವಸಾಯದ ಸುಧಾರಣೆಗೆ ಮೊದಲ ಪ್ರಾಶಸ್ತ್ಯ ಸಿಗಬೇಕು. ಪ್ರತಿಯೊಂದು ಆಧುನಿಕ ರಾಷ್ಟ್ರದ ಅರ್ಥಿಕ ಯಶಸ್ಸಿಗೆ ಸುಭದ್ರ ಕೃಷಿಯೇ ತಳಪಾಯವಾಗಿದೆ. ಅಮೇರಿಕ, ಜಪಾನ ಮತ್ತಿನ್ನಿತರ ದೇಶಗಳಲ್ಲಿ ಇದು ಅನುಭವಕ್ಕೆ ಬಂದ ಮಾತು.

ಭಾರತದಲ್ಲಿ ಮುಕ್ಕಾಲು ಪಾಲು ಜನರಿಗೆ ಆಹಾರಧಾನ್ಯ ಉತ್ಪಾದನೆಯೇ ಮುಖ್ಯ ಆದಾಯವಾಗಿರುವುದರಿಂದ ಒಕ್ಕಲುತನವು ಇಲ್ಲಿ ಅತ್ಯಂತ ಅಗತ್ಯದ ಉದ್ದಿಮೆಯಾಗಿದೆ. ಈ ಕಾರಣದಿಂದಲೇ ಭಾರತದ ಉದ್ದಿಮೆದಾರರು ರೈತರನ್ನು ಸ್ವಾಭಾವಿಕವಾಗಿ ತಮ್ಮ ಪಾಲುಗಾರರಾಗಿ ತಿಳಿಯಬೇಕು ಎಂದು ನಾನು ಸೂಚಿಸಬೇಕೆಂದೆನಿಸುತ್ತದೆ.

ತಮ್ಮ ಬೆಳೆಗೆ ಯೋಗ್ಯ ಬೆಲೆ ದೊರೆಯದ, ಅಗತ್ಯವಾದ ಪತ್ತಿನ ಸೌಕರ್ಯವಿಲ್ಲದ, ಉತ್ಪಾದನೆ ಹೆಚ್ಚಿಸಲು ಸುಧಾರಿಸಿದ ಗೊಬ್ಬರ ಬೀಜಗಳನ್ನು ಪಡೆಯಲಾರದ ರೈತ ಎಂದೂ ಕಾರಖಾನೆಯಲ್ಲಿ ಉತ್ಪಾದಿಸಿದ ವಸ್ತುಗಳಿಗೆ ಒಳ್ಳೆಯ ಗಿರಾಕಿಯಾಗಲಾರ. ಅಲ್ಲದೆ ಕೃಷಿಯ ಉತ್ಪಾದನೆ ಕಡಿಮೆಯಾಗಿ ಆಹಾರದ ಬೆಲೆ ಏರಿದರೆ ಕಾರಖಾನೆಗಳ ಕೆಲಸಗಾರರು ಹೆಚ್ಚಿನ ಸಂಬಳ ಬೇಡುವುದು ಅನಿವಾರ್ಯವಾಗುವುದು.

ಅದೇ ಹೆಚ್ಚು ಬೆಳೆದು ಹೆಚ್ಚು ಆದಾಯ ಪಡೆಯುವ ರೈತರು ನಿಮಗೆ ಜಗತ್ತಿನಲ್ಲಿ ಅಪೂರ್ವವಾದ ಮಾರುಕಟ್ಟೆಯಾಗುತ್ತಾರೆ. ಆಹಾರ ಬೆಲೆ ಹದವಾಗಿದ್ದರೆ ಸಂಬಳ ಹೆಚ್ಚಿಸಬೇಕೆಂಬ ಕಾರ್ಮಿಕರ ಕೂಗೂ ಕಡಿಮೆಯಾಗುತ್ತದೆ.

ಹೀಗೆ ಕೃಷಿಯಲ್ಲಿ ತೊಡಗಿಸುವ ಬಂಡವಳವು–ರಾಸಾಯನಿಕ ಗೊಬ್ಬರ, ಸುಧಾರಿಸಿದ ಬೀಜಗಳು, ಹಳ್ಳಿಗಳಲ್ಲಿ ವಿದ್ಯುಚ್ಛಕ್ತಿ ಪೂರೈಕೆ, ನೀರಾವರಿ ಇವುಗಳಲ್ಲಿ ತೊಡಗಿಸಿದ ಬಂಡವಳವು–ರೈತ, ಕಾರ್ಮಿಕ ಮತ್ತು ಉದ್ದಿಮೆದಾರ ಮೂವರಿಗೂ ಹಿತಕಾರಿಯಾಗುವುದು. ಭಾರತದ ಉದ್ದಿಮೆಯಲ್ಲಿ ಪ್ರಥಮ ಪ್ರಾಶಸ್ತ್ಯ ಈ ಬಂಡವಳಕ್ಕೇ ಇರಬೇಕು.

೨) ಜಪಾನ, ತೈವಾನ ಮತ್ತು ದಕ್ಷಿಣ ಕೋರಿಯಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಸಾಕ್ಷರತಾ ಪ್ರಸಾರವಾದದ್ದೇ ಅವುಗಳಲ್ಲಿ ಆದ ಆರ್ಥಿಕ ಪ್ರಗತಿಯ ಮುಖ್ಯ ಕಾರಣಗಳಲ್ಲೊಂದಾಗಿದೆ.

ಆದರೆ ಶಿಕ್ಷಣವು ಪ್ರಗತಿದಾಯಕವಾಗಬೇಕಾದರೆ ಬರೀ ಸಾಕ್ಷರತೆಗೆ ಮಾತ್ರ ಸೀಮಿತವಾಗಿದ್ದರೆ ಸಾಲದು. ಅದು ತಾಂತ್ರಿಕ ಕೌಶಲವನ್ನೂ ಹೊಸ ಮನೋವೃತ್ತಿಗಳ ಅಭ್ಯಾಸವನ್ನೂ ಪ್ರಚೋದಿಸಬೇಕು. ಅಂದರೆನೇ ತ್ವರಿತವಾದ ಸಾಮಾಜಿಕ ಪರಿವರ್ತನೆ ಆಗಬಹುದು.

ಹೀಗೆ ಬರೀ ಅಕ್ಷರ ಕಲಿಸುವುದಷ್ಟೇ ಶಿಕ್ಷಣವೆಂದಾಗದೇ ಅದು ಸಮಸ್ಯೆಗಳನ್ನು ಬಿಡಿಸುವ, ನಾವೀನ್ಯವನ್ನು ಕಲ್ಪಿಸುವ, ವಿಚಾರಗಳನ್ನು ಕೃತಿಗಿಳಿಸುವ ಸಾಧನವಾಗುವಂತಾಗಬೇಕು.

೩) ಸುಬದ್ಧ ಕುಟುಂಬಯೋಜನೆ ಪ್ರತಿಯೊಬ್ಬ ಭಾರತೀಯನ ಸಮೃದ್ಧಿಗೆ ಮುಖ್ಯ ಸಾಧನವಾಗುವಂತಿದೆ. ಪ್ರತಿ ವರ್ಷ ಭಾರತದ ಜನಸಂಖ್ಯೆ ಒಂದು ಒಂದೂಕಾಲು ಕೋಟಿಯಷ್ಟು ಹೆಚ್ಚಾಗುತ್ತ ಹೋದರೆ ಸಾಧಿಸಿದ ಆರ್ಥಿಕ ಪ್ರಗತಿಯಲ್ಲಿ ಹೆಚ್ಚಿನ ಭಾಗ ಇದ್ದೂ ಇಲ್ಲದಂತಾದೀತು. ಯಾಕೆಂದರೆ ಆದ ಲಾಭವನ್ನು ಹಂಚಿಕೊಳ್ಳುವವರ ಸಂಖ್ಯೆ ಹೆಚ್ಚುತ್ತಲೇ ಹೋಗುವುದು.

ಜನಸಂಖ್ಯಾನಿಯಂತ್ರಣವು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಿಗೆ ಮಾತ್ರವಲ್ಲ, ಅಮೇರಿಕದಂಥ ರಾಷ್ಟ್ರಗಳಿಗೂ ಮಹತ್ತರ ಪ್ರಶ್ನೆಯಾಗಿದೆ.

೪) ಮುಖ್ಯವಾಗಿ ತನ್ನ ಜನರ ಅಂತಃಶಕ್ತಿಯನ್ನು ಹೊರಗೆಡವಲು ಭಾರತವು ಹೊಸ ಹಾದಿಗಳನ್ನು ಕಂಡುಹಿಡಿಯಬೇಕಾಗಿದೆ.

ಆರ್ಥಿಕ ಭದ್ರತೆಯನ್ನುಳ್ಳ ಆಧುನಿಕ

ಪ್ರಜಾಪ್ರಭುತ್ವವನ್ನು ಹಳೆಯ ತಾತ್ವಿಕ ಶೋಷಣೆಗಳ ಮೇಲೆ ಕಟ್ಟಲು ಬಾರದು. ಅದು ವಾಸ್ತವವಾದ, ಪ್ರಬುದ್ಧ ವಿಚಾರದ, ಸತ್ವಯುತವಾದ ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತ ಮಾಡಬೇಕು.

ಇನ್ನೂ ಅಭಿವೃದ್ಧಿ ಹೊಂದಬೇಕಾದ ಆರ್ಥಿಕ ಸ್ಥಿತಿಯುಳ್ಳ ಭಾರತದಂಥ ದೇಶದಲ್ಲಿ ಅಭಿವೃದ್ಧಿಗೆ ಅವಶ್ಯವಾದ ತಳಪಾಯ ಕಟ್ಟುವ ಹೊಣೆಯನ್ನು ಸರಕಾರ ಹೊರಬೇಕಾಗುತ್ತದೆಂಬುದೇನೋ ನಿಜ. ಶಾಲೆಗಳನ್ನು ಕಟ್ಟಲು, ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಲು, ಸಾರಿಗೆ ಸಂಪರ್ಕವನ್ನೇರ್ಪಡಿಸಲು, ವಿದ್ಯುತ್ ಕೇಂದ್ರಗಳನ್ನು ಸ್ಥಾಪಿಸಲು ಸರಕಾರವು ಬಂಡವಳವನ್ನು ಒದಗಿಸಬೇಕು.

ಆದರೆ ವಿಸ್ತಾರಗೊಳ್ಳುತ್ತಿರುವ ಪೇಟೆಗಾಗಿ ಯೋಗ್ಯದರಗಳಲ್ಲಿ ಉತ್ತಮ ಸರಕುಗಳನ್ನು ಉತ್ಪಾದಿಸುವ ಅವಕಾಶಗಳನ್ನು ಉತ್ಸಾಹಿಗಳಾದ ಖಾಸಗಿ ನಾಗರಿಕರಿಗೆ ಆದಷ್ಟು ಹೆಚ್ಚು ಒದಗಿಸಬೇಕಾಗುತ್ತದೆ. ಹೀಗೆ ಮಾಡಿರುವ ಅಭಿವೃದ್ಧಿಮುಖ ರಾಷ್ಟ್ರಗಳೇ ಇಂದು ಅತಿ ವೇಗವಾಗಿ ಪ್ರಗತಿಹೊಂದುತ್ತಿವೆ.

ನಾಗರಿಕರ ಕ್ರತುಶಕ್ತಿಯನ್ನು ಪ್ರೋತ್ಸಾಹಿಸುವುದು, ಹೊಸ ಬಂಡವಳಕ್ಕೆ ಉತ್ತೇಜನ ವೀಯುವುದು, ವ್ಯಕ್ತಿಗೂ ಸಮಾಜಕ್ಕೂ ಕೂಡಿಯೆ ಲಾಭದಾಯಕವಾಗಿರುವ ಖಾಸಗಿ ಪ್ರಯತ್ನಗಳಿಗೆ ಪುರಸ್ಕಾರ ನೀಡುವುದು ಸರಕಾರದ ಕರ್ತವ್ಯವಾಗಿದೆ.

ನವಉದ್ದಿಮೆದಾರರು, ಲಾಭವೆಂದ-ಮಾತ್ರಕ್ಕೆ ಸಾಮಾಜಿಕ ಹೊಣೆಗಾರಿಕೆಯಿಂದ ಮುಕ್ತರಾಗುವುದಲ್ಲ, ಭಾರತದ ಉದ್ದಿಮೆಯನ್ನು ಸ್ವಾವಲಂಬನದತ್ತ ಮುನ್ನಡೆಸುವ ಸಾಮರ್ಥ್ಯ-ಧೈರ್ಯಗಳು ತಮ್ಮಲ್ಲಿವೆ ಎಂದು ತೋರಿಸಿಕೊಡಬೇಕು.

ಭಾರತದ ಕೆಲವೆಡೆಗಳಲ್ಲಿ ಪ್ರತಿ ಎಕರೆಗೆ ೧೦೦೦ ಪೌಂಡು ಭತ್ತ ಬೆಳೆಯುತ್ತಿದ್ದುದು ಕಳೆದ ಎರಡು ವರ್ಷಗಳಲ್ಲಿ ೪೦೦೦, ಪೌಂಡುಗಳಿಗೇರಿದೆ. ಆಧುನಿಕ ಬೇಸಾಯದಿಂದ ರೈತರು ಇಮ್ಮಡಿ, ಮುಮ್ಮಡಿ ಬೆಳೆಯಬಹುದು.

ಪಂಜಾಬದ ಒಂದು ಹತ್ತೆಕರೆ ಭೂಮಿಯಲ್ಲಿ ರಾಸಾಯನಿಕ ಗೊಬ್ಬರ ಮತ್ತು ಮಿಶ್ರ-ತಳಿ ಬೀಜ ಉಪಯೋಗಿಸಿ ಒಂದೇ ಬೆಳೆಯಲ್ಲಿ ಗೋದಿ ಉತ್ಪಾದನೆಯಿಂದ ಆದಾಯವನ್ನು ರೂ. ೩,೫೦೦ ರಿಂದ ರೂ. ೧೩,೫೦೦ ಕ್ಕೆ ಏರಿಸಲಾಯಿತು. ಈ ನವೀನ ತಂತ್ರಗಳಿಂದ ಹಳ್ಳಿಗಾಡಿನ ರೈತರ ಆದಾಯದ ಮೇಲಾಗುವ ಪರಿಣಾಮವನ್ನು ಊಹಿಸುವುದು ಕಷ್ಟ. ಮೇಲೆ ಹೇಳಿದ ಭೂಮಿಯ ರೈತನ ಕುಟುಂಬದಲ್ಲಿ ಐದು ಜನರಿದ್ದರೆ ಅವರ ತಲಾ ಆದಾಯ ಒಂದೇ ಬೆಳೆಗೆ ರೂ. ೨,೧೦೦ ಆಗುತ್ತದೆ. ಇದು ತೈವಾನದ ರೈತನ ಆದಾಯವನ್ನು ಹೋಲುವಷ್ಟಿದೆ.

ಹಣ್ಣು-ಹಂಪಲು ಕಾಯ್ದಿಡುವ, ಹಂಚು ಇಟ್ಟಿಗೆಗಳನ್ನು ತಯಾರಿಸುವ ಹಾಗೂ ಇನ್ನಿತರ ಚಿಕ್ಕ ಗೃಹೋದ್ಯಮಗಳಿಂದ ರೈತರು ತಮ್ಮ ಬಿಡುವಿನ ಸಮಯದಲ್ಲಿ ಆದಾಯ ಹೆಚ್ಚಿಸಿಕೊಳ್ಳಬಹುದು. ರೈತನ ಉತ್ಪನ್ನ ಬೆಳೆದಂತೆ ಕಾರಖಾನೆಗಳ ಸಿದ್ಧ ವಸ್ತುಗಳಿಗೆ ಅವನ ಬೇಡಿಕೆ ಹೆಚ್ಚಾಗುವುದು. ಈ ಆರ್ಥಿಕ ಅನ್ಯೋನ್ಯಾಶ್ರಯವೇ ಜಪಾನ, ತೈವಾನ ಮತ್ತು ದಕ್ಷಿಣ ಕೋರಿಯಗಳ ಆರ್ಥಿಕ ಬೆಳವಣಿಗೆಗೆ ಸಹಾಯ ಮಾಡಿರುವ ಅಂಶವಾಗಿದೆ. ಭಾರತದಲ್ಲೂ ಇದು ಸಾಧ್ಯವಾಗಬಲ್ಲದು.

ಭಾರತದಲ್ಲಿರುವ ಅಡ್ಡಿ-ಆತಂಕಗಳು ನಿಜವಾಗಿಯೂ ಪ್ರಬಲವಾಗಿವೆ. ಬೇರೂರಿದ ಹಳೆಯ ರೂಢಿ, ವಿಚಾರ ಮುಂತಾದವುಗಳಿವೆ ನಿಜ. ಆದರೆ ಇತರ ರಾಷ್ಟ್ರಗಳಲ್ಲೂ ಇಂಥವೇ ಅಥವಾ ಇವಕ್ಕೆ ಸಮಾನವಾದ ಬೇರೆ ಅಡ್ಡಿ-ಆತಂಕಗಳಿದ್ದವು. ಅವು ಅವನ್ನು ನಿವಾರಿಸಿಕೊಂಡಿವೆ.

ಆತ್ಮವಿಶ್ವಾಸ, ಕಠಿನ ಪರಿಶ್ರಮಗಳಿಂದ ಭಾರತದ ಹೊಸ ತರುಣ ಪೀಳಿಗೆಯು ತುಂಬಾ ಸತ್ವವುಳ್ಳ ಈ ವಿಶಾಲ ನಾಡನ್ನು ಅಧಿಕ ಉತ್ಪಾದನೆ, ಹೆಚ್ಚಿನ ಜೀವನಮಟ್ಟಗಳತ್ತ ಒಯ್ಯಬಹುದು ಎಂದು ನಾನು ನಂಬಿದ್ದೇನೆ.*



ಭಾವಿ ಜಗತ್ತಿಗೆ
ಭವ್ಯ ಕೊಡುಗೆ

# ಸರ್ವೋದಯ ಮತ್ತು ಇಂದಿನ ಜಗತ್ತು

**ರಂಗನಾಥ ದಿವಾಕರ**

ಸರ್ವೋದಯ' ಎಂಬುದು ಇನ್ನೂ ಎಳೆಯ ಕಲ್ಪನೆಯೆಂದೇ ಹೇಳಬೇಕು. ಅದು ಹುಟ್ಟಿದ್ದು ಗಾಂಧೀಜಿಯ ಮನಸ್ಸಿನಲ್ಲಿ; ಅವರು ದಕ್ಷಿಣ ಅಫ್ರಿಕದಲ್ಲಿ 'ಸತ್ಯಶೋಧನೆ'ಯಲ್ಲಿ ತೊಡಗಿದ್ದಾಗ. ಅವರೊಮ್ಮೆ ರಸ್ಕಿನ್ನನ 'Unto This Last' ಗ್ರಂಥವನ್ನೋದುತ್ತಿದ್ದಾಗ ಈ ಕಲ್ಪನೆ ಅವರ ಚಿತ್ತದಲ್ಲಿ ಮಿಂಚಿತು. ಅಲ್ಲಿಂದ ಅದು ಸಾವಕಾಶವಾಗಿ ಬೆಳೆಯಿತು. ಆದರೆ ಅದಕ್ಕೆ ಪೂರ್ಣ ರೂಪವನ್ನು ಕೊಡಲು ಗಾಂಧೀಜಿಗೆ ವೇಳೆಯೆ ಸಿಗಲಿಲ್ಲ. ಮೊದಲು ದಕ್ಷಿಣ ಅಫ್ರಿಕದಲ್ಲಿ ಅವರು ಭಾರತೀಯ ನಾಗರಿಕ ಹಕ್ಕುಗಳಿಗಾಗಿ ಹೋರಾಡುವುದರಲ್ಲಿ ವ್ಯಸ್ತರಾಗಿದ್ದರು. ಭಾರತಕ್ಕೆ ಬಂದ ಮೇಲೆ ಸ್ವಾತಂತ್ರ್ಯ ಸಂಗ್ರಾಮವು ಅವರ ಹೆಚ್ಚಿನ ವೇಳೆಯನ್ನು ತೆಗೆದುಕೊಂಡಿತು. ಅವರು ಕೊನೆಗೆ ಜಾತೀಯ ಸಾಮರಸ್ಯಕ್ಕಾಗಿ ಆತ್ಮಾರ್ಪಣೆ ಮಾಡಿ ಹುತಾತ್ಮರಾದರು. ಸರ್ವೋದಯ ಕಲ್ಪನೆಯಲ್ಲಿ ಜಾತಿ ಸೌಹಾರ್ದವೂ ಒಂದು ಮುಖ್ಯ ಅಂಗವೇ ಆಗಿತ್ತು. ಹೀಗೆ ಗಾಂಧೀಜಿಯ ವೇಳೆ ಇತರ ವಿಷಯಗಳಲ್ಲಿ ಕಳೆದುಹೋದರೂ 'ಸರ್ವೋದಯ'ವೆಂದರೆ ಅವರ ಮನಸಿನಲ್ಲಿ ಯಾವ ಅರ್ಥವಿತ್ತು ಎಂಬುದರ ಹೊಳವು ಅವರ ಬರವಣಿಗೆಗಳಲ್ಲಿ ಸಾಕಷ್ಟು ಮೂಡದೆ ಇಲ್ಲ. ಅದನ್ನೇ ಆಧರಿಸಿ ಅವರ ಅನಂತರದಲ್ಲಿ ವಿನೋಬಾಜಿಯವರೂ ಶ್ರೀ ಜಯಪ್ರಕಾಶರೂ ಚಿತ್ರವನ್ನು ಪೂರ್ತಿಗೊಳಿಸಲು ಯತ್ನಿಸುತ್ತಲಿದ್ದಾರೆ.

'ಸರ್ವೋದಯ' ಎಂಬ ಶಬ್ದದ ಅರ್ಥ ಎಲ್ಲರ ಏಳಿಗೆ ಎಂದು. 'ಪ್ರಪಂಚದಲ್ಲಿ ಶಾಂತಿ ಮತ್ತು ಮಾನವರಲ್ಲಿ ಮೈತ್ರಿ' ಇದು ಸರ್ವೋದಯದಲ್ಲಿರಬೇಕಾದ ಕನಿಷ್ಠ ಲಕ್ಷಣ. ಆದರೆ ಇದನ್ನು ಸಾಧಿಸಲು ಒಂದು ಕಾರ್ಯಕ್ರಮ ಬೇಕು. ಇಲ್ಲದಿದ್ದರೆ ಅದೊಂದು ಮನಸ್ಸಿನ ಮಂಡಿಗೆಯೇ ಆಗಿ ಉಳಿದೀತು. ಆದರೆ ಗಾಂಧೀಜಿ ಈ ಕನಿಷ್ಠ ಲಕ್ಷಣದ ಪೂರ್ತಿಯಿಂದಲೇ ತೃಪ್ತರಾಗಿರಲಿಲ್ಲ. ಅವರು ಅದಕ್ಕೆ ವಿಶಾಲತರವಾದ ಲಕ್ಷಣಗಳನ್ನು ಭಾವಿಸಿದ್ದರು. ಮತ್ತು ಅದನ್ನು ಕಲ್ಪನೆಯಾಗಿ ಉಳಿಸದೆ ವಾಸ್ತವ ಪ್ರಪಂಚಕ್ಕೆ ಇಳಿಸುವ ಕ್ರಿಯಾವಿಧಾನಗಳನ್ನು ಚಿಂತಿಸಿದ್ದರು. ತನ್ನ ಪರಿಪೂರ್ಣಾವಸ್ಥೆಯಲ್ಲಿ ಸರ್ವೋದಯವು ಒಂದು ಸಮಗ್ರ ಸಾಮಾಜಿಕ ತತ್ವಜ್ಞಾನವೇ ಆಗಿದೆ. ಪರರ ಮೇಲೆ ಸತ್ತೆ ನಡೆಸುವ ಚಪಲ ಮತ್ತು ಅಧಿಕಾರದಾಹದ

ಬದಲು ಮಾನವಪ್ರೇಮವನ್ನೂ ಪರಹಿತಾಕಾಂಕ್ಷೆಯನ್ನೂ ಮಾನವರಲ್ಲಿ ಪ್ರಚೋದಿಸುವುದೇ ಅದರ ಸಾರಸರ್ವಸ್ವ. ಆದ್ದರಿಂದ ಮುಂದೆ ಜನ್ಮ ತಾಳಬೇಕಾಗಿರುವ ಪ್ರಬುದ್ಧ ಪರಿಣತ ಮಾನವ ಜನಾಂಗಕ್ಕೆ ಈ ತತ್ವಜ್ಞಾನ ಅತ್ಯಂತ ಸಮರ್ಪಕವಾದದ್ದು. ಮಾನವನು ಬರುಬರುತ್ತ ತನ್ನ ಅದೃಷ್ಟವನ್ನು ತಾನೇ ನಿರ್ಣಯಿಸಿಕೊಳ್ಳಬಲ್ಲ ಸ್ವಭಾಗ್ಯ ವಿಧಾತನಾಗುತ್ತಿದ್ದಾನೆಂದು ನಾವು ನಂಬಲೇಬೇಕಾಗಿದೆ. ಉತ್ಕ್ರಾಂತಿಯು ಉತ್ಕಟತೆಯು ಅವನನ್ನು ಶಾಂತಿ, ಸೌಹಾರ್ದ ಮತ್ತು ಆನಂದದ ಕಡೆಗೆ ಎಳೆದೊಯ್ಯುತ್ತಿದೆಯೆಂಬುದೂ ನಿಶ್ಚಿತ. ಯುದ್ಧವೂ ಶಾಂತಿಯೂ ಅವಿಭಾಜ್ಯವಾಗಿವೆಯೆಂದು ಹೇಳಲಾಗಿದೆ. ಎಲ್ಲ ಕಡೆ ಶಾಂತಿ ಇದ್ದರೆ ಮಾತ್ರ ಅದು ಶಾಂತಿ, ಒಂದೆಡೆ ಯುದ್ಧವಿದ್ದರೆ ಎಲ್ಲೆಡೆಗಳಿಗೂ ಅದರ ಧಗೆ ಹತ್ತುವುದು. ಹಾಗೆಯೆ ಕಲ್ಯಾಣ ಮತ್ತು ಸಮೃದ್ಧಿ ಎಂಬವುಗಳೂ ಅವಿಭಾಜ್ಯವಾದವುಗಳೇ. ಇದನ್ನು ಮಾನವನು ಮನಗಾಣುತ್ತಿದ್ದಾನೆ. ವಿಜ್ಞಾನವೂ ತಾಂತ್ರಿಕ ವಿದ್ಯೆಗಳೂ ಅಪರಿಮಿತವಾಗಿ ಬೆಳೆದು ಸಂಪರ್ಕವನ್ನೂ ಪರಸ್ಪರ ಮಿಲನವನ್ನೂ ಎಷ್ಟು ಮಟ್ಟಿಗೆ ಹೆಚ್ಚಿಸಿವೆಯೆಂದರೆ ಇಡೀ ಮಾನವ ಕುಲವೇ ಇಂದು ಒಂದೇ ಗೂಡಿನೊಳಗಿನ ಹಕ್ಕಿಗಳಂತಾಗಿದೆ. ಏಕಜಗತ್ತಿನ ಕಲ್ಪನೆ ಅನಿವಾರ್ಯವಾದ ದಿನಬಳಕೆಯ ವಿಷಯವಾಗಿ ಬಿಟ್ಟದೆ.

ಈ ದೃಷ್ಟಿಯಿಂದ ಇಂದು ನಾವು ಸರ್ವೋದಯ ಕಲ್ಪನೆಯನ್ನು ಒರೆದು ಬೆಲೆಕಟ್ಟಬೇಕಾಗಿದೆ. ವೈಯಕ್ತಿಕ ಮಟ್ಟದಲ್ಲಿ ಹೇಗೊ ಹಾಗೆ ಸಾಮಾಜಿಕ ಮಟ್ಟದಲ್ಲಿ, ರಾಷ್ಟ್ರೀಯ ಮಟ್ಟದಲ್ಲಿ ಹೇಗೋ ಹಾಗೆ ಅಂತಾರಾಷ್ಟ್ರೀಯ ಹಂತದಲ್ಲಿ ಸರ್ವೋದಯದ ಮೌಲ್ಯಮಾಪನವಾಗಬೇಕಾಗಿದೆ.

ಈ ಕಲ್ಪನೆಯನ್ನು ವಿವರಿಸುವ ಮೊದಲು ಬೇರೆ ಯಾವ ಯಾವ ರಾಜಕೀಯ ಮತ್ತು ಸಾಮಾಜಿಕಾರ್ಥಿಕ ಕಲ್ಪನೆಗಳು ಜಗತ್ತಿನಲ್ಲಿ ಪ್ರಚಲಿತವಾಗಿವೆಯೆಂದು ಪರಿಶೀಲಿಸೋಣ.

ಇಂದು ವ್ಯಕ್ತಿಯನ್ನಾಳುತ್ತಿರುವುದು ಅಹಂನಿಷ್ಠೆ. ಇದಕ್ಕೆ ಅಲ್ಲೊಂದು ಇಲ್ಲೊಂದು ಅಪವಾದವಿರಬಹುದಷ್ಟೇ. ಮಾನವ ಮನಸಿನಲ್ಲಿ ಸ್ವಲ್ಪವಾದರೂ ಪರಹಿತ ಚಿಂತನೆ ಬೇರೂರದಿದ್ದರೆ ಮಾನವ ಕುಲಕ್ಕೆ ಭವಿಷ್ಯವೇ ಇಲ್ಲ ಎಂದು ಪಿತ್ರಿಮ್ ಸೊರೊಕಿನ್ನರೆಂಬ ಸಮಾಜಶಾಸ್ತ್ರಿ ಹೇಳುತ್ತಾರೆ. ಈ ಅಹಂನಿಷ್ಠೆಯ ಪ್ರಭುತ್ವ ವ್ಯಕ್ತಿಜೀವನದ ಮೇಲಷ್ಟೇ ಇಲ್ಲ; ಅದು ಸಮಾಜವನ್ನೂ ರಾಷ್ಟ್ರಗಳನ್ನೂ ಅಂತಾರಾಷ್ಟ್ರೀಯ ವ್ಯವಹಾರವನ್ನೂ ತನ್ನ ರಾವಣ ಬಾಹುಗಳಲ್ಲಿ ಅಪ್ಪಿಕೊಂಡಿದೆ. ಸಂಯುಕ್ತ ರಾಷ್ಟ್ರ ಸಂಘದಲ್ಲಿ ಒಂದು ನೂರಾ ಇಪ್ಪತ್ತು ರಾಷ್ಟ್ರಗಳ ಪ್ರತಿನಿಧಿಗಳು ಸೇರಿದಾಗಲೂ ಅವರ ತಲೆಗಳಲ್ಲಿ ಹೊಳೆಯುವ ವಿಷಯವೊಂದೇ– ಈ ನಾಟಕದಿಂದ ತಂತಮ್ಮ ದೇಶಗಳಿಗಾಗಿ ಏನನ್ನು ಗಿಟ್ಟಿಸಬಹುದು ಎಂಬುದು.

ಇನ್ನು ರಾಜಕೀಯ ಪ್ರಣಾಲಿಗಳ ಮಾತು. ರಾಜಸತ್ತೆ, ಪ್ರಜಾಸತ್ತೆ, ಫ್ಯಾಸಿಜಂ, ಸರ್ವಾಧಿಕಾರಸತ್ತೆ ಇತ್ಯಾದಿಗಳಿವೆ. ಜನರಿಗಾಗಿ ಜನರಿಂದ ಜನರದೇ ಪ್ರಭುತ್ವ ಎಂಬರ್ಥದ ಪ್ರಜಾಸತ್ತೆಯಲ್ಲಿ ಕೂಡ ಜನರಲ್ಲಿರುವ ಪರಸ್ಪರ ಆರ್ಥಿಕ ಅಂತರಗಳಿಂದಲೂ ಪಾರ್ಟಿಪದ್ಧತಿಯಿಂದಲೂ ಧ್ಯೇಯವು ವಸ್ತುಸ್ಥಿತಿಗಿಳಿಯುವಾಗ ವಿಕೃತಿ ಹೊಂದಿದೆ. ಇವುಗಳಲ್ಲಿ ಯಾವ ಪ್ರಣಾಲಿಯೂ ಜನರಿಗೆ ನಿಜವಾಗಿ ಸಮಾನ ಹಕ್ಕುಗಳನ್ನೂ ಸಮಾನ ಸೌಕರ್ಯಗಳನ್ನೂ ಸಮಾಜದ ಎಲ್ಲ ವರ್ಗಗಳಿಗೂ ಸಮಾನ ಹಿತವನ್ನೂ ಸಮಾನ ಸಮೃದ್ಧಿಯನ್ನೂ ಕೊಡಲು ಬಯಸಿಲ್ಲ, ಬಯಸಿದ್ದರೆ ಅದರಲ್ಲಿ ಪೂರ್ತಿ ಅಯಶಸ್ವಿಯಾಗಿದೆ.

ಬಂಡವಾಳಶಾಹಿ, ನಾನಾ ಪ್ರಕಾರದ ಸಮಾಜವಾದಗಳು, ಕಮ್ಯೂನಿಜಂ ಮೊದಲಾದ ಸಾಮಾಜಿಕಾರ್ಥಿಕ ಸಿದ್ಧಾಂತಗಳೂ ಇದೇ

ಪ್ರಕಾರ ಮುಗ್ಗರಿಸಿವೆ. ಸರ್ವರ ಹಿತ ಸಾಧಿಸಬೇಕೆಂಬ ಬಗ್ಗೆ ಅವುಗಳಲ್ಲಿ ಪ್ರಾಮಾಣಿಕ ಇಚ್ಛೆ ಇದ್ದಿಲ್ಲವೆಂದಾಗಲಿ ಅವು ಈ ಬಗ್ಗೆ ದುರ್ಲಕ್ಷ ಮಾಡಿದ್ದವೆಂದಾಗಲಿ ಯಾರೂ ಆರೋಪಿಸುವಂತಿಲ್ಲ. ಆದರೂ ಅವು ಅಯಶಸ್ವಿಯಾಗಿವೆ; ಯಶಸ್ವಿಯಾದಾಗಲೂ ಅಲ್ಪ ಪ್ರಮಾಣದಲ್ಲಿ, ಅದೂ ಅಂಶಿಕವಾಗಿ ಸಫಲವಾಗಿವೆ. ಅವು ತಮ್ಮ ಸಿದ್ಧಾಂತವನ್ನು ಕಟ್ಟಲು ಇಟ್ಟುಕೊಂಡ ತಳಹದಿ, ಅವುಗಳ ಕಾರ್ಯಾಚರಣೆಯ ನೆಲಗಟ್ಟೇ ಸದೋಷವೂ ಅಪರಿಪೂರ್ಣವೂ ಆಗಿತ್ತೆಂದು ತೋರುತ್ತದೆ. ಅವು ಮಾನವನನ್ನು ಒಂದು ಅಖಂಡ ವ್ಯಕ್ತಿಯಾಗಿ ಗ್ರಹಿಸಲಿಲ್ಲ. ಅವನ ಭವಿತವ್ಯದ ಸ್ವರೂಪವನ್ನೂ ಕಂಡಿರಲಿಲ್ಲ.

ಮಾನವನ ಅಖಂಡ ಸ್ವರೂಪ-ಸ್ವಭಾವವೆಂತಿದೆ? ಮಾನವ ಜೀವಿಗಳನ್ನು ಕ್ರಿಯಾಶೀಲರಾಗಿ ಮಾಡುವ ಪ್ರಚೋದನ ಶಕ್ತಿಯಾವುದು? ಇದನ್ನರಿತು ಆ ತಳಹದಿಯ ಮೇಲೆಯೆ ನಾವು ಮಾನವರ, ಅವರ ಸಾಮಾಜಿಕಾರ್ಥಿಕ ಸಂಬಂಧಗಳ ಮತ್ತು ಮಾನವ ಸಾಮಾಜಿಕ ರಚನೆಗಳ ಬಗ್ಗೆ ಯಾವುದೇ ಸಿದ್ಧಾಂತವನ್ನು ಕಟ್ಟಬೇಕಾಗುತ್ತದೆ ಮಾನವನೊಂದು ಪ್ರಾಣಿಮಾತ್ರನು, ಅವನು ಮಾಡುವುದೆಲ್ಲ ಪ್ರಬುದ್ಧ ಸ್ವಾರ್ಥ ದೃಷ್ಟಿಯಿಂದ, ಅವನು ಸಚೇತನವಾದ ಒಂದು ನಾಗರಿಕತೆಯನ್ನಷ್ಟೇ ಕಟ್ಟಬಲ್ಲನಲ್ಲದೆ ಅದಕ್ಕೆ ಮೀರಿದ್ದೇನನ್ನೂ ಸಾಧಿಸಲಾರ ಎಂಬ ಗ್ರಹಿಕೆಯನ್ನಿಟ್ಟುಕೊಂಡಲ್ಲಿ ಮಾನವನಿಗೆ ಅಂಥ ಹಿರಿಮೆಯುಳ್ಳ ಭವಿಷ್ಯದ ಆಶೆಯಿಲ್ಲ. ಆದರೆ ಜೈವಿಕ ಉತ್ಕ್ರಾಂತಿಯ ಆರೋಹಿ ಶ್ರೇಣಿಯಲ್ಲಿ ಜೀವವು ತನ್ನನ್ನು ತಾನು ಮೀರಿ ನಿಲ್ಲುವ—ಆತ್ಮಾತಿಲಂಘನದ— ಲಕ್ಷಣವನ್ನು ಲೇಶವಾದರೂ ತೋರಿಸಿದೆಯೆಂದು ವಿಜ್ಞಾನವು ಗುರುತಿಸಿದರೆ ಆಗ ಮಾನವನಿಗೆ ಖಂಡಿತವಾಗಿ ಹಿರಿಯ ಭವಿಷ್ಯವಿದೆ.

ಗಾಂಧೀಜಿ ತಮ್ಮ ಆಳವಾದ ಪ್ರಜ್ಞಾನದಿಂದ 'ಎಲ್ಲ ಜೀವವೂ ಒಂದೇ' ಎಂದು ಕಂಡುಕೊಂಡರು; ಮತ್ತು ಆ ತಳಹದಿಯ ಮೇಲೆಯೆ ತಮ್ಮ ತತ್ತ್ವಜ್ಞಾನದ ಸೌಧವನ್ನು ನಿಲ್ಲಿಸಿದರು. ಭೌತಶಾಸ್ತ್ರಿಗಳು ಇದ್ದುದೆಲ್ಲ ಒಂದೇ ಶಕ್ತಿರೂಪ ಎಂದು ತೀರ್ಮಾನಕ್ಕೆ ಬಂದು, ಆ ಶಕ್ತಿಯ ನಿಯಮಗಳನ್ನು ತಿಳಿದುಕೊಳ್ಳಲು ಸಮರ್ಥರಾಗಿದ್ದರೆ, ಮಾನಸಶಾಸ್ತ್ರಿಗಳು ಎಂದಾದರೊಂದು ದಿನ ಮಾನವನ ಅಂತಶ್ಚೈತನ್ಯದ ನಿಯಮಗಳನ್ನು ಅರಿತುಕೊಂಡು ಅವನ ವಿಧ್ವಂಸಕ ಪ್ರವೃತ್ತಿಗಳನ್ನು ಹಿಡಿತಕ್ಕೆ ತರಲಾರರೆ? ಎಂದು ಗಾಂಧೀಜಿ ಒಮ್ಮೆ ಕೇಳಿದ್ದರು.

ಆದ್ದರಿಂದಲೇ ಮಾನವರೊಡನೆ ಮಾನವರ ಸಂಬಂಧವು, ಅಷ್ಟೇಕೆ, ಸಕಲ ಜೀವರಾಶಿಗಳೊಡನೆ ಮಾನವನ ಸಂಬಂಧವು ಪ್ರೇಮ ಮತ್ತು ಸಮಷ್ಟಿ ಹಿತದೃಷ್ಟಿಯಿಂದ ರೂಪಿಸಲ್ಪಡಬೇಕು ಎಂದು ಗಾಂಧೀಜಿ ಪ್ರತಿಪಾದಿಸಿದರು. ತನ್ನೊಡನೆ ತಾನು ಹೇಗೋ ಹಾಗೆ ಅನ್ಯರೊಡನೆಯೂ ನಡೆದುಕೊಳ್ಳಬೇಕೆಂದವರು ಹೇಳಿದರು. ಸಮಸ್ತ ಸೊತ್ತುಗಳೂ—ನಮ್ಮ ಶರೀರದಿಂದಾದಿಯಾಗಿ ಎಲ್ಲವೂ ಪರರ ಪರವಾಗಿ ನಮ್ಮೊಡನೆ ಇಡಲಾದ ವಿಶ್ವಸ್ತ ಧನ, ನ್ಯಾಸ ಎಂದು ಬಗೆದು, ಅದೇ ಭಾವನೆಯಿಂದ ಅವುಗಳನ್ನು ಕಾಪಾಡಬೇಕು, ಬೆಳೆಸಬೇಕು, ಅದರ ಮುಖ್ಯ ಉದ್ದೇಶ ಪರಹಿತಕ್ಕಾಗಿ ಎಂದರಿತು ನಡೆಯಬೇಕು.

ಸರ್ವೋದಯ ಎಂಬುದು 'ಸಮಸ್ತ ಜೀವದ ಐಕ್ಯ' ಎಂಬ ಈ ತತ್ತ್ವದಿಂದ ಹುಟ್ಟಿದ್ದು. ಪ್ರೇಮ, ವಿಶ್ವಸ್ತಿಕೆ ಎಂಬವು ಈ ತತ್ತ್ವಜ್ಞಾನದ ಉಪಸಿದ್ಧಾಂತಗಳಷ್ಟೇ.

ಕೆಲ ಪಾಶ್ಚಾತ್ಯ ಚಿಂತಕರು ವರ್ಗ ಕಲಹದ ಕಲ್ಪನೆಯನ್ನು ಪ್ರತಿಪಾದಿಸುತ್ತಾರೆ. ಸಮಾಜದಲ್ಲಿ ಕೆಲಸಗಾರರು, ಮಾಲಿಕರು ಇತ್ಯಾದಿಯಾಗಿ ಇರುವ ಬೇರೆ ಬೇರೆ ವರ್ಗಗಳ ಮೂಲ

ಭೂತ ಹಿತಗಳು ಎಂದೂ ಶಾಂತಿಯಿಂದ ಸಮಂಜಸವಾಗಿ ತೀರ್ಮಾನಕ್ಕೆ ಬರುವಂಥವಲ್ಲ. "ಯುದ್ಧ"ದಿಂದಲೇ, ಒಂದು ವರ್ಗವು ಇನ್ನೊಂದನ್ನು ನಾಶಗೊಳಿಸುವ ಮೂಲಕವೇ, ತೀರ್ಮಾನಿಸತಕ್ಕ ವಿಚಾರಗಳಿವು ಎಂಬುದು "ವರ್ಗಕಲಹ" ಕಲ್ಪನೆಯ ತಿರುಳು. ಸರ್ವೋದಯವು ವರ್ಗಕಲಹದ, ವರ್ಗನಾಶದ ವಿಚಾರವನ್ನೇ ದೂರೀಕರಿಸಬಯಸುತ್ತದೆ. ಅಷ್ಟೇಕೆ, ಹಿಂಸೆಯನ್ನೇ ತಳ್ಳಿಸುವುದು ಅದರ ಆದರ್ಶ. ವರ್ಗಗಳಲ್ಲಿ ಕಲಹಕ್ಕೆ ಕಾರಣಗಳುಂಟು ಎಂಬುದು ಮಾತ್ರವಲ್ಲ, ಎಲ್ಲ ಹಂತಗಳಲ್ಲೂ ಬೇರೆ ವರ್ಗಗಳ ಹಿತಗಳು ಪರಸ್ಪರ ವಿರುದ್ಧವಾಗಿರಬಹುದೆಂದು ಅದು ಒಪ್ಪುತ್ತದೆ. ಆದರೆ ಈ ತಿಕ್ಕಾಟಗಳನ್ನು ಸತ್ಯ ಮತ್ತು ಅಹಿಂಸಾ ಮೂಲಕವಾಗಿ, ಪರಸ್ಪರ ಹೊಂದಿಕೊಳ್ಳುವ ಇಲ್ಲವೆ ಮಧ್ಯಸ್ಥಿಕೆಯ ಮೂಲಕ ಬಗೆಹರಿಸಿಕೊಳ್ಳಬೇಕೆಂಬುದು ಸರ್ವೋದಯಗಳ ಪ್ರತಿಪಾದನೆ.

ಅಂತಾರಾಷ್ಟ್ರೀಯ ಕ್ಷೇತ್ರದಲ್ಲಿ ಪಂಚಶೀಲದ ಸಹಜೀವನ ಸಿದ್ಧಾಂತವನ್ನು ಸರ್ವೋದಯವು ಬೆಂಬಲಿಸುತ್ತದೆ. ಶಕ್ತಿಗಳ ಸಮತೋಲನ, ಅರ್ಥಾತ್ ಬಲಾಬಲಗಳನ್ನು ಸರಿದೂಗಿಸುವ, ಈಗಿನ ಸಿದ್ಧಾಂತವಾಗಲಿ ಶಕ್ತಿಸಂಚಯ ಮತ್ತು ಮಾರಕಾಸ್ತ್ರಗಳ ಸಂಗ್ರಹಬಲದಿಂದ ಯುದ್ಧ ಪ್ರಚೋದಕರ ಎದೆಯಲ್ಲಿ ಹೆದರಿಕೆ ಹುಟ್ಟಿಸಿ ಯುದ್ಧವನ್ನು ತಡೆಗಟ್ಟುವ ಸಿದ್ಧಾಂತವಾಗಲಿ, ಕೊನೆಗೆ ಸರ್ವನಾಶದಲ್ಲೇ ಮುಕ್ತಾಯವಾಗುವುದು ಸರಿ. ಸರ್ವೋದಯವು ಹೀಗೆ ಇಂದು ಅಸ್ತಿತ್ವದಲ್ಲಿರುವ ಸಕಲ ಸಾಮಾಜಿಕ ಸಿದ್ಧಾಂತಗಳಿಗಿಂತಲೂ ಶ್ರೇಷ್ಠವಾದ ಪ್ರತಿಸಿದ್ಧಾಂತವಾಗಿದೆ. *

****************

## ಭಾಷಾ ಬಾಂಧವ್ಯ

ನಮ್ಮ ಸಾಂಗಲಿ ಕರ್ನಾಟಕ ಸಂಘದ ಉದ್ಘಾಟನಾ ಸಮಾರಂಭಕ್ಕೆ ಬೆಳಗಾವಿಯ ಸಾಹಿತಿ ಶ್ರೀ ಭಾಗೋಜಿಯವರು ಬಂದಿದ್ದರು. ಅಧ್ಯಕ್ಷೀಯ ಭಾಷಣ ಮಾಡುತ್ತ ಒಂದು ವಿಷಯ ಹೇಳಿದರು. ಬಹಳ ಮನೋರಂಜಕವಾಗಿದೆ ಅವರು ಹೇಳಿದ ರೀತಿಯಲ್ಲೇ ಬರೆಯುತ್ತಿದ್ದೇನೆ:

"ಸಣ್ಣಂದಿನಿಂದಲೂ ನಾನು ಒಂದು ಸಣ್ಣ ಪದ್ಯವನ್ನು ಕೇಳುತ್ತಿದ್ದೆ. ಅದರ ಮೊದಲನೆ ಚರಣ ಹೀಗಿದೆ—ಚಂದಪ್ಪ ಚಂದಪ್ಪ ಚಾರಿಕಾಯಿ, ಬಟ್ಟಲು ತುಂಬ ಚಾರಿಕಾಯಿ. ಇದರ ಅರ್ಥ ಏನು ಎಂಬುದನ್ನು ಕಂಡುಹಿಡಿಯಬೇಕೆಂದು ಬಹಳ ಇಚ್ಛೆ ಆಯ್ತು. ಚಂದಪ್ಪ ಎಂದರೆ ಒಬ್ಬನ ಹೆಸರಾಯ್ತು. ಇನ್ನು ಚಾರಿಕಾಯಿ ಎಂದರೇನು? ನಾಲ್ಕೈದು ಶಬ್ದ ಕೋಶಗಳನ್ನೇ ನೋಡಿದೆ. ಅದರಲ್ಲಿ ಚಾರಿಕಾ ಎಂಬುದಿಲ್ಲ. ಕಡೆಗೆ ನಮ್ಮಲ್ಲಿಯೇ ಹಿರಿಯರ ಹತ್ತಿರ ಹೋಗಿ ಕೇಳಿದೆ. ಅವರು ಚಾರಿಕಾ ಎಂದರೆ ಹೆಸರುಕಾಳು ಎಂದುಬಿಟ್ಟರು. ನನಗೆ ಮನಸ್ಸಮಾಧಾನವಾಗಲಿಲ್ಲ. ಮನೆಗೆ ಬಂದು ಹೆಸರು ಎಂಬುದರ ಅರ್ಥ ಶಬ್ದಕೋಶದಲ್ಲಿ ನೋಡಿದೆ. ಅದರ ಅರ್ಥ ಚಾರಿಕಾಯಿ ಎಂದಿರಲಿಲ್ಲ. ಮತ್ತೆ ಅವರ ಹತ್ತಿರ ಹೋದೆ. ಅವರು ಹೇಳಿದ ವಿಷಯ ಕೇಳಿ ಆನಂದ ಆಶ್ಚರ್ಯಗಳಾದವು: 'ಇದರಲ್ಲೇನು ವಿಶೇಷವೋ? ಚಾರಿ ಮರಾಠಿ ಶಬ್ದದ ಕನ್ನಡ ಅರ್ಥ ನಾಕು; ನಾಕೆಂದರೆ ಮರಾಠಿಯಲ್ಲಿ ಮೂಗು. ಮೂಗ ಎಂಬ ಮರಾಠಿ ಶಬ್ದದ ಅರ್ಥ ಕನ್ನಡದಲ್ಲಿ ಹೆಸರುಕಾಳು.' ಹೀಗೆ ಅವರು ಒಂದು ಶಬ್ದದ ಅರ್ಥಕ್ಕೆ ಮರಾಠಿ ಕನ್ನಡದ ಸಂಗಮವನ್ನೇ ಮಾಡಿದ್ದರು."

—ಮೋಹನ ರಾ. ಭಟ್ಟ

ಅಮೇರಿಕಾ ಪ್ರವಾಸದ ಕೆಲ ಅನುಭವಗಳು

# ಸ್ನೇಹ ಸಕ್ಕರೆ

ಟಿ. ಎಸ್. ವೆಂಕೋಬರಾವ್

ಮುಂಬಯಿಯಿಂದ ಹೊರಟು ವಿಮಾನ ಮಾರ್ಗವಾಗಿ ವಾಷಿಂಗ್ಟನ್‌ನ್ನು ಅಗಸ್ಟ್ ತಿಂಗಳ ಇಪ್ಪತ್ತನೆಯ ತಾರೀಖಿನ ಸುಮಾರಿಗೆ ತಲುಪಿದೆ. ಹೊಸ ದೇಶ, ಹೊಸ ವಾತಾವರಣ, ಹೊಸ ಪದ್ಧತಿಗಳಿಗೆ ಹೊಂದಿಕೊಳ್ಳಲು ವಾಷಿಂಗ್‌ಟನ್ನಿನಲ್ಲಿ ಒಂದು ವಾರ ಅವಕಾಶವಿತ್ತು. ಊರು ಸುತ್ತುವುದು, ಸ್ಥಳಗಳನ್ನು ನೋಡುವುದು ಇವುಗಳೊಡನೆ ಊರಿನಲ್ಲಿ ಓಡಾಡುವುದೂ ಜನಗಳೊಡನೆ ನಡೆದುಕೊಳ್ಳುವುದೂ ಅಭ್ಯಾಸವಾಗ ತೊಡಗಿದವು. ಮುಂದೆ ವ್ಯಾಸಂಗಕ್ಕಾಗಿ ಪಿಟ್ಸ್‌ಬರ್ಗ್ ಸೇರಿದೆ.

ಅಮೇರಿಕದಲ್ಲಿ ಹೆಚ್ಚಾಗಿ ಶನಿವಾರ ಭಾನುವಾರ ಎರಡು ದಿನವೂ ರಜೆ. ಈ ವಾರಾಂತ್ಯದಲ್ಲಿ ಓಡಾಡುವುದು ಇಲ್ಲಿಯ ಜನರ ಮುಖ್ಯ ಮನೋರಂಜನೆ. ಅದರಲ್ಲೂ ಚಳಿಗಾಲ ಬರಲಿದೆ ಎನುವಾಗ, ಬೇಸಿಗೆ ಮುಗಿಯುವ ಮೊದಲು ಸಪ್ಟೆಂಬರ್ ಒಂದು ಸೋಮವಾರವನ್ನು ಲೇಬರ್ ಡೇ ಎಂದು ಆಚರಿಸುತ್ತಾರೆ. ಅಂದು ರಜ. ಈ ಸೋಮವಾರ, ಅದರ ಹಿಂದಿನ ಭಾನುವಾರ, ಶನಿವಾರ ಅಲ್ಲಿಯ ಜನಕ್ಕೆ ಮನೋರಂಜನೆಯ ಪ್ರವಾಸಕ್ಕೆ ಆ ವರ್ಷದ ಹೆಚ್ಚು ಕಡಿಮೆ ಕೊನೆಯ ಅವಕಾಶ. ಈ ಮೂರೂ ದಿನಗಳಲ್ಲಿ ಶಕ್ತಿಯಿದ್ದಷ್ಟು ಓಡಾಡಿ, ಎಷ್ಟು ಮನೋರಂಜನೆಯನ್ನು ತುರುಕಿಕೊಂಡೇವು ಎಂದು ಆತುರರಾಗಿರುತ್ತಾರೆ. ವರ್ಷದ ಅಧಿಕ ಸಂಖ್ಯೆಯ ರಸ್ತೆಯ ಅಪಘಾತಗಳು ಈ ಮೂರು ದಿನಗಳಲ್ಲಿ ಆಗುತ್ತವೆಯಂತೆ.

ಮೂರು ದಿನ ಕಳೆಯುವುದು ಹೇಗೆ? ಭಾರತ

ದಲ್ಲಿ ಆಪ್ತನಾಗಿದ್ದು ಐದಾರು ವರುಷಗಳ ಹಿಂದೆ ಅಮೇರಿಕವನ್ನು ಸೇರಿಕೊಂಡಿದ್ದ ಗೆಳೆಯನೊಬ್ಬನಿದ್ದ. ಅವನಿದ್ದ ಊರು ಟೋವಾಂಡ, ಪಿಟ್ಸ್‌ಬರ್ಗ್‌ನಿಂದ ೩೫೦ ಮೈಲಿ ದೂರದಲ್ಲಿದ್ದ ಕೇವಲ ೫೦೦೦ ಜನಸಂಖ್ಯೆಯ ಪುಟ್ಟ ಊರು. ಅವನನ್ನು ಏಕೆ ಭೇಟಿಯಾಗಬಾರದೆಂದು ವಿವರಗಳನ್ನು ಹುಡುಕಲು ಆರಂಭಿಸಿದೆ.

ಆ ದೇಶದಲ್ಲಿ ಪ್ರಯಾಣಕ್ಕೆ ಬಸ್ಸು ಹೆಚ್ಚು ಅನುಕೂಲ. ಅಲ್ಲಿಯ ಗ್ರೇಹೌಂಡ್ ಬಸ್ ಸರ್ವೀಸ್ ಯಾವ ಪ್ರಯಾಣಿಕರನ್ನೂ ಹಿಂದೆ ಉಳಿಸುವುದಿಲ್ಲ. ಬಸ್ಸು ತುಂಬಿ ಹೋದರೆ, ಉಳಿದು ಹೋದವರನ್ನು ಲೆಕ್ಕ ಹಾಕಿ ಅನುಕೂಲವಾದ ಇನ್ನೊಂದು ಬಸ್ಸನ್ನು ಆ ಕಂಪೆನಿಯು ಹತ್ತು ಹದಿನೈದು ನಿಮಿಷಗಳಲ್ಲಿ ಹೊರಡಿಸುತ್ತದೆ. ಹೋಗಬೇಕಾದ ಊರಿಗೆ ಅರ್ಧ ಘಂಟೆ ಹೆಚ್ಚುಕಡಿಮೆಯಲ್ಲಿ ಹೋಗಿ ಸೇರಿಯೇ ಸೇರುತ್ತೇವೆ ಎಂಬ ಧೈರ್ಯದಿಂದ ಯಾವ ಪ್ರಯಾಣವನ್ನು ಬೇಕಾದರೂ ಕೈಗೊಳ್ಳಬಹುದು.

ಆದರೆ ಟೊವಾಂಡಾಗೆ ದಿನಕ್ಕೆ ಒಂದೇ ಬಸ್ಸು. ಅದೂ ಪಿಟ್ಸ್‌ಬರ್ಗ್‌ನಿಂದ ಹೊರಟು ಒಂದು ಕಡೆ ಬದಲಾಯಿಸಿ ೪೫೦ ಮೈಲಿಯ ಸುತ್ತುದಾರಿಯ ಮೂಲಕ. ಬಸ್ಸಿನ ಪ್ರಯಾಣ, ಮಧ್ಯದ ಊರಿನಲ್ಲಿ ಕಾಯುವುದು ಸೇರಿ ಹದಿನಾಲ್ಕು ಘಂಟೆ ಹಿಡಿಯುತ್ತಿತ್ತು. ಹೋಗಿ ಬರುವುದು ಪ್ರಯಾಸದ ಕೆಲಸ. ಶುದ್ಧ ಹೊಸಬ ಬೇರೆ. ಮುಂದೆ ನೋಡಿಕೊಳ್ಳೋಣ ಎಂದು ಯೋಜನೆಯನ್ನು ಕೈಬಿಟ್ಟೆ. ಆ ಮೂರು ದಿನಗಳ ಹಿಂದಿನ ಶುಕ್ರವಾರ "ಹೇಗಿದ್ದರೂ ಇನ್ನು ಮೂರು ದಿನ ರಜ" ಎಂದು ನಿಧಾನವಾಗಿ ಪಿಟ್ಸ್‌ಬರ್ಗ್‌ನ್ನೆಲ್ಲಾ ಸಾಯಂಕಾಲ ಸುತ್ತಿದೆ.

ನಿಧಾನವಾಗಿ ರಾತ್ರಿ ೧೧-೩೦ ಘಂಟೆಗೆ ವಸತಿ ಗೃಹಕ್ಕೆ ಹಿಂದಿರುಗಿದೆ. ಬಾಗಿಲಲ್ಲಿ ನನ್ನ ಹೆಸರಿಗೆ ಒಂದು ಚೀಟಿ ಇತ್ತು. ಟೊವಾಂಡದಿಂದ ಫೋನಿನಲ್ಲಿ ಕರೆ ಬಂದಿತ್ತೆಂದೂ ನಾನು ಬಂದ ಕೂಡಲೇ ಟೊವಾಂಡದಲ್ಲಿಯ ಟೆಲಿಫೋನ್ ಆಪರೇಟರನ್ನು ಫೋನಿನಲ್ಲಿ ಕರೆಯಬೇಕೆಂದೂ ಬರೆದಿತ್ತು.

ಇದು ನನಗೆ ಅರ್ಥವಾಗಲಿಲ್ಲ. ಒಬ್ಬ ಅಮೇರಿಕನ್ ಮಿತ್ರನನ್ನು ಏನು ಮಾಡಬೇಕೆಂದು ಕೇಳಿದೆ "ಬಹಳ ಸುಲಭ. ಟೆಲಿಫೋನ್ ಕೈಗೆ ತೆಗೆದುಕೊಂಡು ಚೀಟಿಯಲ್ಲಿ ಬರೆದಿರುವುದನ್ನು ಹೇಳು, ಅಷ್ಟೆ" ಎಂದ.

ನಂಬಿಕೆಯಿಲ್ಲದೆ ಟೆಲಿಫೋನ್ ತೆಗೆದುಕೊಂಡು ಆಪರೇಟರ್‌ಗೆ "ಟೊವಾಂಡದಲ್ಲಿಯ ಆಪರೇಟರನ್ನು ಕರೆಯಿರಿ. ನನಗೆ ಒಂದು ಸಂದೇಶ ಟೆಲಿಫೋನಿನ ಮೂಲಕ ನಾನಿಲ್ಲದಿದ್ದಾಗ ಕೊಂಚ ಸಮಯದ ಹಿಂದೆ ಬಂದಿದೆ" ಎಂದೆ. "ತಡೆಯಿರಿ" ಎಂದಳು ಆಪರೇಟರ್. ಒಂದು ನಿಮಿಷ ಕಳೆದ ಮೇಲೆ ಕೇಳಬಂದ ಧ್ವನಿ ಟೊವಾಂಡದಲ್ಲಿಯ ಆಪರೇಟರಳದು. "ನಿಮ್ಮ ಹೆಸರನ್ನು ದಯವಿಟ್ಟು ಹೇಳುತ್ತೀರಾ?" ಎಂದು ಪ್ರಶ್ನಿಸಿದಳು. ಹೆಸರು ಹೇಳಿದ ಒಡನೆಯೇ "ಇಲ್ಲಿಯ ಮೂರ್ತಿ ಎಂಬುವರು ನಿಮ್ಮೊಡನೆ ಮಾತನಾಡಬಯಸುತ್ತಾರೆ. ಅವರೊಡನೆ ಈಗ ಮಾತನಾಡುತ್ತೀರಾ?" ಎಂದಳು. "ಸರಿ" ಎಂದೆ. ಒಂದು ನಿಮಿಷದಲ್ಲಿ "ಸ್ಪೀಕ್ ಅಪ್ ಪ್ಲೀಸ್" ಆದೇಶ. ಹಿಂದೆಯೇ ಪರಿಚಿತವಾದ "ಏನಯ್ಯಾ" ಎನ್ನುವ ಧ್ವನಿ. ನನ್ನ ಕಿವಿಯನ್ನು ನಂಬುವುದು ಕೊಂಚ ಪ್ರಯಾಸವೇ ಆಯಿತು. ನಮ್ಮೂರಿನಲ್ಲಿ ಟೆಲಿಫೋನಿನಲ್ಲಿ ಟ್ರಂಕ್ ಕಾಲ್ ಹಾಕಿ ಮಾತನಾಡೋಣ ಎಂದು ಧೈರ್ಯ ಇಟ್ಟುಕೊಳ್ಳುವುದು ಹುಚ್ಚು ಧೈರ್ಯವೇ ಆಗಿ ಪರಿಣಮಿಸುತ್ತದೆ. ಆಪರೇಟರೊಡನೆ ಹೇಳಿಟ್ಟು ಹೀಗೆ ಸುಲಭವಾಗಿ ಸಂಪರ್ಕ ದೊರಕಿಸಿಕೊಳ್ಳುವುದು ನಮಗೆ ಕಟ್ಟುಕತೆ ಬರೆಯುವಾಗಲೂ ಹೊಳೆಯಲಾರದು.

ಅವನು ನನ್ನನ್ನು ಕರೆದು ಹೇಳಿದ ಆದೇಶ ಹೀಗೆ, "ನನ್ನ ಕಂಪೆನಿಯಲ್ಲಿಯ ಸಹೋದ್ಯೋಗಿಯೊಬ್ಬರ ಮಗ, ಜೋಸೆ ಪಿಟ್ಸ್‌ಬರ್ಗ್‌ನಲ್ಲಿದ್ದಾರೆ. ಈ ರಜೆಗೆ ಅವರು ಅಲ್ಲಿಂದ ಇಲ್ಲಿಗೆ ಅವರ ಕಾರಿನಲ್ಲಿ ಬರುತ್ತಾರೆ. ನಾಳೆ ಬೆಳಗ್ಗೆ ಐದು ಘಂಟೆ ಸಮಯಕ್ಕೆ ಹೊರಡುತ್ತಾರೆ. ಅವರ ಟೆಲಿಫೋನ್ ನಂಬರು ಬರೆದುಕೋ. ಅವರ ಮನೆಗೆ ಟೆಲಿಫೋನ್

ಮಾಡು. ಮಗನಿಗೆ ರಾತ್ರಿ ಶಿಫ್ಟ್. ಸೊಸೆ ಉತ್ತರ ಕೊಡುತ್ತಾಳೆ. ಅವಳೊಡನೆ ವಿವರವಾಗಿ ಹೇಳಿ ಅವರೊಡನೆ ಹೊರಟು ಬಾ. ನಾಳೆ ಮಧ್ಯಾಹ್ನ ನಿನ್ನನ್ನು ಎದುರು ನೋಡುತ್ತಿರುತ್ತೇನೆ. ನಿನಗಾಗಿ ಬಟಾಣಿ ಕಾಳಿನ ಉಪ್ಪಿಟ್ಟು ಸಿದ್ಧ ಮಾಡಿಟ್ಟಿರುತ್ತೇನೆ. ಈಗಲೇ ರಾತ್ರಿ ಹನ್ನೆರಡು. ಅಂದರೆ ನಿನಗೆ ನಿದ್ದೆ ಇಲ್ಲ. ಕ್ಷಮಿಸು."

ಭಾರತೀಯ ಕಂದಾಚಾರದವನು ನಾನು ಗಾಬರಿಯೇ ಆಯಿತು. "ಅಯ್ಯಾ, ನಡು ರಾತ್ರಿ ಶುದ್ಧ ಹೊಸಬರ ಮನೆಗೆ ಗಂಡಸು ಇಲ್ಲ ಎಂದು ತಿಳಿದೂ..." ಅವನು ನಗುತ್ತಾ ಅಡ್ಡ ಹಾಕಿದ "ನಿನ್ನ ಜಿಜಿ ಮಡಿ ಕಟ್ಟಿಡು. ಇದು ಅಮೇರಿಕಾ. ಇಲ್ಲಿಯವರ ಸ್ನೇಹ ನಿನಗೆ ಗೊತ್ತಿಲ್ಲ. ತಿಳಿದುಕೊಳ್ಳುತ್ತೀ" ಎನ್ನುವಷ್ಟರಲ್ಲಿ "ಥ್ರೀ ಮಿನಿಟ್ಸ್ ಪ್ಲೀಸ್" ಎಚ್ಚರಿಕೆ. "ನಾಳೆ ನೋಡೋಣ ಮಗು ಬರ್ತೀ" ಎಂದು ಆತ ಟೆಲಿಫೋನ್ ಕೆಳಗಿಟ್ಟ.

ನಡುಗುವ ಬೆರಳುಗಳಿಂದಲೇ ಫೋನಿನಲ್ಲಿ ನಂಬರು ಸುತ್ತಿದೆ. ಆ ಕಡೆಯಿಂದ ಆಕೆಯ ಉತ್ತರವೂ ಬಂತು. ಬೆವರುತ್ತಲೇ ಮಶಿನ್‌ಗನ್ ಹೊಡೆತದ ವಾಕ್ಸರಣಿಯಲ್ಲಿ ಹೇಳಿ ಮುಗಿಸಿದೆ. ಅವಳಿಗೆ ಏನೂ ತಿಳಿದಿರಲಾರದು. ವಿನಯದಿಂದ "ಮತ್ತೊಮ್ಮೆ ಹೇಳುತ್ತೀರಾ?" ಎಂದಳು. ಮೊದಲ ಚಳಿ ಬಿಟ್ಟಿದ್ದುದರಿಂದ ನಿಧಾನವಾಗಿಯೇ ವಿವರಿಸಿದೆ. ಅವಳು ಸಾವಧಾನವಾಗಿ ಕೇಳಿದಳು. ಕೊನೆಯಲ್ಲಿ "ಎಲ್ಲಾ ಸರಿ. ನನ್ನ ಪತಿ ಮನೆಯಲ್ಲಿಲ್ಲ. ಅವರನ್ನು ಕೇಳದೆ ನಾನು ನಿಶ್ಚಯವಾಗಿ ಹೇಗೆ ಹೇಳಲಿ? ನಾಳೆ ಬೆಳಿಗ್ಗೆ ಐದು ಘಂಟೆಗೆ ಮತ್ತೆ ಫೋನ್ ಮಾಡಿ. ಅಷ್ಟರಲ್ಲಿ ಅವರೂ ಬಂದಿರುತ್ತಾರೆ. ನಿಶ್ಚಯವಾದ ಉತ್ತರ ಹೇಳಬಲ್ಲೆ. ನಿಮ್ಮನ್ನು ಕರೆದೊಯ್ಯಲು ಅನುಕೂಲವಾಗಬಹುದೆಂದು ನಂಬುತ್ತೇನೆ" ಎಂದು ಸಂಭಾಷಣೆಯನ್ನು ಮುಗಿಸಿದಳು.

ಇನ್ನೂ ಪೂರ್ತಿ ಚೇತರಿಸಿಕೊಳ್ಳದೆ ಹಾಗೆಯೇ ಹಾಸಿಗೆಯ ಮೇಲೆ ಹೊರಳಿ ಐದು ಘಂಟೆಗೆ ಎದ್ದು "ನೋಡೇ ಬಿಡೋಣ" ಎಂದು ಮತ್ತೆ ಫೋನ್ ಮಾಡಿದೆ. ಆಕೆಯೇ ಉತ್ತರ ಕೊಟ್ಟಳು: "ಬಹಳ ಸಂತೋಷ. ನನ್ನ ಪತಿಗೆ ಹೇಳಿದೆ. ನಿಮ್ಮನ್ನು ನಮ್ಮೊಡನೆ ಕರೆದೊಯ್ಯಲು ನಮ್ಮಿಬ್ಬರಿಗೂ ಬಹಳ ಆನಂದವಾಗುತ್ತದೆ. ನೀವಿರುವುದೆಲ್ಲಿ? ... ಓ! ಅದು ನಮಗೆ ದಾರಿಯೇ ಆಗುತ್ತದೆ. ಕ್ಷಮಿಸಿ. ಕೊಂಚ ತಡವಾಗುತ್ತದೆ. ೫ – ೪೫ ಕ್ಕೆ ನಿಮ್ಮ ಸ್ಥಳಕ್ಕೆ ಬರುತ್ತೇವೆ. ನಿಮಗೆ ಸಿದ್ಧವಾಗಲು ಕಷ್ಟವಿಲ್ಲವಷ್ಟೆ?" ಎಂದಳು.

ನಾನು ಪರಕೀಯ. ಅವರು ನನ್ನ ಹೆಸರು ಕೂಡ ಎಂದೂ ಕೇಳಿಲ್ಲ. ಕೇವಲ ಟೆಲಿಫೋನಿನ ಮೇಲೆ ನಾನಿತ್ತ ನನ್ನ ಮಿತ್ರನ, ಅವಳ ಮಾವನ ಮಾತಿನ ವಿವರಣೆಯ ಮೇಲೆಯೇ ಅಷ್ಟು ನಂಬಿಕೆ ಬೆಳೆಯುತ್ತದೆಯೇ ಎಂದು ನನಗೆ ವಿಪರೀತ ಆಶ್ಚರ್ಯ. ಕ್ರಮೇಣ ನನಗೆ ಅಲ್ಲಿಯ ಜನ ಅಭ್ಯಾಸವಾಗುತ್ತಾ ಬಂದರು. ಎಲ್ಲರಿಗೂ, ಗಂಡಸೇ ಇರಲಿ, ಹೆಂಗಸೇ ಇರಲಿ, ಆತ್ಮವಿಶ್ವಾಸ, ಧೈರ್ಯ ಇದೆ. ಹೊಸಬನೆಂದೊಡನೆ ನಮ್ಮಲ್ಲಿ ಸಾಧಾರಣವಾದ ಸಂಕೋಚ ಹಿಂದೇಟು, ಮುದುಡಿಕೊಳ್ಳುವ ಮನಸ್ಸು. ಇವರಲ್ಲಿ ಅದಿಲ್ಲ. ಹೊಸಬರೊಡನೆ ಸ್ನೇಹ ಬೇಗ ಬೆಳೆಯುತ್ತದೆ. ಸಂಪರ್ಕ ಸುಲಭವಾಗಿ ಸ್ನೇಹ ಸಕ್ಕರೆಯಾಗಿ ಬೆಳೆಯಬಲ್ಲದು.

ಅವರು ಕೇವಲ ನಡು ಇಪ್ಪತ್ತರ ನವದಂಪತಿಗಳೆಂದು ಅವರನ್ನು ನೋಡಿದಾಗ ತಿಳಿಯಿತು. ೩೫೦ ಮೈಲಿಯ ಪ್ರಯಾಣ. ಹೊಸ ಪರಿಚಯ. ಅವರಿಗೂ ಭಾರತೀಯರ ಪರಿಚಯವಿರಲಿಲ್ಲ. ವಿಚಾರ ವಿನಿಮಯ, ಮಾತುಕತೆ ಧಾರಾಳವಾಗಿ ನಡೆಯಿತು.

ಸ್ಕೂಲನ್ನು ದಾಟಿದೊಡನೆ ಇಬ್ಬರೂ ಮದುವೆಯಾಗಿದ್ದರು. ಇಬ್ಬರೇ ಸಂಸಾರ ನಡೆಸುತ್ತಿದ್ದರು. ಇನ್ನೂ ಮಕ್ಕಳಿಲ್ಲ, ಸ್ವಲ್ಪ ಕಾಲ ಇನ್ನೂ ತಳ್ಳಲಿ ಎಂಬ ಅಭಿಪ್ರಾಯವೂ ಅವರಿಗಿತ್ತು. ಆತ ವೈದ್ಯಕೀಯ ಪರೀಕ್ಷೆಗೆ ಓದುತ್ತಿದ್ದ. ಒಂದು ವರ್ಷದ ಓದು ಉಳಿದಿತ್ತು. ಬಿಡುವಿನ ಸಮಯದಲ್ಲಿ, ರಜಾ ದಿನಗಳಲ್ಲಿ ಅಲ್ಲಿ ಇಲ್ಲಿ ಕೆಲಸ ಹಿಡಿದು

ಕಾರು, ಫೀಸು, ಪುಸ್ತಕ ಇತ್ಯಾದಿಗಳ ವೆಚ್ಚ ತೂಗಿಸಿಕೊಳ್ಳುತ್ತಿದ್ದ. ಆಕೆಯೂ ಕೆಲಸ ಹಿಡಿದಿದ್ದಳು. ಮನೆ ಭಾಡಿಗೆ, ಊಟ, ತಿಂಡಿ, ಬಟ್ಟೆ ವೆಚ್ಚವನ್ನು ಅವಳು ತನ್ನ ಸಂಪಾದನೆಯಲ್ಲಿ ತೂಗಿಸುತ್ತಿದ್ದಳು. ರಾತ್ರಿಯ ಶಿಫ್ಟ್ ಕೆಲಸಗಳು ಅಲ್ಲಿ ಸುಲಭವಾಗಿ ಸಿಗುತ್ತವೆ. ಬರೀ ಹಗಲು ಮಾತ್ರದ ಕೆಲಸಗಳು ಅಷ್ಟು ಸುಲಭವಲ್ಲ. ಕೆಲವು ಸಲ ಇಬ್ಬರೂ ಬೇರೆ ಬೇರೆ ಕಡೆಗೆ ರಾತ್ರಿ ಶಿಫ್ಟ್‌ಗೆ ಹೋಗುತ್ತಿದ್ದರು. ಅನೇಕ ಸಲ ಈತ ಮನೆಗೆ ಬಂದಾಗ ಆಕೆ ಕೆಲಸದ ಮೇಲೆ, ಆಕೆ ಮನೆಗೆ ಬಂದಾಗ ಈತ ಕೆಲಸಕ್ಕೋ, ಶಾಲೆಗೋ ಹೋಗಿರುತ್ತಿದ್ದರು. ದಂಪತಿಗಳಿಗೂ ಭೇಟಿ ಅಪರೂಪ ಆಗುತ್ತಿದ್ದುದೂ ಉಂಟು. ಆದರೂ ಅವರಿಬ್ಬರಲ್ಲೂ ಜೊತೆಯಾಗಿ ದುಡಿದು, ಕನಸು ಕಂಡು, ಜೀವನವನ್ನು ಹಂಚಿಕೊಂಡು, ತಮ್ಮಿಬ್ಬರ ಜೀವನವನ್ನೂ ಇಬ್ಬರ ಒಟ್ಟು ದುಡಿತ, ಧೈರ್ಯದ ಮೇಲೆ ರೂಪಿಸಿಕೊಳ್ಳುವ ಕೆಚ್ಚಿತ್ತು.

ಭಾರತದ ಮದುವೆಯ ಪದ್ಧತಿಗಳ ಮಾತು ಬಂತು. "ಸಾಧಾರಣವಾಗಿ ತಂದೆ, ತಾಯಿ ಎಲ್ಲವನ್ನೂ ವಿಚಾರಿಸಿಕೊಳ್ಳುತ್ತಾರೆ. ಗಂಡು, ಹೆಣ್ಣು ಎದುರು ಬದುರು ನೋಡುವುದು ಉಂಟು. ಅಪರೂಪವಾಗಿ ಎರಡು ವಾಕ್ಯಗಳನ್ನು ಆಡಬಹುದು, ಅಷ್ಟೆ" ಎಂದೆ. "ಕೂಡಿ ಓಡಾಡದೇ ಒಬ್ಬರನ್ನೊಬ್ಬರು ಅರಿಯದೇ ಮದುವೆ ಮಾಡಿಕೊಳ್ಳಲು ಹೇಗೆ ಸಾಧ್ಯ?" ಎಂದು ಅವಳ ಸವಾಲು. "ನಿಜವಾಗಿಯೂ ತಂದೆ ತಾಯಿಗಳ ಮಾತಿನ ಮೇಲೆಯೇ ಮದುವೆಯಾಗುತ್ತೀರಾ? ವಿದ್ಯಾವಂತರು, ಸ್ವಸಂಪಾದನೆಯವರು ಇವರ ಬಗ್ಗೆಯೂ ಈ ಮಾತು ಅನ್ವಯಿಸುತ್ತದೆಯೇ? ನಿಜವಾಗಿ ಹೇಳಿ" ಎಂದು ನನ್ನ ಮುಖವನ್ನೇ ತೀಕ್ಷ್ಣವಾಗಿ ದಿಟ್ಟಿಸಿ ನೋಡಿದಳು. ನನ್ನ 'ಹೌದು' ಎಂಬ ಗಂಭೀರ ಉತ್ತರ ಅವಳನ್ನು ಎಷ್ಟು ಆಶ್ಚರ್ಯಗೊಳಿಸಿ ಎತ್ತಿ ಹಾಕಿತೆಂದರೆ, ಅವಳ ತಲೆ ಕಾರಿನ ಟಾಪಿಗೂ ಹೊಡೆದು ಲಘು ಪೆಟ್ಟನ್ನೂ ತಿಂದಳು! ಪ್ರಯಾಣ ಮುಂದುವರೆಯುತ್ತಾ ಆಯಾಸವಾದಾಗ ಗಂಡನ ತೊಡೆಗೆ ತಲೆಯನ್ನು ಒರಗಿಸಿ ಸಹಜವಾಗಿ ನಿದ್ದೆ ಹೋದಳು.

ನಮ್ಮ ಸಂಪ್ರದಾಯ ಆಕೆಯ ಊಹೆಗೂ ನಿಲುಕದು. ಅವರ ಸಾಮಾಜಿಕ, ಆರ್ಥಿಕ ಸ್ಥಿತಿ, ವಾತಾವರಣಗಳಲ್ಲಿ ಅವರ ಸಂಪ್ರದಾಯ ಬೇರು ಬಂದಿದೆ. ಸಂಸಾರವೂ ಮುಖ್ಯ, ಹೊಣೆ ಹೇಗೆಯೋ ನಿಭಾಯಿಸಿಯೇನು? ಎಂದು ಗಂಡು ಮದುವೆಯಾಗುತ್ತಾನೆ. ಗಂಡನ ಮುಂದಿನ ಅಂತಸ್ತಿಗೆ ಓದು ಮುಖ್ಯ. ಅವನು ಆ ಓದಿನಿಂದ, ತನ್ನ ಮುಂದಿನ ದುಡಿತದಿಂದ ಅಂತಸ್ತನ್ನು ಖಂಡಿತ ಪಡೆಯುತ್ತಾನೆ. ಅವನ ಇಂದಿನ ಓದಿಗೆ ತಾನೂ ಆಸರೆ ಕೊಡಬೇಕು. ನಗುನಗುತ್ತಾ ದುಡಿಯಬೇಕು ಎಂಬ ವಿಶ್ವಾಸ, ನಂಬಿಕೆಯಿಂದ ಹೆಣ್ಣು ಮುಂದೆ ಬರುತ್ತಾಳೆ. ಯಾವಾಗ ಮದುವೆಯಾದರೂ ಸರಿ, ನಮ್ಮ ಸಂಸಾರವನ್ನು ನಾವೇ ನಡೆಸಬೇಕು, ನಾವೇ ತೂಗಿಸಿಕೊಳ್ಳಬೇಕು ಎಂಬ ಕೆಚ್ಚನ್ನೂ ಇವರ ಸಂಪ್ರದಾಯ ಇವರಿಗೆ ಕೊಡುತ್ತದೆ.

ನಮ್ಮ ದೇಶದ ವಾತಾವರಣ ಬೇರೆ. ಭಾವಿ ಮಾವ ದುಡ್ಡು ಕೊಡುತ್ತಾನೆಯೇ, ಕೆಲಸ ಕೊಡಿಸಬಲ್ಲನೇ ಎಂಬುದನ್ನು ಹುಡುಗ ಮತ್ತು ಆವನ ತಂದೆ ಮೊದಲು ವಿಚಾರಿಸಿಕೊಳ್ಳುತ್ತಾರೆ. ಗಂಡು ಹುಡುಕುವಾಗ ಹುಡುಗಿಯ ಮತ್ತು ತಂದೆಯ ಪ್ರಥಮ ಪ್ರಶ್ನೆ "ಗಂಡಿಗೆ ಸರ್ಕಾರಿ ಕೆಲಸ ಇದೆಯೆ?" ಕೆಲಸ ಇರುವ ಗಂಡು ಭಾವಿ ಮಾವನಿಗೆ "ಇನ್‌ಫ್ಲುಯೆನ್ಸ್" ಎಷ್ಟಿದೆ ಎಂದು ಲೆಕ್ಕ ಹಾಕುತ್ತಾನೆ. ಕೆಲಸ ಮಾಡುವ ಹೆಣ್ಣು ಮದುವೆಯಾಗಬೇಕೇ? ಎಂಬ ಮೂಲಭೂತ ಪ್ರಶ್ನೆ ಕೇಳುತ್ತಾಳೆ. ಇಲ್ಲವೆ ನನ್ನ ಸಂಬಳದ ಎರಡರಷ್ಟಾದರೂ ಅವನಿಗಿಲ್ಲದ ಮೇಲೆ ಮದುವೆಯಾಗಿ ನಾನೇಕೆ ಬಡವಳಾಗಬೇಕು ಎನ್ನುತ್ತಾಳೆ.

ಇನ್ನೂ ಏನೇನೋ ಮಾತುಕತೆ ಬೆಳೆದು ಪ್ರಯಾಣ ಮುಗಿಯುವ ವೇಳೆಗೆ "ನಿಮ್ಮ ಪದ್ಧತಿ ನನ್ನ ತಲೆಗೆ ಸುತರಾಂ ಹತ್ತುವುದಿಲ್ಲ. ತಿಳಿದುಕೊಳ್ಳುವ ಯೋಜನೆ ಬಿಟ್ಟೆ" ಎಂದಳು ಆಕೆ.

"ನಮ್ಮೂರಲ್ಲಿ ನಿಮ್ಮಿಬ್ಬರನ್ನೂ ಹುಚ್ಚ

ಅಂದುಕೊಳ್ಳುತ್ತಾರೆ. ಅವರಿಗೂ ನಿಮ್ಮ ಪದ್ಧತಿ ತಲೆಗೆ ಹತ್ತುವುದು ಸುತರಾಂ ಸಾಧ್ಯವಿಲ್ಲ" ಎಂದು ನಾನು ನಕ್ಕು ಹೇಳಿದೆ.

"ನಾವು ಟೊರಾಂಟದಿಂದ ಪಿಟ್ಸ್‌ಬರ್ಗಿಗೆ ಹಿಂತಿರುಗುವಾಗ ನೀವೂ ನಮ್ಮೊಡನೆಯೇ ಮರಳಬಹುದು. ನಾವು ಹೊರಡುವ ಸರಿಯಾದ ಕಾಲವನ್ನು ನಿಮಗೆ ತಿಳಿಸುತ್ತೇವೆ" ಎಂದು ನನ್ನ ಮಿತ್ರನ ಮನೆಯ ಬಾಗಿಲಲ್ಲಿ ಅವರು ನನ್ನನ್ನು ಬೀಳ್ಕೊಟ್ಟರು.

ಬಟಾಣಿ ಕಾಳಿನ ಉಪ್ಪಿಟ್ಟನ್ನು ತಿನ್ನುತ್ತಾ ಮಿತ್ರಮೂರ್ತಿಯಲ್ಲಿ ಒಪ್ಪಿಕೊಂಡೆ, "ಈ ಭೇಟಿ ಸಾಧ್ಯ ಎಂದು ನಾನು ನಮ್ಮ ದೇಶದಲ್ಲಿ ನಂಬುತ್ತಿರಲಿಲ್ಲ" ಎಂದು.

ಪಿಟ್ಸ್‌ಬರ್ಗ್‌ಗೆ ಹಿಂದಿರುಗಿದಾಗ ಅಮೇರಿಕನ್ ದಂಪತಿಗಳಿಗೆ ನಾನು ಭಾರತದಿಂದ ಕೊಂಡು ಹೋಗಿದ್ದ ಗಂಧದ, ದಂತದ ಸಣ್ಣ ಸಣ್ಣ ಸಾಮಾನುಗಳನ್ನು ಬಹುಮಾನವಾಗಿ ಇತ್ತೆ. ಅವರು ಸಾಮಾನುಗಳ ಅಂದವನ್ನು ಬಹುವಾಗಿ ಮೆಚ್ಚಿದರು.

*

ವ್ಯಾಸಂಗದ ಭಾಗವಾಗಿ ಕೈಗಾರಿಕೆ, ಶೈಕ್ಷಣಿಕ ಕೇಂದ್ರಗಳಿಗೆ ಭೇಟಿ ಕೊಡುತ್ತಿದ್ದೆ. ಎಲ್ಲ ಪ್ರವಾಸಿಗರಂತೆ ನಾನೂ ಒಂದು ಕ್ಯಾಮೆರಾ ಕೊಂಡುಕೊಂಡೆ. ಇನ್ನೂ ಹೊಸದಾದುದರಿಂದ ಕ್ಯಾಮೆರಾವನ್ನು ಹೆಗಲಲ್ಲಿ ಏರಿಸಿಕೊಂಡೇ ಸುತ್ತುತ್ತಿದ್ದೆ. ನವಂಬರ್ ತಿಂಗಳ ಕೊನೆಯೂ ಬಂತು. ಚಳಿಗಾಲ ಮುಂದುವರಿದು ಹಿಮವೂ ಸುರಿಯುತ್ತಿತ್ತು. ಶೈಕ್ಷಣಿಕ ಕೇಂದ್ರದ ಒಂದೇ ಒಂದು ದಿನದ ಭೇಟಿಗಾಗಿ ಚಿಕಾಗೋವಿನಿಂದ ಪಶ್ಚಿಮಕ್ಕಿರುವ ಡಾವೆನ್‌ಪೋರ್ಟ್‌ಗೆ ಹೋಗಿದ್ದೆ. ಸಂಜೆ ೫–೩೦ ಘಂಟೆಯ ಬಸ್ಸನ್ನು ಹಿಡಿದು ಚಿಕಾಗೋವಿಗೆ ಮರಳಬೇಕಿತ್ತು. ಜೊತೆಗೆ ಇನ್ನೂ ಮೂವರು ಗೆಳೆಯರಿದ್ದರು.

ನಮ್ಮದೇ ಚೆಪ್ಪತನದಿಂದ ಬಸ್ಸು ತಪ್ಪಿತು.

ಮುಂದಿನ ಬಸ್ಸು ರಾತ್ರಿ ೮–೩೦ ಘಂಟೆಗೆ. ಅಂದರೆ ಮೂರು ಘಂಟೆಗಳು ತಡೆದು. ನಿಲ್ದಾಣದಲ್ಲಿ ಕುಳಿತು ಮಾಡುವದೇನು ಎಂದು ಮತ್ತೆ ಊರು ಸುತ್ತಲು ಹೊರಟೆವು. ಒಂದೇ ಚಳಿ, ಹಿಮ. ನಡೆದಾಡುವ ಹುರುಪು ಎಷ್ಟು ಉಳಿದೀತು? ಹದಿನೈದು ನಿಮಿಷಗಳಲ್ಲೇ ಬಿಸಿ ಕಾಫಿಯ ಯೋಜನೆ ಹೆಚ್ಚಾಯಿತು. ಸಿಕ್ಕಿದ ಒಂದು ಹೋಟೆಲಿಗೆ ನುಗ್ಗಿದೆವು. ಒಳ ಊರಾದುದರಿಂದ ಪ್ರವಾಸಿಗಳ ಸಂಖ್ಯೆ ಕಡಿಮೆ. ಭಾರತೀಯರು ಅಪರೂಪವೇ. ನಮ್ಮ ಬಗ್ಗೆ ಎಲ್ಲರಿಗೂ ಬಹಳ ಕುತೂಹಲ. ಏನೇನೋ ಪ್ರಶ್ನೆಗಳು. ಹಾಗೆಯೇ ರಾತ್ರಿಯ ಊಟವನ್ನೂ ಅಲ್ಲಿಯೇ ಮುಗಿಸಿದೆವು.

ಅಲ್ಲಿಂದ ಹೊರಟು ಬಸ್ ನಿಲ್ದಾಣಕ್ಕೆ ಬೇಗ ಬೇಗ ಹೆಜ್ಜೆ ಹಾಕಿದೆವು. ಅರ್ಧ ದಾರಿಯಲ್ಲಿ ನನ್ನ ಗುಂಡಿಗೆ ಒಡೆಯಿತು. ಬಗಲಲ್ಲಿ ಕ್ಯಾಮೆರಾ ತೂಗಾಡುತ್ತಿಲ್ಲ. ಮಿತ್ರರು ಸಮಾಧಾನ ಹೇಳಿ "ಎಲ್ಲಿಟ್ಟೆ ಸರಿಯಾಗಿ ಜ್ಞಾಪಿಸಿಕೋ" ಎಂದು ಧೈರ್ಯ ಹೇಳಲಾರಂಭಿಸಿದರು. ಥಟ್ಟನೆ ನೆನಪಾಯಿತು. ಹೋಟೆಲಿಗೆ ನುಗ್ಗಿದಾಗ ಉಸ್ಸಪ್ಪ ಎನ್ನುತ್ತ ಹೆಗಲಿನ ಮೇಲೆ ಏಕೆ ಭಾರ ಎಂದು ಕ್ಯಾಮೆರಾವನ್ನು ತೆಗೆದು ಮೇಜಿನ ಮೇಲೆ ಇಟ್ಟಿದ್ದೆ. ಬರುವಾಗ ಮಾತಿನ ಭರದಲ್ಲಿ ಅದನ್ನು ಅಲ್ಲಿಯೇ ಮರೆತಿದ್ದೆ.

ಮರಳಿ ಪಡೆಯುವೆನೇ? ಕ್ಯಾಮೆರಾದ ಮೇಲೆ ನನ್ನದೆಂಬ ಯಾವ ಗುರುತೂ ಇರಲಿಲ್ಲ. ನೋಡಿಯೇ ಬಿಡುವುದು ಎಂದು ಹೋಟೆಲಿಗೆ ಮರಳಿದೆವು

ಬಾಗಿಲಲ್ಲಿ ನಮ್ಮನ್ನು ಕಂಡೊಡನೆಯೇ ಅಲ್ಲಿಯ "ಮಾಣಿ" ನಮ್ಮನ್ನು ಸ್ವಾಗತಿಸಿ "ಕ್ಯಾಮೆರಾಕ್ಕಾಗಿ ಬಂದಿರಾ?" ಎಂದು ಕೇಳಿದ. "ಹೌದು" ಎಂದೆ ದೀರ್ಘವಾಗಿ ಉಸಿರು ಎಳೆಯುತ್ತಾ. ಒಳಗೆ ತೆಗೆದಿಟ್ಟಿದ್ದಲ್ಲಿಂದ ಕ್ಯಾಮೆರಾ ತಂದುಕೊಟ್ಟ. "ನೀವು ಹೋದ ಕೂಡಲೇ ನೀವು ಕ್ಯಾಮೆರಾ ಮರೆತುಬಿಟ್ಟು ಹೋಗಿದ್ದನ್ನು ಗಮನಿಸಿದೆ. ತೆಗೆದು ಒಳಗಿಟ್ಟೆ. ನಿಮ್ಮ ಮಾತಿನಿಂದ ನೀವು ಇಂದಿನ ೮–೩೦ ಘಂಟೆಯ ಬಸ್ಸಿನಲ್ಲಿ ಚಿಕಾಗೋವಿಗೆ ಮರಳುವವರು ಎಂದು ತಿಳಿದಿತ್ತು. ನಿಲ್ದಾ-

ಣಕ್ಕೆ ಫೋನ್ ಮಾಡಿ ಹೇಳಿದೆ. 'ಇಂದಿನ ೮-೩೦ ಘಂಟೆಗೆ ಚಿಕಾಗೋವಿಗೆ ಹೋಗುವ ಬಸ್ಸಿಗೆ ಭಾರತೀಯರು ಕೆಲವರು ಬರುತ್ತಾರೆ. ಅವರಲ್ಲೊಬ್ಬರು ಇಲ್ಲಿ ತಮ್ಮ ಕ್ಯಾಮೆರಾವನ್ನು ಮರೆತು ಬಿಟ್ಟಿದ್ದಾರೆ. ಅವರಿಗೆ ನೆನಪು ಬರದೆ ಬೇರೆ ಕೆಲಸಗಳನ್ನು ಮುಗಿಸಿಕೊಂಡು ನಿಲ್ದಾಣಕ್ಕೆ ಎಂಟು ಘಂಟೆಯ ಮೇಲೆ ಬರಬಹುದು. ನನ್ನ ಪಾಳಿ ಹೇಗಿದ್ದರೂ ಎಂಟು ಘಂಟೆಗೆ ಮುಗಿಯುತ್ತದೆ. ನನ್ನ ಮನೆಗೆ ಹೋಗುವ ದಾರಿಯೂ ಅದೇ ಕಡೆ. ನಾನು ಕ್ಯಾಮೆರಾವನ್ನು ತಂದು ನಿಲ್ದಾಣದಲ್ಲಿ ನಿಮ್ಮಲ್ಲಿಗೆ ಕೊಡುತ್ತೇನೆ. ನೀವು ಅವರಿಗೆ ಕೊಟ್ಟುಬಿಡಿ' ಎಂದು. ನೀವು ಈಗ ಅವರಿಗೆ ನಿಮ್ಮ ಕ್ಯಾಮೆರಾವನ್ನು ಮರಳಿ ಪಡೆದದ್ದಾಯಿತು ಎಂದೂ ನಾನು ಅಲ್ಲಿಗೆ ಬರುವುದಿಲ್ಲವೆಂದೂ ತಿಳಿಸಿಬಿಡಿ ಇಲ್ಲದಿದ್ದರೆ ನನ್ನನ್ನು ಎದುರು ನೋಡುತ್ತಾ ಕಾಯುತ್ತಾ ಇರಬಹುದು" ಎಂದು ಹೇಳಿದ.

ಧನ್ಯವಾದಗಳನ್ನರ್ಪಿಸಿ ಬಸ್ ನಿಲ್ದಾಣಕ್ಕೆ ಬಂದೆವು. ಬಾಗಿಲಲ್ಲಿ ಬಂದೊಡನೆಯೇ ಅಲ್ಲಿಯ ಟಿಕೇಟ್ ಮಾರುವವನು "ಏನೂ ಯೋಚಿಸಬೇಡಿ. ನಿಮ್ಮ ಕ್ಯಾಮೆರಾ ಹೋಟಲಲ್ಲಿ ಉಳಿದಿದೆ. ನೀವು ಮತ್ತೆ ಚಳಿ, ಹಿಮದಲ್ಲಿ ಹೋಗಬೇಕಿಲ್ಲ. ಅವರೇ ಮನೆಗೆ ಹೋಗುವಾಗ ತಂದುಕೊಡುತ್ತಾರೆ. ಹೋಟೆಲಿನಿಂದ ಟೆಲಿಫೋನ್ ಬಂದಿತ್ತು" ಎಂದ. ಕ್ಯಾಮೆರಾವನ್ನು ಪಡೆದಿದ್ದಾಯಿತು ಎಂದು ತಿಳಿಸಿ ಅವನಿಗ ಧನ್ಯವಾದಗಳನ್ನರ್ಪಿಸಿದೆ.

ಮರೆತು ಬಿಟ್ಟ ಸಾಮಾನುಗಳನ್ನು ತೆಗೆದಿಟ್ಟಿದ್ದು ಮರೆತವರು ಬಂದು ಕೇಳಿದಾಗ ಹಿಂದಿರುಗಿ ಕೊಡುವ ಹಲವು ಜನರನ್ನು ನೋಡಿದ್ದೇನೆ. ಕೇವಲ ಅಪರಿಚಿತನೊಬ್ಬ ಸಾಮಾನನ್ನು ಮರೆತಾಗ ಅವನನ್ನು ತಾವಾಗಿ ಹುಡುಕಿಕೊಂಡು ಹೋಗಿ ಅದನ್ನು ಅವನ ಕೈ ಸೇರಿಸಬೇಕು ಎನ್ನುವಷ್ಟು ಕ್ರಿಯಾತ್ಮಕ ಉತ್ಸಾಹ ಸ್ನೇಹಭಾವ ಇರುವವರು ವಿರಳವೇ ಸರಿ.

*

ಡಿಸೆಂಬರ್ ತಿಂಗಳ ಕೊನೆಗೆ ಅಲ್ಲಿಯ ವಾಸದ ಅವಧಿ ಮುಗಿಯುತ್ತಾ ಬಂದು, ಭಾರತಕ್ಕೆ ಮರಳುವ ಸಮಯವೂ ಬಂತು. ಮಿತ್ರ ಮೂರ್ತಿಯನ್ನು ಮತ್ತೆ ಭೇಟಿ ಮಾಡಲಾಗಲಿಲ್ಲ. ಹೋಗಿ ಬರುತ್ತೇನೆಂದು ಬಾಯಿ ಮಾತಿನಲ್ಲೇ ಹೇಳೋಣ ಎಂದು ನಾನು ಅವನಿಗೆ ಟ್ರಂಕ್ ಟೆಲಿಫೋನ್ ಮಾಡಿದೆ. ಐದು ನಿಮಿಷ ಟೋಪಾಂಡ ಕಡೆಯಿಂದ ಉತ್ತರವೇ ಇಲ್ಲ. ನನಗೆ ಸ್ವಲ್ಪ ಆಶ್ಚರ್ಯವೇ ಆಯಿತು.

ಐದು ನಿಮಿಷಗಳ ನಂತರ ಬಂದ ಟೋಪಾಂಡಾದಲ್ಲಿಯ ಟೆಲಿಫೋನ್ ಆಪರೇಟರಳ ಉತ್ತರ ಇದು: "ನಿಮ್ಮ ಮಿತ್ರರು ಮನೆಯಲ್ಲಿರಲಿಲ್ಲ. ಬೇರೆ ಎಲ್ಲಿದ್ದಾರೆ, ಅಲ್ಲಿಯ ಟೆಲಿಫೋನ್ ನಂಬರು ಏನು ಎಂದು ವಿಚಾರಿಸಿದೆ. ಅವರು ಊರಲ್ಲೇ ಇಲ್ಲ. ನ್ಯೂಯಾರ್ಕ್‌ನಲ್ಲಿ ನಡೆಯುವ ಹೊಸ ವರ್ಷದ (ಜನವರಿ ಒಂದರ) ಉದಯದ ಸಂಭ್ರಮ ನೋಡಲು ಅಲ್ಲಿಗೆ ಹೋಗಿದ್ದಾರೆ. ಅಲ್ಲಿ ಅವರು ಎಲ್ಲಿ ಇಳಿದುಕೊಳ್ಳುತ್ತಾರೆ, ಯಾವ ಟೆಲಿಫೋನ್‌ನಲ್ಲಿ ಸಿಗುತ್ತಾರೆ ಎಂದು ಯಾರಿಗೂ ಹೇಳಿಲ್ಲ. ಇನ್ನು ಎರಡು ದಿನ ಕಳೆದು ಹಿಂದಿರುಗುತ್ತಾರೆ. ಎರಡು ದಿನ ಕಳೆದು ನೀವು ಕೇಳಿದಾಗ ಅವರ ಸಂಪರ್ಕ ಏರ್ಪಡಿಸಲು ನಮಗೆ ಸಂತೋಷವಾಗುವುದು. ಈಗ ನಿಮ್ಮಿಬ್ಬರ ಸಂಪರ್ಕ ಏರ್ಪಡಿಸಲಾಗದೇ ಹೋದುದಕ್ಕೆ ವ್ಯಥೆಯಾಗುತ್ತದೆ. ನೀವು ಬೇಕೆಂದು ಕೇಳಿದ ವ್ಯಕ್ತಿ ಸಿಗದೆ ಹೋದುದಕ್ಕೆ ವ್ಯಥೆಯಾಗುತ್ತದೆ. ನೀವು ಬೇಕೆಂದು ಕೇಳಿದ ವ್ಯಕ್ತಿ ಸಿಗದೆ ಹೋದುದರಿಂದ ನಿಮಗೆ ಯಾವ ಛಾರ್ಜೂ ಇಲ್ಲ. ನಮಸ್ಕಾರ."

ಟೆಲಿಫೋನ್ ಕಂಪೆನಿ ಇಷ್ಟು ಮುತುವರ್ಜಿ ವಹಿಸಿ ಪೂರ್ಣ ಸಮಾಚಾರ ದೊರಕಿಸಿಕೊಟ್ಟಿದ್ದು ನನಗೆ ಆಶ್ಚರ್ಯವಾಯಿತು. ನಮ್ಮ ದೇಶದಲ್ಲಿ "ಕಾಲ್" ಯಾವಾಗ ದೊರೆಯಬಹುದು ಎಂಬ ಸುಲಭ ಪ್ರಶ್ನೆಗೆ ಕೂಡ ಸರಿಯಾದ ಉತ್ತರ ದೊರೆಯುವ ಧೈರ್ಯ ಕಡಿಮೆಯೇ.

ನಾನು ಕರೆದಿದ್ದ ಸಂಗತಿ ತಿಳಿದು ಮೂರ್ತಿಯೇ ಅವನು ಹಿಂತಿರುಗಿದ ಮೇಲೆ ನನಗೆ ಫೋನ್

ಮಾಡಿದ. ಮುಖತಃ ಇಲ್ಲದಿದ್ದರೂ, ನೇರವಾದ ಮಾತು, ಧ್ವನಿಯಿಂದ ನನ್ನನ್ನು ಬೀಳ್ಕೊಟ್ಟ.

*

ಪ್ರವಾಸದ ಎಲ್ಲಾ ಅನುಭವಗಳೂ ಇಷ್ಟೇ ಸಿಹಿ ಇದ್ದುವೆಂದು ಹೇಳುವುದಿಲ್ಲ. ಕಟು ಅನುಭವಗಳೂ ಇರಲೇ ಇಲ್ಲವೆನ್ನುವುದೂ ನಿಜವಲ್ಲ.

ಕಟು ಅನುಭವಗಳು ಮನಸ್ಸಿನಲ್ಲಿ ನಿಲ್ಲುವಂತೆ ಸಿಹಿ ಅನುಭವಗಳೂ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುತ್ತವೆ.

ಕೆಲವು ಘಟನೆಗಳು, ಅನುಭವಗಳ ಹಣ, ದೇಶ, ಸಮಾಜ ಇವುಗಳಿಗಿಂತ ವ್ಯಕ್ತಿತ್ವ ವಿಕಾಸವನ್ನು ಹೆಚ್ಚು ಅವಲಂಬಿಸಿರುತ್ತವೆ. ನಮ್ಮ ವ್ಯಕ್ತಿಜೀವನದಲ್ಲೂ ಕಾರ್ಯರಂಗದಲ್ಲೂ ಅಂತಹುದೇ ವಿಕಾಸ ಹೊಂದುವುದು ಹೆಚ್ಚಾಗಿ ವ್ಯಕ್ತಿಗಳ ನಮ್ಮನ್ನೇ ಅವಲಂಬಿಸಿರುತ್ತದೆ.

ಸ್ನೇಹಪರತೆ, ಕೇಳಿದವರಿಗೆ ನಮ್ಮಿಂದಾಗುವಷ್ಟು ಪೂರ್ಣ ಸಹಾಯ, ನಾವೇ ಮುಂದಾಗಿ ಇತರರಿಗೆ ಸಹಾಯಮಾಡುವ ಸೌಜನ್ಯ, ಬೇರೆಯವರಿಗೆ ಮಾಡುವ ಕೆಲಸವಾದರೂ ಅದರಲ್ಲಿ ಮುತುವರ್ಜಿ ಇವು ಹೆಚ್ಚಾಗಿ ಅವರವರ ವ್ಯಕ್ತಿಶಃ ಮನೋಧರ್ಮವನ್ನೇ ಅವಲಂಬಿಸಿವೆ

ಮೂರನೆಯವರು ಎಂದರೆ ಸಂಕೋಚ, ಸಂಶಯ ಮುಂದುಡಿಕೊಳ್ಳುವ ಮನೋಭಾವ ಹೋಗಿ ಆತ್ಮ ವಿಶ್ವಾಸದ ಆಧಾರದ ಮೇಲೆ ನಿಂತ ಸಹಜ ಸ್ನೇಹಭಾವ ಸಾಮಾಜಿಕ ವಾತಾವರಣದ ಪ್ರಶ್ನೆಯೇ ಆದರೂ ವ್ಯಕ್ತಿಯ ಪಾತ್ರವೂ ಹೆಚ್ಚಿನದು

ನಾವೇಕೆ ಹೀಗಾಗಬಾರದು ? *



## "ಸರ್ವಾಧಿಕಾರಿಯ ಆಜ್ಞೆ"

ಅದೊಂದು ಸರ್ವಾಧಿಕಾರಿಯ ರಾಜ್ಯ. ಯಾರೋ ಒಬ್ಬ, ಸರ್ವಾಧಿಕಾರಿಯ ಮನೆಯ ಮುಂದೆ, 'ಸರ್ವಾಧಿಕಾರಿಯಷ್ಟು ಮಹಾ ಮೂರ್ಖ ಬೇರೊಬ್ಬನಿಲ್ಲ' ಎಂದು ಬರೆದನು. ಕಾಲಾಂತರದಲ್ಲಿ ಹಿಗೇ ಬರೆದವನನ್ನು ಪೋಲೀಸರು ಶೋಧಿಸಿ ಬಂಧಿಸಿದರು. ಅವನ ಮೇಲೆ ಆರೋಪಗಳ ಪಟ್ಟಿಯನ್ನು ಅಧಿಕಾರಿಗಳು ತಯಾರಿಸುವುದರಲ್ಲಿದ್ದರು. ಅಷ್ಟರಲ್ಲಿ ಸರ್ವಾಧಿಕಾರಿಯಿಂದ ಅವರಿಗೆ ಫೋನ್ ಕಾಲ್ ಬಂತು.

"ನಾನು ಸರ್ವಾಧಿಕಾರಿ ಮಾತನಾಡೋದು. ಆರೋಪಗಳ ಪಟ್ಟಿ ತಯಾರಾಯ್ತೆ ? ಯಾವ ಆರೋಪಣೆಯನ್ನು ನಮೂದಿಸುತ್ತೀರಿ ?"

"ಇನ್ನೂ ಇಲ್ಲ ಮಹಾಸ್ವಾಮೀ. ಮಾನನಷ್ಟದ ಆರೋಪ ಹೊರಿಸಬೇಕೆಂದಿದ್ದೇವೆ."

"ಸರಿ ಈ ಅಪರಾಧಕ್ಕೆ ಅತಿ ಹೆಚ್ಚು ಶಿಕ್ಷೆ ಯಾವುದು"

"ಎರಡು ವರ್ಷ ಸಶ್ರಮ ಶಿಕ್ಷೆ."

"ಇಷ್ಟೇ ಏನು ? ಛೇ ಇದು ಶಕ್ಯವಿಲ್ಲ. ಮರಣದಂಡನೆಯನ್ನೇ ವಿಧಿಸಬೇಕು."

"ಮರಣದಂಡನೆಯನ್ನು ಕೇವಲ ಮೂರು ಅಪರಾಧಗಳಲ್ಲಿ ಮಾತ್ರ ವಿಧಿಸಬಹುದು. ಒಂದು ಖೂನಿ ಅಪರಾಧಕ್ಕೆ. ಎರಡನೇಯದಾಗಿ ದೇಶದ್ರೋಹಕ್ಕೆ ಮತ್ತು ಮೂರನೆಯದಾಗಿ ಸರ್ಕಾರಿ ರಹಸ್ಯವನ್ನು ಬಯಲಿಗೆಳೆದವರಿಗೆ......"

"ಸರಿ, ಸರಿ; ಆತನ ಮೇಲೆ ಸರ್ಕಾರಿ ರಹಸ್ಯ ಸ್ಫೋಟ ಮಾಡಿದನೆಂದೇ ಅಪರಾಧ ಹೊರಿಸಿರಿ" ಸರ್ವಾಧಿಕಾರಿ ಅಪ್ಪಣೆಯಿತ್ತ.

— ಅನಂತ ಕಲ್ಲೋಳ

# ಇದುವೆ ಜೀವ ಇದು ಜೀವನ

ಸುಮಾರು ಐದು ದಶಕಗಳ ಕಾಲ ಕನ್ನಡ ರಂಗಭೂಮಿ ಹಾಗೂ ಚಿತ್ರರಂಗಕ್ಕೆ ಸೇವೆ ಸಲ್ಲಿಸಿ, ಅದ್ಭುತ ಪ್ರಶಂಸೆ ಪಡೆದ ಆರ್. ನಾಗೇಂದ್ರರಾಯರ ಜನ್ಮದಿನೋತ್ಸವದ ಅಂಗವಾಗಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಅವರ ಸನ್ಮಾನ ಸಮಾರಂಭ ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮವನ್ನು ವೀಕ್ಷಿಸುವ ಸುಸಂದರ್ಭ ನನ್ನ ಪಾಲಿಗೂ ಬಂದಿತ್ತು. ಪ್ರಮುಖ ಕನ್ನಡ ಸಾಹಿತಿಗಳಿಂದಲೂ ಖ್ಯಾತ ನಟಸಾರ್ವಭೌಮರಿಂದಲೂ ಅಲಂಕೃತವಾದ ಅಂದಿನ ಸಭೆಯಲ್ಲಿ ನಾಗೇಂದ್ರರಾಯರ ಸೇವೆಯನ್ನು ಮನ ತುಂಬಿ ಹೊಗಳಿ ಪ್ರಶಂಸಿಸಿದವರಲ್ಲಿ ಗುಬ್ಬಿ ವೀರಣ್ಣನವರೂ ಒಬ್ಬರು. ಅವರು ನಾಗೇಂದ್ರ ರಾಯರ ಹಿಂದಿನ ನೆನಪುಗಳನ್ನು ಮೆಲುಕು ಹಾಕುತ್ತಾ "ಅಂದು ನಾಗೇಂದ್ರ ರಾಯರು ಹಾಡುತ್ತಿದ್ದರೆ ಪ್ರೇಕ್ಷಕವರ್ಗ ತನ್ಮಯತೆಯಿಂದ ತಲೆದೂಗುತ್ತಿತ್ತು. ಅಂದು ಅವರು ಹಾಡುತ್ತಿದ್ದ ಕೆಲವು ಸಾಲುಗಳು ಈಗಲೂ ನನ್ನ ಕಿವಿಯಲ್ಲಿ ಗುಂಯ್‌ಗುಡುತ್ತಿವೆ ಆ ಸಾಲುಗಳೂ ನೆನಪಿವೆ" ಎಂದು ಹೇಳಿದಾಗ ಸಭೆ ಅವರನ್ನು ಹಾಡಲು ಉತ್ತೇಜಿಸಿತು.

ವೀರಣ್ಣನವರು ಕಣ್ಣು ಮಿಟುಕಿಸಿ, ಚಿಟಿಕೆ ಹಾರಿಸಿ, ಹೇಳಿದರು: "ಹಾಂ ಹೌದು. ನಾನೀಗ ಹಾಡಬಹುದು. ಆದರೆ ಅಂದು ನಾಗೇಂದ್ರ ರಾಯರು ಹಾಡುತ್ತಿದ್ದರೆ ಹೊರಗಿನಿಂದ ಪ್ರೇಕ್ಷಕರು ಒಳಗೆ ಸಾಗುತ್ತಿದ್ದರು. ಈಗ ನಾನು ಹಾಡಲು ಶುರು ಮಾಡಿದರೆ ನೀವೆಲ್ಲಾ ಒಂದೇ ನೆಗೆತಕ್ಕೆ ಹೊರಗೆ ಓಡುತ್ತೀರಿ"

—ಎಂ. ಕೆ. ಮಂಜುನಾಥ

ನನ್ನ ಅಕ್ಕನ ಮಗಳು ಜಯಂತಿ ೪ ವರ್ಷದವಳಾದರೂ ಬಹು ವಾಚಾಳಿ. ಸಲ್ಲದ ಪ್ರಶ್ನೆಗಳನ್ನು ಕೇಳುವುದರಲ್ಲಂತೂ ಬಲು ಜಾಣೆ

ಅಂದು ಭಾನುವಾರವಾದ್ದರಿಂದ "ಎಮ್ಮೆ ತಮ್ಮಣ್ಣ" ಸಿನಿಮಾಕ್ಕೆಂದು ಹೊರಟಿದ್ದೆ. ಎಲ್ಲಿದ್ದಳೋ ಜಯಂತಿ, ಪ್ರತ್ಯಕ್ಷವಾಗಿಯೇ ಬಿಟ್ಟಳು ನಾನೂ ಬರುತ್ತೇನೆಂತ. ಇನ್ನು ಎದುರುಂಟೇ ? ಸರಿ, ಕರೆದುಕೊಂಡೇ ಹೊರಟೆ.

ದಾರಿಯುದ್ದಕ್ಕೂ ಅವಳ ಪ್ರಶ್ನೆಗಳಿಗೆ ಉತ್ತರಿಸುತ್ತಾ, ಟಿಕೆಟ್ ತೆಗೆದುಕೊಂಡು ಥಿಯೇಟರ್ ಪ್ರವೇಶಿಸಿದೆ. ಸರಿ, ಅವಳ ಮತ್ತೊಂದು ಪ್ರಶ್ನೆ ಸಿದ್ಧವಾಗಿತ್ತು—

"ಚಿಕ್ಕಮ್ಮಾ, ಹಣ ಕೊಟ್ಟು ತೆಗೆದುಕೊಂಡ ಟಿಕೆಟ್ಟನ್ನು ಬಾಗಿಲಲ್ಲಿ ನಿಂತಿರುವ ಅವನಿಗೇಕೆ ಕೊಟ್ಟೆ ?"

ಉತ್ತರಿಸಿ ಉತ್ತರಿಸಿ ಸಾಕಾಗಿದ್ದ ನಾನು, 'ಸುಮ್ಮನಿರೆ' ಎಂದು ಗದರಿಸಿದೆ. ಫಲವಾಗಿ ಪೆಪ್ಪರಮೆಂಟು, ಬಿಸ್ಕತ್, ಕಡಲೇ ಕಾಯಿಯ ದಂಡವನ್ನೂ ತೆತ್ತೆ.

ನನ್ನ ಅದೃಷ್ಟ, ಸಿನಿಮಾವನ್ನು ಮೌನವಾಗಿಯೇ ನೋಡಿದಳು. ಸುಖಾಂತ್ಯವಾದ್ದರಿಂದ ಸಿನಿಮಾ, ಮದುವೆಯಲ್ಲಿ ಮುಕ್ತಾಯವಾಗಿತ್ತು.

ಮನೆಗೆ ಹಿಂತಿರುಗಿದ ಮೇಲೆ ಕೇಳಿದಳು,-

"ಅವರು ಮದುವೆ ಏಕೆ ಮಾಡಿಕೊಳ್ತಾರೆ?"

"ನನಗೆ ಗೊತ್ತಿಲ್ಲಾ, ಹೋಗೇ." ಪುನಃ ಕೇಳಿದಳು—

"ಸಿನಿಮಾ ಮುಗಿಸುವುದಕ್ಕಾ ?"

ಅಳಬೇಕೋ, ನಗಬೇಕೋ ತಿಳಿಯಲಿಲ್ಲ ನನಗೆ.

—ಶೈಲಾ. ಬಿ. ಅಗಡಿ

ನನ್ನ ಮಿತ್ರನ ಅಂಗಡಿಯಲ್ಲಿ ಕುಳಿತಿದ್ದೆ. ಮಧ್ಯಾಹ್ನದ ರಣ ಬಿಸಿಲು. ಅಂಗಡಿಯಲ್ಲಿ ಗಿರಾಕಿಗಳು ಇದ್ದಿಲ್ಲವಾದ್ದರಿಂದ ನನ್ನ ಮಿತ್ರ

ಬೀದಿಯ ಕಡೆ ಶೂನ್ಯ ದೃಷ್ಟಿಯಿಂದ ನೋಡುತ್ತಿದ್ದ. ಸಹಸಾ ಅವನು ಆಳು ನಿಂಗನನ್ನು ಕರೆದು "ರಸ್ತೆಯಲ್ಲಿ ಅಲ್ಲಿ ಹೋಗುತ್ತಾನಲ್ಲ, ಅವನ್ನ ಕರೆದು ತಾ. ಏನು ಸಬೂಬು ಹೇಳಿದರೂ ಬಿಡಬೇಡ!" ಎಂದು ಬೀದಿಯಲ್ಲಿ ಹೋಗುತ್ತಿದ್ದವನನ್ನು ತೋರಿಸಿದ. ಆ ಮೇಲೆ ನನ್ನ ಕಡೆ ತಿರುಗಿ "ಎಂಥಾ ಮನುಷ್ಯರಿರ್ತಾರೆ ಅಂತೀನಿ. ಜವಳಿ ಒಯ್ದು ಆರು ತಿಂಗಳಾಯಿತು. ಬಾಕಿ ತೀರಿಸಲಿಕ್ಕೆ ಅಂಗಡೀ ಕಡೆ ಮುಖಾನೂ ಹಾಯಿಸಲಿಲ್ಲ ಮಹಾರಾಯ" ಎಂದ.

ನಿಂಗ ಕರೆತಂದ ಗೌರವರ್ಣ, ಗಂಭೀರ ಮುಖ ಮುದ್ರೆಯ ಆ ವ್ಯಕ್ತಿ ಹುಬ್ಬಿನ ಜರ್ಬಿನಿಂದಲೇ ಯಾಕೆ ಕರೆದಿರಿ ಎಂಬರ್ಥ ಸೂಚಿಸಿತು. ನನ್ನ ಮಿತ್ರನಿಗೆ ತಾನು ತಪ್ಪು ವ್ಯಕ್ತಿಯನ್ನು ಹಿಡಿತರಿಸಿದ್ದೆನೆಂದು ಆಗ ತಾನೇ ತಿಳಿದದ್ದು. ಆದರೆ ತನ್ನ ಗಾಬರಿಯನ್ನು ಮುಚ್ಚಿಕೊಂಡು ಆತ ಹೇಗೋ ಮುಗುಳು ನಗೆ ತಂದುಕೊಂಡು ಹೇಳಿದ: "ಕ್ಷಮಿಸಬೇಕು. ತಮಗೆ ಏನು ತುರ್ತು ಕೆಲಸವಿತ್ತೊ? ಆದರೆ ತಮ್ಮಂಥ ಶ್ರೇಷ್ಠ ಗ್ರಾಹಕರಿಗೆ ನಮ್ಮ ಕ್ಯಾಲೆಂಡರ್ ಕೊಡಲೇಬೇಕು ಎನಿಸಿ ಕರೆಸಿದೆ" ಎಂದು ಕ್ಯಾಲೆಂಡರುಗಳ ಸುರುಳಿ ಬಿಚ್ಚಿದ. ಮೇಲಿದ್ದ ಚಿತ್ರ ಗೌತಮನದಾಗಿತ್ತು. ಅದರ ಗಾಂಭೀರ್ಯ ತೇಜಸ್ಸು ನೋಡಿ ವ್ಯಕ್ತಿಗೆ ಸಂತೋಷವಾಗಿರಬೇಕು. ಆತ ನಸುನಗುತ್ತ ಸ್ವಲ್ಪ ಸಂಕೋಚದಿಂದಲೇ ಹೇಳಿದರು: "ಒಮ್ಮೆಯೂ ನಿಮ್ಮ ಅಂಗಡಿಯಲ್ಲಿ ವ್ಯಾಪಾರ ಮಾಡಿರದ ನನ್ನಂಥವನಿಗೆ ನೀವು ಕರೆದು ಕ್ಯಾಲೆಂಡರ್ ಕೊಟ್ಟಿದ್ದೀರಿ. ಉಪಕಾರವಾಯಿತು. ಮುಂದೆ ನಿಮ್ಮಲ್ಲಿಯೇ ಜವಳಿಗಾಗಿ ಬರುತ್ತೇನೆ" ಎಂದು ಹೇಳುತ್ತಾ ಕ್ಯಾಲೆಂಡರ್ ತೆಗೆದುಕೊಂಡರು.

—ರಾಜೇಂದ್ರ ಆಚಾರ್ಯ

ಕೋರ್ಟಿನಲ್ಲಿ ಮುನ್ಸೀಫರು ಬಹಳ ಅಶಾಂತಚಿತ್ತರಾಗಿದ್ದರು. ಕ್ಷಣ ಕ್ಷಣಕ್ಕೆ, ಕ್ಷುಲ್ಲಕ ವಿಚಾರಗಳಿಗೂ ರೇಗುತ್ತಿದ್ದರು. ಹಿಂದಿನ ದಿನವಷ್ಟೇ ಬಾರ್ ಎಸೋಸಿಯೇಶನ್ನಿನ ಹೊಸ ಕಟ್ಟಡದ ಉದ್ಘಾಟನೆಯ ಸಂದರ್ಭದಲ್ಲಿ ಬಹಳ ಮೃದುವಾಗಿ, ಹಾಸ್ಯವಾಗಿ ಮಾತಾಡಿ ನ್ಯಾಯಾಧೀಶರು ಮತ್ತು ವಕೀಲರೊಳಗಿರಬೇಕಾದ ಸಾಮರಸ್ಯ, ಸೌಹಾರ್ದಗಳ ಕುರಿತು ಭಾಷಣ ಬಿಗಿದ ಇವರು ಏಕೆ ಹೀಗಾಡುತ್ತಾರೆಂಬುದೇ ವಕೀಲರಿಗೆ ಸಮಸ್ಯೆಯಾಗಿತ್ತು.

ಫಕ್ಕನೇ ಬಾರ್ ಎಸೋಸಿಯೇಶನ್ ಕಾರ್ಯದರ್ಶಿಗೆ ಯೋಚನೆ ಹೊಳೆಯಿತು. 'ನಾನೆಲ್ಲ ಸರಿಪಡಿಸುತ್ತೇನೆ' ಎಂದವರು ಹೇಳಿ ಬಾರ್ ಪೇದೆಯ ಕಿವಿಯಲ್ಲೇನೋ ಉಸುರಿ, ಆತನ ಕೈಗಿಷ್ಟು ದುಡ್ಡುಕೊಟ್ಟು ಕಳುಹಿಸಿದರು.

ಮಧ್ಯಾಹ್ನಾನಂತರ ಮುನ್ಸೀಫರು ವ್ಯಗ್ರಚಿತ್ತರಾಗಿಯೇ ಬಂದರು. ಕೈಮುಗಿದು ಕುಳಿತರು. ತಲೆಯೆತ್ತಿ ನೋಡಿದರು–ನಕ್ಕರು. ಅಷ್ಟೇ. ನಂತರ ಇಡೀ ದಿನ ಮುನ್ಸೀಫರು ಪ್ರಸನ್ನಚಿತ್ತರಾಗಿಯೇ ಕಾರ್ಯಕಲಾಪ ಮುಂದರಿಸಿದರು.

ಸಂಜೆ ಬಾರ್ ಕಾರ್ಯದರ್ಶಿಯನ್ನು ಸಹವಕೀಲರು ಹಿಡಿದಾಗ ಅವರು ಬಾಯಿಬಿಟ್ಟರು—"ನೋಡಿ, ನಮ್ಮ ಹೊಸ ಕಟ್ಟಡ ಆಗುವತನಕ ನಮ್ಮ ಕಟ್ಟಡದಲ್ಲಿದ್ದ ಕನ್ನಡಿಯನ್ನು ನಾವು ಈಗಿನ ಕೋರ್ಟ್‌ರೂಮಿಗೆ ವರ್ಗಾಯಿಸಲಿಲ್ಲವೇ? ಆ ಕನ್ನಡಿ ಮುನ್ಸೀಫರು ಕುಳಿತುಕೊಳ್ಳುವ ಜಾಗಕ್ಕೆ ಎದುರಾಗಿಯೇ ಗೋಡೆಯಲ್ಲಿತ್ತಲ್ಲ. ಮುನ್ಸೀಫರು ಸ್ವಲ್ಪೇನಾದರೂ ಸಿಟ್ಟುಗೊಂಡು ತಲೆಯೆತ್ತಿದರೋ, ಅವರಿಗೆ ಅವರ ಪ್ರತಿಬಿಂಬ ಕನ್ನಡಿಯಲ್ಲಿ ಕಾಣುತ್ತಿತ್ತು. ಸಿಟ್ಟುಗೊಂಡ ತಮ್ಮ ಮುಖ ಕಂಡೊಡನೆ ಅವರಿಗೆ ನಗು ಬರುತ್ತಿತ್ತು. ನಾವು ನಿನ್ನೆ ಆ ಕನ್ನಡಿಯನ್ನು ಹೊಸ ಕಟ್ಟಡಕ್ಕೆ ಸ್ಥಳಾಂತರಿಸಿದ್ದೇ ಬೆಳಿಗ್ಗೆ ಬಂದ ತೊಂದರೆ. ಮಧ್ಯಾಹ್ನ ಅವರು ಬರುವುದರೊಳಗಾಗಿ ಹೊಸದೊಂದು ಕನ್ನಡಿ ತರಿಸಿ ಹಾಕಿದೆ, ಅಷ್ಟೆ."

—ಎ. ಶಂಕರನಾರಾಯಣ ಹೆಬ್ಬಾರ

ಶಬ್ದಲೋಕದ
ವೈಚಿತ್ರ್ಯ

# ರೆಸೊನೆನ್ಸ್ ವಿಚಾರ ಗೊತ್ತೆ?

ಗೋಕುಲಾನಂದ

ಸೈನಿಕರ ಒಂದು ಪಟಲಾಮು ಒಂದು ಸೇತುವೆಯ ಮೇಲೆ ಹಾದುಹೋಗುತ್ತಿದೆ. ಅವರೆಲ್ಲರೂ ಕ್ರಮವಾಗಿ ಒಂದೇ ರೀತಿಯಲ್ಲಿ ಹೆಜ್ಜೆ ಹಾಕುತ್ತಿದ್ದಾರೆ. ಅದರಿಂದ ಒಂದೇ ವಿಧವಾದ ಶಬ್ದ ಉತ್ಪನ್ನವಾಗುತ್ತಿದ. ಸೇತುವೆ ತೊಟ್ಟಿಲಿನಂತೆ ಮೇಲೂ ಕೆಳಗೂ ತೂಗಲಾರಂಭಿಸುತ್ತದೆ. ಬರಬರುತ್ತ ಅದರ ಜಂದೋಲನ ಎಷ್ಟು ಹೆಚ್ಚುತ್ತದೆಂದರೆ ಸೇತುವೆ ಮುರಿದು ಬೀಳುತ್ತದೆ. ಸೈನಿಕರೆಲ್ಲ ನೀರುಪಾಲಾಗುತ್ತಾರೆ.

ಕಟ್ಟು ಕತೆ ಎನ್ನುತ್ತೀರಾ? ಅಲ್ಲ. ಕೆಲ ವರ್ಷಗಳ ಹಿಂದೆ ಬ್ರಿಟನ್ನಿನ ಮೆಂಚೆಸ್ಟರ್ ಪ್ರದೇಶದಲ್ಲಿ ನಡೆದ ಸತ್ಯ ಘಟನೆ ಇದು. ನೂರಾರು ಸೈನಿಕರು ಸೇತುವೆಯ ಮೇಲೆ ಇದ್ದುದರಿಂದ ಅವರ ಭಾರಕ್ಕೆ ಸೇತುವೆ ಕುಸಿಯಿತೆಂದು ನೀವೆಣಿಸಿದ್ದರೆ ಅದು ತಪ್ಪು. ಆ ಸೇತುವೆ ಅವರ ಭಾರಕ್ಕೆ ಮುರಿದಿದ್ದರೆ ಅದರ ಮಧ್ಯಭಾಗ ಕೆಳಕ್ಕೆ ಬಾಗಿ ಕುಸಿಯುತ್ತಿತ್ತು. ಹಾಗಾಗಲಿಲ್ಲ. ಸೇತುವೆ ಮೇಲೂ ಕೆಳಗೂ ರಭಸದಿಂದ ತೂಗಿದು ಭಗ್ನವಾಯಿತು. ಇದು ಧ್ವನಿಶಾಸ್ತ್ರದಲ್ಲಿ ರೆಸೊನೆನ್ಸ್ ಅಥವಾ ಅನುರಣನ ಎಂದು ಕರೆಯಲ್ಪಡುವ ಕ್ರಿಯೆಯಿಂದೊದಗಿದ ಸೋಜಿಗವಾಗಿದೆ. ಈ ಅನುರಣನ ಕ್ರಿಯೆಯಿಂದ ಯಾವ ತೋರಿಕೆಯ ಕಾರಣವೂ ಇಲ್ಲದೆ ಗಾಜುಗಳು ಒಡೆಯಬಹುದು, ಬಾಗಿಲುಗಳು ಭೂತಕಾಟದಿಂದೆಂಬಂತೆ ತೆರೆಯಬಹುದು, ಇನ್ನೂ ಏನೇನೋ ಅದ್ಭುತಗಳು ಜರಗಬಹುದು.

ಪ್ರತಿಯೊಂದು ಪದಾರ್ಥಕ್ಕೂ ತನ್ನದೇ ಆದ ನೈಸರ್ಗಿಕ ಆವರ್ತನವಿರುತ್ತದೆ. ಅಂದರೆ ಆಯಾ ಪದಾರ್ಥಕ್ಕೆ ಏನಾದರೂ ಆಘಾತವಾದರೆ ಅದು ವಿಶಿಷ್ಟ ಆವರ್ತನದಲ್ಲಿ ಕಂಪಿಸತೊಡಗುತ್ತದೆ. ಸೆಕೆಂಡಿಗೆ ಇಂತಿಷ್ಟು ಸಲ ಎಂದು ಈ ಕಂಪನವನ್ನು ಗಣಿಸಲಾಗುತ್ತದೆ. ಇದೇ ಆವರ್ತನ. ವೀಣೆಯ ತಂತಿ, ಮೃದಂಗದ ಚರ್ಮ, ಮೇಜಿನ ಮರ ಇವೆಲ್ಲವುಗಳ ಆವರ್ತನ ಪ್ರಮಾಣ ಬೇರೆ ಬೇರೆಯಾಗಿರುವುದರಿಂದಲೇ ಅವು ಬೇರೆ ಬೇರೆ ತರಹದ ಶಬ್ದತರಂಗಗಳನ್ನು ಹೊರಡಿಸುತ್ತವೆ.

ಪ್ರತಿಯೊಂದು ಪದಾರ್ಥಕ್ಕೂ ನೈಸರ್ಗಿಕ ಆವರ್ತನ ಪ್ರಮಾಣವಿದ್ದರೂ ಒಂದರ ಆವರ್ತನ ಪ್ರಮಾಣವನ್ನು ಇನ್ನೊಂದಕ್ಕೆ ವರ್ಗಾಯಿಸಲು ಬರುತ್ತದೆ. ಉದಾಹರಣೆಗೆ ಒಂದು ಕಂಚಿನ ತಗಡಿನ ತುಂಡನ್ನು ತೆಗೆದುಕೊಂಡು ಬಾರಿಸಿದರೆ ಅದು ತನ್ನ ನೈಸರ್ಗಿಕ ಆವರ್ತನದಂತೆ ಕಂಪಿಸಿ ಧ್ವನಿಯನ್ನು ಹೊರಡಿಸುತ್ತದೆ. ಇದರ ಆವರ್ತನ ಪ್ರಮಾಣ ಸೆಕೆಂಡಿಗೆ ೫೦೦ ಎಂದಿಟ್ಟುಕೊಳ್ಳಿ. ಈಗ ಅದೇ ಕಂಚಿನ ತಗಡನ್ನು ಮೇಜಿನ ಮೇಲಿಟ್ಟು ಬಡಿಯಿರಿ. ಮೇಜಿನ ಮರದ ಆವರ್ತನ ಪ್ರಮಾಣ ಬೇರೆಯಾಗಿದ್ದರೂ ಅದುಕೂಡ ಕಂಚಿನ ತುಂಡಿನ ಆವರ್ತನವನ್ನನುಸರಿಸಿ ಕಂಪಿಸತೊಡಗುತ್ತದೆ. ಇದಕ್ಕೆ ಬಲಾತ್ ಕಂಪನ (forced vibration) ಎಂದು ಹೆಸರು. ವಾದ್ಯಗಳಲ್ಲಿ ಈ ತತ್ವವನ್ನು ಉಪಯೋಗಿಸುತ್ತಾರೆ. ವೀಣೆಯ ತಂತಿಯನ್ನು ಮಿಡಿದಾಗ, ಅದರ ಕಂಪನದ ಆವರ್ತನವು ವೀಣೆಯ ಮರದ ಮೈಗೆ ದಾಟಿ ಅದನ್ನೂ ತಂತಿಯ

ಆವರ್ತನಕ್ಕನುಸಾರವಾಗಿ ಕಂಪಿಸುವುದರಿಂದ ಎರಡರ ಧ್ವನಿಗಳು ಸೇರಿ ನಾವು ಮೋಹಕವಾದ ನಾದವನ್ನು ಕೇಳುತ್ತೇವೆ. ವೀಣೆಯು ಮೈ ಇಲ್ಲದಿದ್ದರೆ ತಂತಿಯು ಶಬ್ದ ನಮಗೆ ಹೌದೋ ಅಲ್ಲವೋ ಎಂಬಂತೆ ಕೇಳಿಸಬಹುದಿತ್ತಷ್ಟೇ.

ಅನುರಣನವು ಬಲಾತ್ ಕಂಪನದಿಂದ ಇನ್ನೂ ಒಂದು ಹೆಜ್ಜೆ ಮುಂದೆ ಅಷ್ಟೇ. ಮೇಲಿನ ಉದಾಹರಣೆಯಲ್ಲಿ ಮೇಜಿನ ನೈಸರ್ಗಿಕ ಆವರ್ತನವೂ ಸೆಕೆಂಡಿಗೆ ೫೦೦ ಇದೆ ಎಂದುಕೊಳ್ಳಿ. ಆಗ ನೀವು ಅದರ ಮೇಲೆ ತಗಡನ್ನಿಟ್ಟು ಬಾರಿಸಿದರೆ ಎರಡರ ಆವರ್ತನವೂ ಒಂದೇ ಆಗಿರುವುದರಿಂದ ಅದರ ಆವರ್ತನದ ವಿಸ್ತಾರ ಹೆಚ್ಚಿ ಮೊದಲಿಗಿಂತಲೂ ಗಟ್ಟಿಯಾದ ಶಬ್ದವಾಗುವುದು. ಇದೇ ಅನುರಣನ (ರೆಸೊನೆನ್ಸ್). ಎರಡರ ನೈಸರ್ಗಿಕ ಆವರ್ತನ ಒಂದೇ ಆಗಿದ್ದಾಗ ಕಂಪನವುಂಟಾದರೆ ಅನುರಣನ ಉತ್ಪತ್ತಿಯಾಗುತ್ತದೆ. ಮೇಲಿನ ಉದಾಹರಣೆಯಲ್ಲಿ ಅನುರಣನವುಂಟಾದಾಗ ಮೇಜಿನ ಮೇಲ್ಮೈ ಹೆಚ್ಚು ವಿಸ್ತಾರವಾಗಿ ತೊನೆದಾಡುವುದನ್ನು ಕಾಣಬಹುದು. ಹೀಗೆ ಅನುರಣನವು ಬೆಳೆಯುತ್ತ ಹೋದರೆ ಸೇತುವೆಯು ಕುಸಿತದಂಥ ಅನಾಹುತವಾಗಬಹುದು.

ಅನುರಣನ ಹೇಗೆ ಬೆಳೆಯುತ್ತದೆ? ಒಂದು ಉಯ್ಯಾಲೆ ಇದೆ. ಅದನ್ನು ಒಂದು ಬದಿಯಿಂದ ತಳ್ಳುತ್ತೀರಿ. ಅದು ಆಂದೋಲನವನ್ನು ಪ್ರಾರಂಭಿಸುತ್ತದೆ. ಅದು ಒಂದು ದಿಕ್ಕಿನಲ್ಲಿ ಒಂದು ನಿರ್ದಿಷ್ಟ ಸ್ಥಾನದ ವರೆಗೆ ಹೋಗಿ ಹಿಂದಿರುಗಿ ವಿರುದ್ಧ ದಿಕ್ಕಿಗೆ ಚಲಿಸುತ್ತದೆ. ಈಗ ಆ ನಿರ್ದಿಷ್ಟ ಸ್ಥಾನದಲ್ಲಿ ನಿಂತು ಉಯ್ಯಾಲೆಯನ್ನು ತಳ್ಳಿದರೆ ಅದು ಹೆಚ್ಚು ವೇಗದಿಂದ ಸಾಗಿ ವಿರುದ್ಧ ದಿಕ್ಕಿನಲ್ಲಿ ಹೆಚ್ಚು ದೂರದ ವರೆಗೆ ಹೋಗುತ್ತದೆ. ಅಲ್ಲಿ ನಿಂತು ಪುನಃ ತಳ್ಳಿದರೆ ತದ್ವಿರುದ್ಧ ದಿಕ್ಕಿಗೆ ಅದು ಇನ್ನಷ್ಟು ವೇಗದಿಂದ ಇನ್ನಷ್ಟು ದೂರದ ವರೆಗೆ ಧಾವಿಸುತ್ತದೆ. ಈ ಪ್ರಕಾರವಾಗಿ ಮಾಡುತ್ತಲೇ ಹೋದರೆ ಅದರ ರಭಸವೂ ಅದು ಹೋಗುವ ದೂರವೂ ಪರಾಕಾಷ್ಠೆಗೆ ತಲುಪಬಲ್ಲದು. ಅನುರಣನವೂ ಹೀಗೆಯೇ ಬೆಳೆಯುತ್ತದೆ. ಉಯ್ಯಾಲೆಯನ್ನು ಅದರ ನೈಸರ್ಗಿಕ ಆವರ್ತನ ಮಾಗಿಯುವಲ್ಲಿ ನಿಂತು ದೂಡುತ್ತ ಹೋದದ್ದರಿಂದಲೇ ಅದರ ಚಲನೆಯ ವಿಸ್ತಾರ ಹೆಚ್ಚುತ್ತ ಹೋಯಿತು. ಬದಲಿಗೆ ಮತ್ತಾವ ಸ್ಥಾನದಲ್ಲಾದರೂ ನೀವು ನಿಂತು ತಳ್ಳಿದ್ದರೆ ಹಾಗಾಗುತ್ತಿರಲಿಲ್ಲ.

ಅನುರಣನದ ಪರಿಣಾಮವೂ ಇದೇ ಪ್ರಕಾರ ಬೆಳೆಯುತ್ತ ಹೋಗುತ್ತದೆ. ಮ್ಯಾಂಚೆಸ್ಟರ್ ಸೇತುವೆಗೆ ಆದದ್ದು ಇದೇ. ಸೈನಿಕರು ಅದರಮೇಲೆ ನಡೆದುದರಿಂದ ಅದು ತನ್ನ ನೈಸರ್ಗಿಕ ಆವರ್ತನ ಕಾಲಕ್ಕನುಗುಣವಾಗಿ ಕಂಪಿಸತೊಡಗಿತು. ಆದರೆ ಸೈನಿಕರ ಹೆಜ್ಜೆಗಳ ಲಯವೂ ಸೇತುವೆಯ ಆ ನರ್ತನ ಕಾಲವೂ ಯೋಗಾಯೋಗದಿಂದ ಸಮಾನವಾಗಿತ್ತು. ಸೈನಿಕರೆಲ್ಲರೂ ಒಂದೇ ತರಹ ಹೆಜ್ಜೆ ಇಡಲು ತರಬೇತಾಗಿರುವುದರಿಂದ ಅವರು ನಡೆಯುತ್ತಿದ್ದಂತೆ ಅನುರಣನ ಬೆಳೆಯುತ್ತ ಬಂತು. ಉಯ್ಯಾಲೆಗಾದರೆ ಹೆಚ್ಚು ಹೆಚ್ಚು ದೂರಕ್ಕೆ ಆಂದೋಲನ ಹೊಂದಿ ಒತ್ತಡದ ಪರಿಣಾಮವನ್ನು ಸಮತೋಲನಗೊಳಿಸಲು ಅವಕಾಶವಿದೆ. ಸೇತುವೆಗೆ ಹಾಗಿಲ್ಲ. ಅದು ಎರಡೂ ಕಡೆ ಸ್ಥಿರಗೊಳಿಸಲ್ಪಟ್ಟಿದೆ. ಹೀಗಾಗಿ ಸೇತುವೆ ಮೇಲೂ ಕೆಳಗೂ ತೊನೆಯುತೊಡಗಿ ಕೊನೆಗೆ ಕುಸಿದು ಬಿತ್ತು.

ಸೇತುವೆಗಳು ಕುಸಿಯುವಷ್ಟು ಘೋರವಲ್ಲದಿದ್ದರೂ ಅನುರಣನದ ವಿಚಿತ್ರ ಪರಿಣಾಮಗಳನ್ನು ತೋರಿಸುವ ಘಟನೆಗಳು ನಿತ್ಯ ಜೀವನದಲ್ಲಿ ಕೂಡ ಧಾರಾಳವಾಗಿ ದೊರೆಯುತ್ತವೆ. ಮೈಸೂರು ಪಟ್ಟಣದ ಬನ್ನೀ ಮಂಟಪದ ಹತ್ತಿರದಲ್ಲಿರುವ ವಿದ್ಯಾರ್ಥಿ ಗೃಹದಲ್ಲಿ ನಡೆದ ಸಂಗತಿ ಇದು. ಒಬ್ಬ ವಿದೇಶಿ ವಿದ್ಯಾರ್ಥಿ ಒಂದು ಕೋಣೆಯಲ್ಲಿ ಓದುತ್ತ ಕುಳಿತಿದ್ದಾನೆ. ಬನ್ನೀ ಮಂಟಪದಲ್ಲಿ ದಸರಾ ನಿಮಿತ್ತ ಕುಶಾಲ ತೋಪುಗಳು ಹಾರುತ್ತಿವೆ. ಒಮ್ಮೆಲೆ ವಿದ್ಯಾರ್ಥಿಯ ಮುಂದಿದ್ದ ಮೇಜಿನ ಮೇಲಿನ ಟೈಂಪೀಸಿನ ಗಾಜು ಒಡೆದು ಚೂರು ಚೂರಾದುದು ನೋಡಿ ವಿದ್ಯಾರ್ಥಿ ಗಾಬರಿಯಾಗುತ್ತಾನೆ. ಗಾಬರಿಗೆ ಕಾರಣವಿದ್ದಿಲ್ಲ. ಅದು ವಿಶಿಷ್ಟ ತೋಫಿನ ಶಬ್ದದ

ಮಹಿಮೆಯಾಗಿತ್ತು. ಆದರೆ ಎಲ್ಲ ತೋಫುಗಳ ಶಬ್ದಕ್ಕೂ ಎಲ್ಲ ಟೈಂಪೀಸುಗಳ ಗಾಜುಗಳೂ ಒಡೆಯಲಿಲ್ಲ. ಆ ತೋಫಿನ ಸಪ್ಪಳದ ನೈಸರ್ಗಿಕ ಆವರ್ತನವೂ ಆ ವಿಶಿಷ್ಟ ಗಡಿಯಾರದ ಗಾಜಿನ ನೈಸರ್ಗಿಕ ಆವರ್ತನವೂ ಒಂದೇ ಆಗಿದ್ದುದರಿಂದ ಅದು ಒಡೆಯಿತಷ್ಟೇ.

ಪ್ರಖ್ಯಾತ ಭೌತಶಾಸ್ತ್ರಜ್ಞನಾದ ರಾಬರ್ಟ್ ಬಾಯ್ಲ್ ಹಾಡನ್ನು ಹಾಡಿ ವೈನ್ ಗ್ಲಾಸನ್ನು ಒಡೆಯುತ್ತಿದ್ದ ಒಬ್ಬ ಗಾಯಕನ ವಿಷಯ ಹೇಳಿದ್ದಾನೆ. ಆ ವೈನ್‌ಗ್ಲಾಸಿನ ನೈಸರ್ಗಿಕ ಆವರ್ತನ ಕಾಲವೂ ಅವನು ಹಾಡುವಾಗ ಉಂಟಾಗುತ್ತಿದ್ದ ನಾದ ತರಂಗಗಳ ಆವರ್ತನವೂ ಸಮವಾಗಿದ್ದು ಅನುರಣನವುಂಟಾದುದೇ ಈ ಅದ್ಭುತಕ್ಕೆ ಕಾರಣವಾಗಿತ್ತು.

ಕಿಡಿಕಿಗೆ ಹಾಕಿದ ತೆಳ್ಳನ್ನ ಗಾಜನ್ನು ಮೆಲ್ಲಗೆ ತಟ್ಟಿರಿ. ಅದು ಕಂಪಿಸುತ್ತಿರುವುದು ಅದರ ಮೇಲೆ ಕೈ ಇಟ್ಟಾಗ ತಿಳಿಯುವುದು. ಅದು ಸೆಕೆಂಡಿಗೆ ೫೦೦ ಸಲ ಕಂಪಿಸುತ್ತಿದೆಯೆಂದುಕೊಳ್ಳಿ. ಈಗ ಸೆಕೆಂಡಿಗೆ ೫೦೦ ಕಂಪನವುಳ್ಳ ಸ್ವರವುಳ್ಳ ತನು ಅದರ ಬಳಿ ನಿಂತು ಹಾಡಿದರೆ ಆ ತರಂಗಗಳು ಗಾಜಿಗೆ ತಟ್ಟಿ ಅನುರಣನ ಬೆಳೆಯುವುದು. ಗಾಜು ಒಡೆದುಹೋಗುವುದು.

ಕೊರ್ಡಿನ ಎರಡು ಮನೆಗಳಲ್ಲಿ ನಾನೇ ಪ್ರತ್ಯಕ್ಷ ಕಂಡ ಭೂತಚೇಷ್ಟೆಯಂಥ ಉದಾಹರಣೆ ಇದು. ಅಲ್ಲಿ ಒಂದು ಕೋಣೆಯ ಬಾಗಿಲನ್ನು ಮುಚ್ಚುವಾಗ ಬಾಗಿಲಿನಿಂದ ಸುಮಾರು ೧೦ ಅಡಿ ದೂರವಿರುವ ಕಿಟಕಿಯ ಬಾಗಿಲುಗಳು ತಂತಾನೇ ತೆರೆದುಕೊಳ್ಳುತ್ತವೆ. ಇದೂ ಅನುರಣನದ ಮಹಿಮೆಯೇ. ಬಾಗಿಲನ್ನು ಮುಚ್ಚುವಾಗ ಆಗುವ ಕಿರ್ರೆಂಬ ಶಬ್ದದ ಅನುರಣನ ಕ್ರಿಯೆಯಿಂದ

ಕಿಟಕಿ ಬಾಗಿಲುಗಳು ತೆರೆದುಕೊಳ್ಳುತ್ತವೆ. ಇವು ಭದ್ರವಾಗಿ ಮುಚ್ಚಲ್ಪಡದಿದ್ದುದರಿಂದ ತೆರೆಯುತ್ತವಷ್ಟೇ. ಭದ್ರವಾಗಿರದಿದ್ದ ಗೋಡೆಗಳನ್ನೂ ಅನುರಣನ ಶಕ್ತಿಯು ತಳ್ಳಿ ಕೆಡಹಬಲ್ಲದು. ಕೆಲ ವರ್ಷಗಳ ಹಿಂದೆ ಮದ್ರಾಸಿನಲ್ಲಿ ರೇಲ್ವೆ ಲೈನಿನ ಬಳಿ ಕಟ್ಟಿದ ಮನೆಯೊಂದು ಅನುರಣನದ ಆಘಾತದಿಂದಲೇ ಕುಸಿದುಬಿದ್ದಿತು.

ಅನುರಣನದಿಂದ ಅಪಘಾತಗಳುಂಟಾಗುತ್ತಿದ್ದರೆ ಅದಕ್ಕೆ ಪರಿಹಾರವೇನು? ಕೆಲ ಸಂದರ್ಭಗಳಲ್ಲಿ ಸುಲಭೋಪಾಯದಿಂದ ಅನಾಹುತಗಳನ್ನು ತಪ್ಪಿಸಬಹುದು. ಮೆಂಚೆಸ್ಟರ್ ಸೇತುವೆ ಕುಸಿದು ನೂರಾರು ಸೈನಿಕರಿಗೆ ಅಪಾಯವಾಗುವುದನ್ನು ತಪ್ಪಿಸಲು ಸಾಧ್ಯವಿತ್ತು. ಸೈನಿಕರು ಒಂದೇ ಸವನೆ ಹೆಜ್ಜೆಯಿಡುವ ಬದಲು "ಬ್ರೇಕ್ ಸ್ಟೆಪ್" ಮಾಡಿದ್ದರೆ ಅನುರಣನದ ಪ್ರತಾಪ ಇಳಿದು ಸೇತುವೆ ಸುರಕ್ಷಿತವಾಗಿರುತ್ತಿತ್ತು. ಈಗ ಸೈನಿಕರಿಗೆ ಸಾಮಾನ್ಯವಾಗಿ ಸೇತುವೆಗಳನ್ನು ದಾಟುವಾಗ ಹೀಗೆ ಬ್ರೇಕ್ ಸ್ಟೆಪ್ ಮಾಡಲು ಆದೇಶವೀಯಲ್ಪಡುತ್ತದೆ.

ಅನುರಣನದಿಂದ ರೈಲುಗಳೂ ಮಗುಚಿ ಬೀಳಬಹುದು. ಒಂದೇ ಸವನೆ ರೈಲುಗಾಡಿ ಸಾಗುತ್ತಿದ್ದರೆ ಅದು ಖರಬರುತ್ತ ಪುಟಿಯತೊಡಗುವುದು ನಿಮ್ಮ ಅನುಭವಕ್ಕೂ ಬಂದಿರಬಹುದು. ಇಲ್ಲಿ ಆಗುವುದಿಷ್ಟೇ. ರೈಲು ಕಂಬಿಗಳು ಒಂದಕ್ಕೊಂದು ಸೇರುವಲ್ಲಿ ಸ್ವಲ್ಪ ಜಾಗಬಿಟ್ಟಿರುತ್ತದೆ. ಅದರ ಮೇಲೆ ಚಕ್ರ ಹಾಯುವಾಗ ಅದು ಪ್ರತಿ ಸಲವೂ ಪುಟಿಯುತ್ತದೆ. ಈ ಪುಟಿತ ರೈಲಿನ ಆಘಾತ ಹೀರುವ (Shock absorbing) ಸ್ಪ್ರಿಂಗುಗಳಿಗೆ ಸಾಗಿಸಲ್ಪಡುತ್ತದೆ. ರೈಲು ಒಂದು ವಿಶಿಷ್ಟ ವೇಗವನ್ನು ತಲುಪಿದಾಗ ಈ ಸುರುಳಿಗಳ ನೈಸರ್ಗಿಕ ಆವರ್ತನಕ್ಕೂ ಪುಟಿ ನೆಗೆತದ ಆವರ್ತನಕ್ಕೂ ಸರಿಹೋಗುತ್ತದೆ. ಆಗ ಅನುರಣನವು ಬೆಳೆದು ರೈಲು ಪುಟಿಯಲಾರಂಭಿಸುವುದು. ಹೀಗಾದೊಡನೆ ಎಂಜಿನ್ ಡ್ರೈವರನು ವೇಗವನ್ನು ಹೆಚ್ಚುಕಡಿಮೆಮಾಡುವ ಮೂಲಕ ರೈಲು ಉರುಳುವುದನ್ನು ತಪ್ಪಿಸುತ್ತಾನೆ. ರೈಲಿನ ಪುಟಿತ ಹೆಚ್ಚಾಗತೊಡಗಿದೊಡನೆ ಅದರ ವೇಗ ವ್ಯತ್ಯಾಸವಾಗಲು ಇದೇ ಕಾರಣ.

ಮನೆಯಲ್ಲಿ ಕುಳಿತೇ ನೀವು ಚಿಕ್ಕ ಪ್ರಯೋಗ ಮಾಡಿ ಅನುರಣನದ ಸ್ವಾರಸ್ಯವನ್ನು ಕಾಣಬಹುದು. ಒಂದು ಉರುಟಾದ ರಬ್ಬರು ತುಂಡನ್ನು ಎರಡು ಬಲವಾದ ಕಂಬಗಳ ನಡುವೆ ಎಳೆದು ಬಿಗಿಯಾಗಿ ಕಟ್ಟಿರಿ. ಆ ಮೇಲೆ ಸಮವಾದ ಎರಡು ದಾರದ ತುಂಡುಗಳನ್ನು ತೆಗೆದುಕೊಂಡು ಒಂದೊಂದರ ತುದಿಗೆ ಒಂದೊಂದು ಸಮಭಾರದ ಕಬ್ಬಿಣದ ಗುಂಡುಗಳನ್ನು ಕಟ್ಟಿ ಅವೆರಡನ್ನೂ ಆ ರಬ್ಬರು ಪಟ್ಟಿಯ ಆಧಾರದಿಂದ ಸ್ವಲ್ಪ ಅಂತರದ ಮೇಲೆ ತೂಗ ಹಾಕಿರಿ. ಈಗ ಒಂದು ಗುಂಡನ್ನು ನಸುವೆ ಅಲ್ಲಾಡಿಸಿ ಬಿಟ್ಟರೆ ಅದು ಆಂದೋಲನವನ್ನು ಪ್ರಾ-ರಂಭಿಸುವುದು. ಕೆಲ ಕ್ಷಣಗಳಲ್ಲೇ ನೀವು ಮುಟ್ಟಿರದಿದ್ದರೂ ಎರಡನೇ ಗುಂಡು ಕೂಡ ಆಂದೋಲನ ಪ್ರಾರಂಭ ಮಾಡುವುದನ್ನು ನೋಡುವಿರಿ. ಕಬ್ಬಿಣದ ಗುಂಡುಗಳನ್ನು ತಗಲಿಸಿಕೊಂಡ ನೂಲುಗಳು ಸಮಗಾತ್ರದವಾಗಿದ್ದು ಸಮಾನ ನೈಸರ್ಗಿಕ ಆವರ್ತನವುಳ್ಳವುಗಳಾಗಿರುವುದರಿಂದ ಒಂದರ ಆವರ್ತನವು ಇನ್ನೊಂದರ ಮೇಲೆ ಅನುರಣನವನ್ನು ಬೀರುವುದೇ ಇದಕ್ಕೆ ಕಾರಣವಾಗಿದೆ.

ಇಂದಿನ ಯಂತ್ರಯುಗದಲ್ಲಿ ಅನುರಣನ ತತ್ವವನ್ನು ಮಾನವನ ಉಪಯೋಗಕ್ಕಾಗಿ ಬಹುವಿಧದಿಂದ ಬಳಸಲಾಗುತ್ತಿದೆ. ರೇಡಿಯೋ ವಾಯರ್‌ಲೆಸ್ ಸೆಟ್ಟುಗಳನ್ನು ಟ್ಯೂನ್ ಮಾಡುವಾಗ ಅದರ ಪ್ರಾಕೃತಿಕ ಆವರ್ತನವನ್ನು ಒಳಗೆ ಬರುವ ಕ್ಯಾರಿಯರ್ ಅಲೆಗಳಿಗೆ ಸಮವಾಗಿ ಮಾಡುತ್ತೇವೆ. ಆದ್ದರಿಂದ ಅನುರಣನ ಉತ್ಪತ್ತಿಯಾಗಿ ಸಂದೇಶಗಳು ಕೇಳಿಸುತ್ತವೆ. ಧ್ವನಿವರ್ಧಕಗಳಲ್ಲಿಯೂ ಈ ತತ್ವವನ್ನು ಪ್ರಯೋಗಿಸುತ್ತಾರೆ. *



# ಮನದ ಕದ ತೆರೆದಾಗ

ಶ್ರೀನಿವಾಸ ಕೊಳುವೇಲ್

ಮುಂಜಾನೆ ಕೋಳಿ ಕೂಗಿ ಏಳುವ ಕಾಲ ಗತಿಸಿ ಹೋಯಿತು. ಈಗ ಕೋಳಿ ಸಾಕಣೆಯೂ ಕಮ್ಮಿ. ಸಾಕಿದರೂ ಕೋಳಿ ಕೂಗುವುದೂ ಅಪರೂಪವಾಗಿಬಿಟ್ಟಿದೆ. ಕಾಳಿಲ್ಲದೆ ಕೋಳಿ ಹೇಗೆ ತಾನೇ ಕೂಗೀತು! ಹಾಸಿಗೆಯಲ್ಲಿ ಅಲ್ಲೇ ಹೊರಳಾಡುತ್ತಿತ್ತು ದೇಹ. ಆಕೆ ತವರುಮನೆಗೆ ಹೋಗಿ ಆರು ದಿನಗಳಾದವು. ಬಿಕೊ ಎನ್ನುತ್ತಿತ್ತು ಮನಸ್ಸು. ಅಪ್ಪ ಎದ್ದಂತೆ ಕಾಣುತ್ತದೆ. ವಯಸ್ಸಾದವರಿಗೆ ನಿದ್ರೆ ಕಡಿಮೆ. ಸಮಯ ಕಳೆಯುವುದೂ ಕಷ್ಟ. ರೇಡಿಯೋದ ಕಿವಿ ಹಿಂಡಿದ್ದಾರೆಂದು ಕಾಣುತ್ತದೆ. "ರಾಮಾ ರಾಮಾ ಕೋದಂಡ ರಾಮ" — ಪ್ರಾತಃಕಾಲದ ಕೋರಸ್ ಯಾವ ಸ್ಟೇಶನಿನಿಂದಲೋ ಆರಂಭವಾಯಿತು. ಇನ್ನೂ ಬಿದ್ದುಕೊಂಡಿದ್ದರೆ ಬದುಕೂ ದಂಡವಾದೀತು, ಹಗಲೂ ಹಾಳಾದೀತು ಎಂದುಕೊಂಡು ಮೈಕೊಡವಿ ಎದ್ದೆ. ಟೂತ್ ಬ್ರಷ್‌ಗೆ ಪೇಸ್ಟ್ ಅಂಟಿಸಿ ಬಾಯಲ್ಲಿಟ್ಟುಕೊಂಡು ಬಾವಿ ಕಟ್ಟೆಗೆ ನಡೆದೆ. ಪಾಪ, ಬ್ರಷ್ ಉಜ್ಜಿ ಉಜ್ಜಿ ಸವೆದು ಹೋಗಿದೆ ಹಲ್ಲಿನೊಂದಿಗೆ. ಬಾಯಿ ಕಹಿ ಆಗುವವರೆಗೂ ಹಲ್ಲುಜ್ಜಿ ಮುಖಕ್ಕೊಂದಿಷ್ಟು ನೀರೆರೆದೆ. ಬಾಯಿಗೂ ನೀರೆರೆದುಕೊಂಡೆ. ಕೆಲವು ತಿಂಗಳು ಮುಂಬಯಿಯಲ್ಲಿ ನೀರು ಸಿಗದಾಗಿ ಜನರನ್ನು ಸ್ಥಳಾಂತರಿಸುವ ಪ್ರಯತ್ನ ಮಾಡಿದ್ದರಂತೆ ಇಣಕಿ ನೋಡಿದೆ—ಬಾವಿ ತುಂಬಾ ನೀರು. ಬಾಯಿ ತುಂಬಾ ನೀರು. ಈ ಬಾವಿಯನ್ನೆ ಆ ಸಮಯದಲ್ಲಿ ಮುಂಬಯಿಗೆ ಕೊಂಡೊಯ್ದು ಕಾಳಸಂತೆಯಲ್ಲಿ ನೀರು ಮಾರಿ ಹಣ ಗಳಿಸಿದ್ದರೆ? ಇದ್ದ ಮನೆ ಹೋಗಿ ನಾಲ್ಕಂತಸ್ತಿನ ಮನೆಯಾಗಿ, ಕಾರೊಂದರ ಮಾಲಿಕನಾಗಿ, ಆಳು ಕಾಳುಗಳ ಒಡೆಯನಾಗಿ ಮೆರೆಯಬಹುದಿತ್ತು ಈ 'ರೆ'ಗಳ ರಾಜ್ಯದಲ್ಲಿ ಮನಸ್ಸು ಬಹಳ ಮುಂದೆ ಹೋಯಿತು. ಹೆಮ್ಮೆಯಿಂದ ಮೀಸೆಯ ಮೇಲೆ ಕೈ ಹೋದಾಗ ಬ್ರಷ್ ಮೀಸೆಗೆ ತಗಲಿ ಮುಖಕ್ಕೆಲ್ಲಾ ಪೇಸ್ಟಾಯಿತು. ನಿಜಸ್ಥಿತಿಯ ಅರಿವಾಗಿ ಕಿಚನ್ ರೂಮಿಗೋಡಿದೆ, ಅಮ್ಮ ಮಾಡಿಟ್ಟಿದ್ದ ಕಾಫಿ ಬಟ್ಟಲನ್ನು ಬರಿದು ಮಾಡಲು. ಅಮ್ಮನ ಕೈಯ ಕಾಫಿ ಎಂದೆಂದೂ ಹಿತಕರ ಆದರೆ ಕಾಫಿ ಪುಡಿಯಲ್ಲಿ ಹುಣಿಸೇ ಬೀಜದ ಅಂಶವೇ ಜಾಸ್ತೀಂತ ಕಾಣುತ್ತದೆ. ಏನು ಮಾಡುವುದು, ವ್ಯಾಪಾರಿಗಳ ಭ್ರಷ್ಟಾಚಾರದ ಪ್ರಭಾವ. ಅಂತೂ ಆ ಕಾಫಿ ಸಾಯಿಸುವುದೂ ಇಲ್ಲ, ಜೀವಂತವಾಗಿ ಬದುಕಿಸುವುದೂ ಇಲ್ಲ. ಆ ಹಾಳು ಜ್ಯೋತಿಷಿ ಬೇರೆ ನುಡಿದಿದ್ದಾನೆ: "ಸ್ವಾಮೀ, ಹೇಗೂ ನಿಮ್ಮ ಆಯುಷ್ಯ ಗಟ್ಟಿ ನೂರು" ಎಂದು. ಹೌದು, ಹೆಚ್ಚು ಗಟ್ಟಿ. ಅಷ್ಟು ವರ್ಷ ಬದುಕಬಹುದು. ಉಪ್ಪಿಟ್ಟು ಬೇರೆ ಮಾಡಿದ್ದರು. ರೇಷನ್ ಕಾರ್ಡಿನ ಗೋದಿ — ಅಮೇರಿಕಾದ್ದು. ಅದಕ್ಕೆ ಸೇರಿದ್ದ ಮಣ್ಣು ಮಾತ್ರ

ನಮ್ಮಲ್ಲೆ ತಯಾರಾದದ್ದು. ಮಾತೃಭೂಮಿಯ ಪವಿತ್ರ [illegible] – ಹಳಿಯಬಾರದು. ಭುಂಜಿಸಲೇಬೇಕು. ಎಲ್ಲೋ ಒಂದು ಕಡೆ ಸಜ್ಜಿಗೆಯಲ್ಲಿ ಉಕ್ಕಿನ ಚೂರೂ ಬೆರೆಸಿದ್ದರಂತೆ. ಮುಂದಿನ ಜನಾಂಗ ಉಕ್ಕಿನಷ್ಟು ಬಲಾಢ್ಯರಾಗಲಿ ಎನ್ನುವ ಉದ್ದೇಶವೋ–ಏನೊ. ಈಗಿರುವ ಶಕ್ತಿ ಸಾಮರ್ಥ್ಯಗಳಿಂದಲೇ ರೈಲುಗಾಡಿ, ಪೋಸ್ಟ್ ಆಫೀಸು, ಲೈಟ್ ಕಂಬವೆಲ್ಲ ಪುಡಿ ಪುಡಿ. ಇನ್ನು ಮುಂದಕ್ಕೆ? ಅಂತೂ ಉಪ್ಪಿಟ್ಟಿನ ಪ್ಲೇಟೂ ಕಾಫಿಯ ಬಟ್ಟಲೂ ಬರಿದಾಯಿತು. ಆಫೀಸಿಗೆ ಹೋಗಲು ಒಂದೂವರೆ ಗಂಟೆ ತಾನೆ ಉಳಿದಿರುವುದು? ಮುಖ ಕ್ಷೌರ, ಬಟ್ಟೆ ಒಗೆಯೋದು, ಸ್ನಾನ ಎಲ್ಲಾ ಆಗಬೇಕು. ಕನ್ನಡಿಗೆ ಮುಖ ತೋರಿಸಿದೆ. ತಲೆಯಲ್ಲಿ ಅಲ್ಲೊಂದು ಇಲ್ಲೊಂದು ಬಿಳಿ ಗೂದಲನ್ನು ತೋರಿಸಿತು. ಹಿಂದಿನ ಕಾಲದಲ್ಲಿ ರಾಜರು ಯೌವನದ ಅಟ್ಟಹಾಸದಲ್ಲಿ ಮೆರೆಯುತ್ತಿದ್ದಾಗ ಯಾರಾದರೂ (ಅವರಿಗೆ ಆಗದವರು) ಅವರ ತಲೆಯ ಮೇಲಿನ ಬಿಳಿಗೂದಲನ್ನು ಕಿತ್ತು ಎದುರು ಹಿಡಿಯುತ್ತಿದ್ದರಂತೆ. ಕೂಡಲೆ ರಾಜರಿಗೆ ಆಗ ತಾನೆ ಜ್ಞಾನೋದಯವಾಗಿ ಅಥವಾ ಹಾಗೆ ತಿಳಿದು ನಾರು ಮಡಿ ಉಟ್ಟು ಕಾಡಿಗೆ ಹೋಗುತ್ತಿದ್ದರಂತೆ. ಈಗಿನ ರಾಜಕಾರಣಿಗಳಿಗೆ ತಲೆ ಬಿಳುಪಾಗುವ ಭಯವಿಲ್ಲ. ಬಿಳಿಗೂದಲನ್ನು ಕಪ್ಪಾಗಿಸುವ ಸಾಧನವಿದೆ.

ಗಡ್ಡ ಸವರಿದೆ. ಬ್ಲೇಡ್ ಹುಡುಕಿದೆ. ಹತ್ತು ಪೈಸೆಯ ತಿಳಿನೀಲಿಯ ಬ್ಲೇಡ್. ರೇಜರ್ ಸೆಟ್‌ಗೆ ಸರಿಪಡಿಸುವಾಗಲೆ 'ಛಟ್' ಎಂದಿತು. ಇನ್ನೊಂದು ಬ್ಲೇಡ್ ತೆಗೆದೆ. ಅದು ಆಗಲೆ ತುಕ್ಕು ಹಿಡಿಯಲಾರಂಭಿಸಿದೆ. ಮೆಲ್ಲನೆ ರೇಜರ್ ಸೆಟ್‌ಗೆ ತುರುಕಿಸಿದೆ. ಇದ್ದಕ್ಕಿದ್ದ ಹಾಗೆ ಆಫೀಸಿನ ಆ 'ಮಾತಿನ ಮಲ್ಲಿ'ಯ ನೆನಪಾಯಿತು. ಏನೊಂದು ಮಾತು, ಎಷ್ಟೊಂದು ಹರಟೆ! ಇದ್ದರೆ ಇರಬೇಕು ಅವಳ ನಾಲಗೆಯಷ್ಟು ತೀಕ್ಷ್ಣ. ಒಂದೇ ಎಳೆತ ಗಡ್ಡದ ಮೇಲೆ. ಚರ್ಮ ಕಿತ್ತು ರಕ್ತ ಹೊರಬಂತು. ಬ್ಯಾಂಡೇಜಿನ ಸಣ್ಣ ಪಟ್ಟಿಯನ್ನು ಕೆನ್ನೆಗೆ ಅಂಟಿಸಿದೆ. ಆಹಾ! ಹೀಗೆಯೆ ಹೋಗಬೇಕು ಆಫೀಸಿಗೆ. ಎಷ್ಟು ಜನ ನನ್ನ ಮುಖ ನೋಡುವವರು, ಕಾರಣ ಕೇಳುವವರು! ಅಯ್ಯೋ, ಎಮರ್ಜೆನ್ಸಿ ಕಮಿಶನ್ನಿನಲ್ಲಿ ಭಡ್ತಿಯಾಗಿ ಯುದ್ಧ ರಂಗಕ್ಕೆ ತೆರಳಿ, ಶತ್ರುಗಳೊಡನೆ ಹೋರಾಡಿ, ಇಷ್ಟೇ ಗಾಯದಲ್ಲಿ ಮರಳಿ ಬರುವಂತಿದ್ದರೆ ಎಷ್ಟೊಂದು ರಸವತ್ತಾಗಿ ನನ್ನ ಪರಾಕ್ರಮವನ್ನು ಕೊಚ್ಚಬಹುದಿತ್ತು. ಅದೃಷ್ಟವಿಲ್ಲ, ದೇಶರಕ್ಷಣೆಗಾಗಿ ಗುಂಡಿಗಾಹುತಿಯಾಗಲೂ ಅದೃಷ್ಟವಿಲ್ಲ. ಸ್ವದೇಶಿ ಬ್ಲೇಡಿನಲ್ಲಿ ಗಾಯಗೊಳ್ಳುವ ಭಾಗ್ಯವಿರುವಾಗ ಅದೆಲ್ಲ ಎಲ್ಲಿ ಸಾಧ್ಯ – ಇನ್ನು ಸ್ನಾನವಾಗಬೇಕು. ಮೊದಲು ಬಟ್ಟೆಗೆ ಸ್ನಾನ.

ಬಟ್ಟೆಯನ್ನು ಒಗೆಯುತ್ತಿದ್ದಾಗ ನನ್ನಾಕೆಯ ನೆನಪು ಜೋರಾಗಿ ಮರುಕಳಿಸಿತು. ಈ ಕೆಲಸವನ್ನು ತಪ್ಪಿಸಲು ಆಕೆ ಹೆರುವ ನೆಪದಿಂದ ತವರುಮನೆಗೆ ಹೋದಳೆ ಎಂಬ ಸಂಶಯವೂ ಸುಳಿಯಿತು. ಅಂತು ಬಟ್ಟೆಯನ್ನು ಒಣಗ ಹಾಕಿ ಬಾತ್‌ರೂಮಿನ ಬಾಗಿಲನ್ನು ಎಳೆದೆ. ಕೈಯಲ್ಲೆ ಕಿತ್ತುಕೊಂಡು ಬಂತು ಮರದ ಬಾಗಿಲು. ಅಜ್ಜಿಯ ಕಾಲದ್ದು ಬಾಗಿಲು–ಅವರ ಹಾಗೆ ಮುಣು ಮುಣು ಅನ್ನುತ್ತಿತ್ತು. ಇಂದು ನನ್ನ ಕೈಯಲ್ಲಿ ಅದಕ್ಕೆ ಮೋಕ್ಷ ಪ್ರಾಪ್ತಿಯಾಯ್ತು. ಬಚ್ಚಲು ಮನೆಗೆ ಬಾಗಿಲು ಇಲ್ಲದೇನೆ ಸ್ನಾನ ಮಾಡುವುದೂ ಒಂದು ಕಲೆಯೆ. ಯಾರು ಎಷ್ಟು ಹೊತ್ತಿಗೆ ಹೊರಗಿನಿಂದ ಬಂದಾರೊ ಎಂಬ ಯೋಚನೆ ನಮ್ಮನ್ನು ಜಾಗೃತರನ್ನಾಗಿ ಮಾಡುತ್ತದೆ ಬಹುಶಃ ಅದಕ್ಕೇನೆ ಮನಸ್ಸಿನ ಕದ ಸದಾ ತೆರೆದಿರಬೇಕು ಎನ್ನುವುದು. ಕದವೇ ಇಲ್ಲದಿದ್ದರೆ ಮುಚ್ಚುವ ಪ್ರಶ್ನೆಯೆ ಇಲ್ಲವಲ್ಲ! ಮೈಯ ಸ್ನಾನದೊಡನೆ ಮನದ ಒಣ ಚಿಂತನಕ್ಕೂ ನೀರೆರೆದು ಟವಲನ್ನೆತ್ತಿಕೊಂಡೆ. ಮೈ ಒರಸಿ ಬಟ್ಟೆ ಧರಿಸಿ, ತಲೆ ಬಾಚಿ, ಕಿಸೆಯ ಪರ್ಸ್ ಮುಟ್ಟಿ ತೆರಳಿದೆ ಆಫೀಸಿಗೆ. ಕೈಯಲ್ಲಿ ಕೊಡೆ–ಕಾಲಲ್ಲಿ ಮೆಟ್ಟು. ಎರಡೂ ಕೊನೆಯ ಬಾರಿಗೆ ಮುಟ್ಟಿವೆ. ಜೀರ್ಣವಾಗಿ ತೂತುಬಿದ್ದ ಚಪ್ಪಲಿ ನನ್ನದು. ಲೇಟೆಸ್ಟ್ ಫ್ಯಾಶನ್ನಿನ Air cool ನ ಹಾಗೆ ಅಲ್ಲಲ್ಲಿ ರಂಧ್ರಗಳು. ನನ್ನ

ಚಪ್ಪಲಿಯ ವಿಶೇಷವೇನೆಂದರೆ ಗಾಳಿಯೊಡನೆ ರಸ್ತೆಯ ಕಲ್ಲೂ ಮಣ್ಣೂ ಎರಡೂ ಒಳಗೆ ಬರುತ್ತವೆ. ಚಪ್ಪಲಿ ಚುರ್‌ಪುರ್ ಎನ್ನುತ್ತಿದ್ದ ಹಾಗೆ ಹೃದಯ ಲಬ್‌ಡಬ್ ಅನ್ನುತ್ತಿತ್ತು. ಚಪ್ಪಲಿಗೂ ಹೃದಯಕ್ಕೂ ವ್ಯತ್ಯಾಸವಿಲ್ಲ—ಎರಡೂ ಸವೆದು ಹೋಗುವಂತಹವು. ಅರರೆ—ಇದು ಯಾವ ಫ್ಯಾಶನ್ನಿನ ಹುಡುಗಿ! ಥಿಯೇಟರಿನ ಹತ್ತಿರ ದೊಡ್ಡ ಪೋಸ್ಟರ್ ಹಾಕಿದ್ದಾರೆ. ಯಾವುದೋ ಪಾಶ್ಚಿಮಾತ್ಯ ಗುಪ್ತಚಾರ ಕಥೆಯನ್ನು ಹಿಂದಿ ಭಾಷೆಯಲ್ಲಿ ತೆಗೆದ ಚಲನ ಚಿತ್ರ. ಅರೆನಗ್ನ ಹುಡುಗಿ. ಹಿಂದೂ ಸಂಸ್ಕೃತಿಗೆ ಕಳಂಕವಿಡುವ ಪ್ರಯತ್ನ. ಆದರೂ ಚೆನ್ನಾಗಿ ಅವಲೋಕಿಸಿದೆ. ವಸ್ತ್ರ ಆಕೆಯನ್ನು ಮುಚ್ಚಿಲ್ಲ. ಆಕೆಯೇ ವಸ್ತ್ರವನ್ನು ಎಲ್ಲೋ ಮುಚ್ಚಿ ಅಡಗಿಸಿಟ್ಟಿದ್ದಾಳೆ. (ಆದರೆ ನಾಳೆ ಈ ಸಿನೆಮಾ ನೋಡಬೇಕು.)

ಯಾರದು?-ಆ ತೆರಿಗೆ ವಸೂಲು ಮಾಡುವವನೇ. ಹೌದು. ಮೂರು ಕಂತಿನ ಬಾಕಿ ಇದೆ. ಯಾವಾಗ ಕೊಡುತ್ತೀರಂತಾ ಒಂದು ವಾರದಿಂದ ಪೀಡಿಸುತ್ತಾ ಇದ್ದಾನೆ. ಶನಿ ಒಮ್ಮೆ ತೊಲಗಿದರೆ ಸಾಕು—ಬಿಡಿಸಿದ ಕೊಡೆಯನ್ನು ಅಡ್ಡ ಹಿಡಿದು ತಲೆಮರೆಸಿಕೊಂಡೆ. ಇನ್ನು ಅದೊಂದು ಅಂಗಡಿ. ಸಾಮಾನಿನ ಬಾಕಿ ನೂರೈವತ್ತಕ್ಕೇರಿದೆ. ನಾಳೆ ಕೊಡುತ್ತೇನೆಂದು ಹೇಳಿ ಹದಿನೈದು ದಿವಸವಾಯಿತು. ಬರುವ ತಿಂಗಳ ಸಂಬಳದಲ್ಲಿ ಸ್ವಲ್ಪವಾದರೂ ಅವನಿಗೆ ಕೊಡಲೇಬೇಕು. ಅಷ್ಟರವರೆಗೆ ಹೇಗೂ ಇದೆಯಲ್ಲ ಕೊಡೆ. ಮತ್ತೊಮ್ಮೆ ಸರ್ಕಸ್ಸಿನ ಸರಿಗೆಯ ಮೇಲೆ ನಡೆಯುವವರು ಕೊಡೆ ಹಿಡಿಯುವ ಹಾಗೆ ಅಡ್ಡ ಹಿಡಿದೆ.

ಅಬ್ಬಾ ಬಂತು ಆಫೀಸು, ಇಲ್ಲ. ನಾನೇ ಹೋದೆ ಆಫೀಸಿಗೆ. ಬೆಳಗಿನಿಂದ ಮಧ್ಯಾಹ್ನದ ವರೆಗೆ ಮಧ್ಯಾಹ್ನದಿಂದ ಸಂಜೆಯವರೆಗೆ ಕತ್ತೆ ಚಾಕರಿ. ನಿರ್ಜೀವ ಫೈಲುಗಳ ಮಧ್ಯೆ ಸೆಣಸಾಡುವ ಕೆಲಸ. ಹಾಳು ಉದ್ಯೋಗ ವೈಟ್ ಕಾಲರಿನದು. ಆದರೆ ಆ ಕಾಲರನ ಕಲರ್ ಹೋಗಿದೆ. ಹರಿದು ಹೋಗಿ ತೇಪೆ ಹಚ್ಚಿಯಾಗಿದೆ ಎಂಬುದು ನಿಮಗೆ ಗೊತ್ತಿರಲೇಬೇಕಲ್ಲ. ಕೆಲಸವೇ ದೇವರು ಎಂದು ನಂಬಿ ಕೂತದ್ದರಿಂದಲೇ ಇನ್ನೂ ಗುಮಾಸ್ತನಾಗಿಯೇ ಉಳಿದಿದ್ದೇನೆ. ನಮ್ಮಂಥ ನಾಲ್ಕು ಮಂದಿ ಇರುವುದರಿಂದಲೇ ನಾಲ್ಕು ನೂರು ಜನರಿಗೆ ಈ ಆಫೀಸಿನಲ್ಲಿ ಸಂಬಳ ಕೊಡಲು ಸಾಧ್ಯವಾಗುತ್ತಿದೆ ಎಂದು ಮಾತ್ರ ಗುಟ್ಟಿನಲ್ಲಿ ಹೇಳುತ್ತೇನೆ.

ಲಂಚ್‌ನ ಸಮಯವಾಯ್ತು. ಘಂಟೆ ಒಂದಾಯ್ತು. ಕಟ್ಟಡಕ್ಕೆ ಬೆಂಕಿ ಬಿದ್ದ ಹಾಗೆ ಒಮ್ಮೆಲೆ ಹೊರಗೆ ಹೋಗುವ ಗಡಿಬಿಡಿ. ಎಲ್ಲರದೂ ವಾಕಿಂಗ್ ರೇಸ್. ಹಿಂದಿನಿಂದ ಕಡ ಕೇಳುವವರು ಅಥವಾ ಕಡ ಕೊಟ್ಟವರು ಯಾರಾದರೂ ಬೆನ್ನಟ್ಟಿ ಬರುತ್ತಿದ್ದಾರೋ ಎಂಬಂತೆ ಓಟ. ನಾನೂ ಆ ಗುಂಪಿನಲ್ಲಿ ಒಬ್ಬ ಅನ್ನಿ. ಒಂದು ಘಂಟೆ ಕಾಲಾವಕಾಶದಲ್ಲಿ ಎರಡು ಮೈಲು ಓಟ, ಸ್ವಲ್ಪ ಊಟ ಎಲ್ಲಾ ಆಗಬೇಕು. ಪ್ಯಾಂಟನ್ನು ಬಿಚ್ಚಲು ಪುರಸೊತ್ತಿಲ್ಲದೆ ಹಾಗೆಯೆ ಬಟ್ಟಲ ಮುಂದೆ ಕುಳಿತು A ಯಿಂದ Z ವರೆಗಿನ ವಿಟಮಿನ್‌ಗಳನ್ನು ನೆನಸಿ ಒರೆ ಸಾರು ಗೊಜ್ಜು ಮಜ್ಜಿಗೆಯಲ್ಲಿ ಊಟ ಮುಗಿಸಿ ಪುನಃ ಆಫೀಸಿಗೆ ತೆರಳಿದೆ.

ಸಂಜೆ. ಸೋತು ಸುಣ್ಣವಾಗಿ ಬೆಂದು ಬಸವಳಿದು ಬಾಡಿ ಮನೆಗೆ ಸೇರಿದೆ. ಆರಾಮ ಕುರ್ಚಿಯಲ್ಲಿ ಕುಳಿತು ಕಾಫಿಯನ್ನು ಗುಟುಕರಿಸಿ ಪೇಪರನ್ನು ಕಣ್ಣ ಮುಂದೆ ಹಿಡಿದೆ. ನಿನಗೆ ಕವರೊಂದು ಬಂದಿದೆ ಎಂದರು ತಾಯಿ. ತಕ್ಷಣ ಆ ಕವರನ್ನು ಒಡೆದು ಕಾಗದವನ್ನು ಓದಿದೆ. ನನ್ನಾಕೆಯ ಪತ್ರವಲ್ಲ. ಒಂದು ದೊಡ್ಡ ಕಂಪನಿಯ [illegible] ಕೆಲಸಕ್ಕೆ ಅರ್ಜಿ ಹಾಕಿದ್ದೆ. ಅದಕ್ಕೆ ಆ [illegible] ಮ್ಯಾನೇಜಿಂಗ್ ಡೈರೆಕ್ಟರರ ಉತ್ತರ ಬಂದಿತ್ತು ಅರ್ಜಿಯನ್ನು ಸ್ವೀಕರಿಸಲಿಲ್ಲವೆಂದು. ಬೆಳೆದ ಹುಡುಗಿಯ ತಂದೆಯಿರಬೇಕು ಆತ. ಅರ್ಜಿಯೊಡನೆ ಜಾತಕದ ನಕಲನ್ನು ಇರಿಸಿದ್ದರೆ ಸ್ವೀಕರಿಸುತ್ತಿದ್ದನೋ ಏನೋ?

ಕತ್ತಲಾಗುತ್ತಿತ್ತು. ಬೇಜಾರು ಮನಸ್ಸಿನೊಡನೆ ದೇವಸ್ಥಾನದತ್ತ ಹೊರಟೆ. ದಿನನಿತ್ಯ ದೇವಸ್ಥಾನಕ್ಕೆ ಹೋಗುವ ಹವ್ಯಾಸವನ್ನು ಇಟ್ಟುಕೊಂಡಿಲ್ಲ.

ನನ್ನಾಕೆ ಬರೆದಿದ್ದಾಳೆ ತಪ್ಪದೆ ವಾರಕ್ಕೊಮ್ಮೆಯಾದರೂ ದೇವರ ದರ್ಶನವನ್ನು ಪಡೆಯಿರಿ ಎಂದು. ಆ ನೂಕು ನುಗ್ಗಲಿನಲ್ಲಿ:ದೇವರೆಲ್ಲಿ ಕಾಣುತ್ತಾನೆ.? ಒಂದಿಷ್ಟು ತಲೆಗಳು. ನಾನು ಹೋಗುವಾಗ ಪೂಜೆಯಾಗುತ್ತಿತ್ತು. ದೇವರಿಗೆ ಕಡೆಯ ಆರತಿಯನ್ನು ಎತ್ತುತ್ತಾ ಇದ್ದಾರೆ. ಜನಸ್ತೋಮದ ಸಂದಿನಿಂದ ದೇವರನ್ನು ಕಾಣಬಯಸುತ್ತಾ ಇದ್ದೇನೆ. ಪಕ್ಕದಿಂದ ಯಾರೊ ಒಬ್ಬರು ಉಸುರುತ್ತಾ ಇದ್ದರು, 'ಅಗೋ ಅಲ್ಲಿ.' ಆಕಡೆ ನಮಸ್ಕರಿಸಲು ಕೈ-ಯೆತ್ತಿದೆ. ಕೂಡಲೆ ಮತ್ತೊಬ್ಬ ಅಂದ "ಅದೇ ಹುಡುಗೀನ? ಆ-ಪರವಾ ಇಲ್ಲ. ಲಕ್ಷಣವೇ ಇದೆ. ಸ್ವಲ್ಪ ಬಣ್ಣ ಕಪ್ಪು, ಮೂಗು ಚಪ್ಪಟೆ, ಪ್ರಾಯ ಆದಂತೆ ಕಾಣುತ್ತದೆ. ಜಾತಕ ಕೂಡಿ ಬಂದರೆ ಬೇಕಾದರೆ ಮಾತನಾಡಬಹುದು" ಎತ್ತಿದ ಕೈಯನ್ನು ಹಾಗೆಯೆ ಇಳಿಯಬಿಟ್ಟು ಸಂಭಾಷಣೆಗೆ ಕಿವಿಗೊಟ್ಟೆ. "ಅಯ್ಯಯ್ಯೋ, ನೀನು ನೋಡಿದ ಆ ನೀಲಿ ಸೀರೆದ್ದೂ ಹೆಂಗಸು ಕಣೋ. ಚಪ್ಪಟೆ ಮೂಗು, ಕಪ್ಪು ಬಣ್ಣ. ಅದು ಹುಡುಗಿದ್ದೂ ತಾಯಿ." ದೇವರಿಗೆ ಮಂಗಳಾರತಿಯಾಗುತ್ತಿತ್ತು. ನಾನು ಆ ಸಮಯದಲ್ಲೂ ಹುಡುಗಿ ನೋಡಿದ ಆ ಹುಡುಗನ ಮುಖ ಲಕ್ಷಣವನ್ನು ನೋಡಿದೆ. ಅಲ್ಲೂ ಆ ಮುಖದಲ್ಲೂ ಒಂದು ಕಳೆ ಆಡುತ್ತಿತ್ತು.

ಅಂತೂ ದೇವದರ್ಶನಕ್ಕಿಂತ ಕೆಲವು ಜೀವ-ದರ್ಶನಗಳನ್ನು ಮಾಡಿ ಮನೆಗೆ ಬಂದೆ. ಊಟ ಮುಗಿಸಿ ಒಂದು ಇಂಗ್ಲೀಷ್ ನಾವೆಲ್ಲನ್ನು ಕೈಗೆತ್ತಿಕೊಂಡೆ. ಇದ್ದಕ್ಕಿದ್ದ ಹಾಗೆ ನನ್ನಾಕೆಯ ನೆನಪು. ಕಳೆದ ಒಂದು ವರ್ಷದಲ್ಲಿ ಜೀವನದ ಸಿಹಿ ಕಹಿಗಳನ್ನು ನನ್ನೊಡನೆ ಅನುಭವಿಸಿದ್ದಾಳೆ. ಈಗ ನೂರಾರು ಮೈಲು ದೂರದ ತವರು ಮನೆಯಲ್ಲಿ ಕುಳಿತು ನನ್ನನ್ನೇ ಧ್ಯಾನಿಸುತ್ತಿರಬಹುದೋ ಏನೋ? ಕಳೆದವಾರ ನಾನು ಬರೆದಿದ್ದೆ. "ನೀನಿಲ್ಲದೆ ಮನೆ, ಮನ ಬಿಕೋ ಎನ್ನುತ್ತಿದೆ. ರಾತ್ರಿಯ ಡಿಮ್‌ಲೈಟ್ ಕಣ್ಣಿನ ಉರಿಯನ್ನು ಹೆಚ್ಚಿಸುತ್ತಿದೆ. ಫ್ಯಾನಿನ ಶಬ್ದ ಅತೀವವಾಗಿಬಿಟ್ಟಿದೆ. ನನಗೆ ನಿನ್ನದೆ ಧ್ಯಾನ ಹಗಲೂ ಇರುಳೂ" ಮೊನ್ನೆ ಅವಳೂ ಬರೆದಿದ್ದಳು, "ನನಗೂ ನಿಮ್ಮದೇ ಆಲೋಚನೆ. ಮೊನ್ನೆ ಅಕ್ಕ ಭಾವಂದಿರೊಂದಿಗೆ ಮ್ಯೂಜಿಯಂ, ಜೂ ಮತ್ತು ಸರ್ಕಸ್ಸು ನೋಡಿದೆವು. ನನಗೆ ಎಲ್ಲಿ ನೋಡಿದರೂ ನಿಮ್ಮದೇ ನೆನಪು" ಎಂದು. ಒಳ್ಳೇ ಸ್ಥಳಗಳಲ್ಲಿ ನನ್ನ ನೆನಪು ಬಂದಿದೆ ಅವಳಿಗೆ. ಅಂತೂ ಎರಡು ವರ್ಷ ಬೇಡ ಇತ್ತು. ಆ ಮಗುವನ್ನು ಯೌವನದ ಪ್ರಥಮ ಹಂತದಲ್ಲಿ ಸಾಕಿ, ಸಲಹಿ, ಅದರ ಗೋಳನ್ನು ಕೇಳಿ ಅರೈಕೆ ಲಾಲನೆಗಳನ್ನು ಮಾಡುವುದೆಂದರೆ ತುಂಬಾ ಕಠಿಣದ ಸಂಗತಿ. ಹಾಗೆಯೇ ಹಾಸಿಗೆಯನ್ನು ಕಾಲಿನಲ್ಲಿ ಜಾಡಿಸಿ ಬಿಡಿಸಿ ಒರಗಿದೆ. ನಾಳೆ ಬೆಳಗ್ಗೆ ಇದ್ದೇ ಇದೆಯಲ್ಲ ದಿನ ನಿತ್ಯದ ಗೋಳು. ಕಣ್ಣಿಗೆ ಮಂಪರಡಗಿದೆ. 'ತಂತಿ'—ಹೊರಗಿನಿಂದ ಯಾರೋ ಕೂಗಿದರು. ಗಾಬರಿ ಕುತೂಹಲಗಳಿಂದ ದಸ್ಕತ್ ಹಾಕಿ ಕವರನ್ನು ತಗೊಂಡೆ. ಬೇಗ ಬೇಗನೆ ಬಿಚ್ಚಿ ಓದಿದೆ. "ಶುಭಾಶಯಗಳು, ನಿಮಗೆ ಅವಳಿ ಜವಳಿ ಮಕ್ಕಳು ಹುಟ್ಟಿದ್ದಾರೆ." ಹಾ ಒಂದಲ್ಲ ಎರಡು. (ಒಂದೇ ಏಟಿಗೆ ಎರಡು ಕಲ್ಲು ಅಲ್ಲ-ಅಲ್ಲ-ಹಣ್ಣು ಎನ್ನುವುದು ಇದಕ್ಕೇನೆ!) ಅದು ಸರಿ. ಮಕ್ಕಳು ಯಾವುದು ಗಂಡೋ ಹೆಣ್ಣೊ ಎಂದು ತಿಳಿಸಿಲ್ಲ. ಮತ್ತೊಮ್ಮೆ ತಂತಿ ಓದಿದೆ. "ಗಂಡೋ, ಹೆಣ್ಣೋ ಗಂಡೋ ಹೆಣ್ಣೊ"—ಎರಡು ಮೂರು ಸಲ ಕೂಗಿದೇಂತ ಕಾಣುತ್ತದೆ. ಅಮ್ಮ ಮೈ ಮುಟ್ಟಿ ಅಲುಗಾಡಿಸಿದಾಗಲೆ ಎಚ್ಚರ. ಕನಸು ಕಂಡಿದ್ದೇನೆ. ತಂತಿಯೂ ಬಂದಿಲ್ಲ. ಅಮ್ಮನಿಗೆ ಕೂಗಿದ ಕಾರಣವನ್ನು ತಿಳಿಸದೆ ಮೆಲ್ಲನೆ ಎದ್ದೆ. ಬೆಳಗಾಗಿತ್ತು. ಎಲ್ಲೋ ದೂರದಿಂದ ಕೋಳಿ ಕೂಗಿತು. ರೇಡಿಯೋ ಸುಶ್ರಾವ್ಯವಾಗಿ ವೆಂಕಟೇಶ ಸುಪ್ರಭಾತವನ್ನು ಹೇಳುತ್ತಿತ್ತು. ಮುಖ ತೊಳೆದು ಅಮ್ಮ ಕೊಟ್ಟ ಕಾಫಿ ಉಪ್ಪಿಟ್ಟನ್ನು ಮುಗಿಸುತ್ತಿದ್ದೆ. ಎಲ್ಲಾ ರುಚಿಯಾಗಿತ್ತು. ಜ್ಯೋತಿಷಿ ಹೇಳಿದ ಮಾತು ನೆನೆಪಿಗೆ ಬಂತು. "ನಿಮಗೆ ನೂರು ವರ್ಷ ಆಯುಷ್ಯ" ಎಂದು.

"ಸಾಲದು. ಇನ್ನೂರು ವರ್ಷ ಬದುಕಬೇಕು" ಎಂದುಕೊಂಡೆ ಮನದಲ್ಲಿ. *



ವಿಜಾಪುರದ
ಇತಿಹಾಸದ
ಒಂದು
ಅಮೋಘ ಪುಟ

# ಜಗದ್ಗುರು ಇಬ್ರಾಹಿಮ

ಕೃಷ್ಣ ಕೊಲ್ಹಾರ ಕುಲಕರ್ಣಿ

ಕ್ರಿ. ಶ. ೧೫೮೦ ರಲ್ಲಿ ವಿಜಾಪುರದ ಬಾದಶಹ ಮೊದಲನೇ ಅಲಿ ಆದಿಲ್ ಶಹನು ಗಂಡು ಸಂತತಿಯಿಲ್ಲದೆ ಅಸುನೀಗಿದನು. ಆಗ ಅಲಿಯ ಹೆಂಡತಿ ಚಾಂದಬೀಬಿಯು ತನ್ನ ಮೈದುನನ ಮಗನನ್ನು ಪಟ್ಟದಲ್ಲಿ ಕುಳ್ಳಿರಿಸಿ ತಾನೇ ರಾಜ್ಯದ ಸೂತ್ರಗಳನ್ನು ಹಿಡಿದಳು. ಪಟ್ಟವನ್ನೇರಿದ ಒಂಭತ್ತು ವರ್ಷಗಳ ಈತನೇ ಮುಂದೆ 'ಜಗದ್ಗುರು ಇಬ್ರಾಹಿಮ'ನಾದುದು. ಇತಿಹಾಸದಲ್ಲಿ ಎರಡನೇ ಇಬ್ರಾಹಿಮ ಆದಿಲ ಶಹನೆಂದು ನಾಮಾಂಕಿತನಾದವನೂ ಇವನೇ. ಕ್ರಿ. ಶ. ೧೫೮೦ ರಿಂದ ೧೬೨೬ ರ ವರೆಗೆ ನಲ್ವತ್ತಾರು ವರ್ಷಗಳ ಕಾಲ ಈತನು ಪರಮ ವೈಭವದಿಂದ ವಿಜಾಪುರ ರಾಜ್ಯವನ್ನಾಳಿದನು.

ಇಬ್ರಾಹಿಮ ಆದಿಲ್ ಶಹನು ಪಟ್ಟಕ್ಕೇರಿದ ಮೊದಲ ವರ್ಷಗಳಲ್ಲಿ ಸಾಮ್ರಾಜ್ಞಿ ಚಾಂದ ಬೀಬಿಯು ಕಮಾಲ್ ಖಾನನೆಂಬ ಹಿರಿಯ ಸರದಾರನಿಗೆ ರಾಜ್ಯ ರಕ್ಷಣೆಯ ಭಾರವನ್ನು ವಹಿಸಿಕೊಟ್ಟಿದ್ದಳು. ಆದರೆ ಕಮಾಲ್ ಖಾನ್ ಅಧಿಕಾರ ಲಾಲಸೆಯಿಂದ ತಾನೇ ಬಾದಶಹನಾಗಬೇಕೆಂದು ಪ್ರಯತ್ನಿಸತೊಡಗಿದನು. ಚಾಂದಬೀಬಿಗೆ ಈ ವಿಷಯ ತಿಳಿದೊಡನೆ ಅವಳು ಕಿಶ್ವರಖಾನನೆಂಬ ಇನ್ನೊಬ್ಬ ಸರದಾರನಿಂದ ಕಮಾಲ್ ಖಾನನನ್ನು ಕೊಲ್ಲಿಸಿ ಕಿಶ್ವರಖಾನನನ್ನೇ ರಾಜ್ಯಪಾಲನನ್ನಾಗಿ ಮಾಡಿದಳು. ಕಿಶ್ವರಖಾನನೂ ಕಮಾಲ್ ಖಾನನ ಹೆಜ್ಜೆಗಳನ್ನನುಸರಿಸುತ್ತ ಚಾಂದಬೀಬಿಯನ್ನು ಸಾತಾರದ ಸೆರೆಮನೆಯಲ್ಲಿಟ್ಟು ತಾನೇ ರಾಜ್ಯದ ಮುಖ್ಯಸ್ಥನಾದ. ಆಗ ರಾಜ್ಯದ ಹಿತಚಿಂತಕರೂ ಸಿಂಹಾಸನದ ವಿಶ್ವಾಸೀ ಸೇವಕರೂ ತಿರುಗಿ ಬಿದ್ದು ಬಂಡೆದ್ದು ಕಿಶ್ವರಖಾನನನ್ನು ಉರುಳಿಸಿ ಚಾಂದಬೀಬಿಯನ್ನು ಗೌರವದಿಂದ ಬರಮಾಡಿಕೊಂಡರು. ಆ ಹೊತ್ತಿಗಾಗಲೇ ಇಬ್ರಾಹಿಮನು ಪ್ರಾಯಕ್ಕೆ ಬಂದಿದ್ದ ಕಾರಣ ಚಾಂದಬೀಬಿ ತನ್ನ ತವರೂರಾದ ಅಹ್ಮದನಗರಕ್ಕೆ ತೆರಳಿದಳು.

ಕನ್ನಡ, ಮರಾಠಿ, ಉರ್ದು ಮತ್ತು ಪಾರಸೀ ಭಾಷೆಗಳಲ್ಲಿ ಪರಿಣತಳೂ ಕುಶಲ ಚಿತ್ರಕಲಾ ವಿದೆಯೂ ಕವಯಿತ್ರಿಯೂ ವೀರಯೋಧಳೂ ಆದ ಚಾಂದಬೀಬಿಯ ನೆರಳಲ್ಲಿ ಬೆಳೆದ ಚೆಲುವ ಇಬ್ರಾಹಿಮನಲ್ಲಿ ಅವಳ ಎಲ್ಲ ಗುಣಗಳೂ ಕಂಡುಬಂದುದು ಆಶ್ಚರ್ಯವೇನಲ್ಲ. ಇಬ್ರಾಹಿಮನಿಗೆ ಸಂಗೀತದಲ್ಲಿ ಅಪಾರ ಆಸಕ್ತಿ. ಉತ್ತರಾದಿ ಸಂಗೀತವಂತೂ ಆತನನ್ನು ಎಷ್ಟು ಮರುಳುಗೊಳಿಸಿತ್ತೆಂದರೆ, ಅದರಲ್ಲಿಯ 'ನವರಸ' ನಾದದ ನೆನಪಿಗಾಗಿ 'ನವರಸಪುರ'ವೆಂಬ ಪಟ್ಟಣವನ್ನೆ ಕಟ್ಟಿಸಿ ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡ. ಅವನ ಆಸ್ಥಾನ ಮುದ್ರೆಯ ಮೇಲೆ ನವರಸದ ಉಲ್ಲೇಖವಿದ್ದಿತಷ್ಟೇ ಅಲ್ಲದೆ, ನಾಣ್ಯಗಳ ಮೇಲೆ ಕೂಡ "ನೌರಸ ಮುಹರ-ಇ-ಆದಿಲಶಾಹಿ-ಜಗದ್ಗುರು-ದಾದ್-ಇಲಾಹಿ" ಎಂದು ಕೆತ್ತಲಾಗಿದ್ದಿತು.

ಇಬ್ರಾಹಿಮನ ಉತ್ತರಾದಿ ಸಂಗೀತಪ್ರೇಮ ಅವನಲ್ಲಿ ಭಾರತೀಯ ದೇವತೆಗಳ ಕುರಿತು ಆದರ ಬೆಳೆಯುವಂತೆ ಮಾಡಿತು. ಅವನ ಆಸ್ಥಾನದ ಕಾಗದ ಪತ್ರಗಳೆಲ್ಲ "ಅಜ್-ಪೂಜಾ ಶ್ರೀ ಸರಸ್ವತಿ" ಎಂಬ ಹೆಸರಿನಿಂದ ಪ್ರಾರಂಭವಾಗತೊಡಗಿದವು. ಕ್ರಮೇಣ ಭಾರತೀಯ ತತ್ವಜ್ಞಾನದಲ್ಲಿ ಅವನ ಒಲವು ಅಧಿಕವಾಯಿತು. ಅವನು ಆಗ ವಿಜಾಪುರ ಭಾಗದಲ್ಲಿ ಪ್ರಭಾವಯುತವಾಗಿದ್ದ ದತ್ತ ಸಂಪ್ರದಾಯದ ಶ್ರೀ ನರಸಿಂಹ ಸರಸ್ವತಿಗಳ ಶಿಷ್ಯನಾದ. ತನ್ನ ಈ ಗುರುವಿನ ಹೆಸರಿನಲ್ಲಿ ಅವನು ಹಿಂದೂ ಸಂಪ್ರದಾಯದ ಗುಡಿಯನ್ನೂ ಕಟ್ಟಿಸಿದ. ಅದೇ ಇಂದು ಅರಕಿಲ್ಲೆಯಲ್ಲಿರುವ ಶ್ರೀ ನರಸಿಂಹ ದೇವಾಲಯ. ವಾಸ್ತವವಾಗಿ ನರಸಿಂಹ ದೇವರಿಗೂ ಈ ದೇಗುಲಕ್ಕೂ ಏನೂ ಸಂಬಂಧವಿಲ್ಲ. ಮೂರ್ತಿ ಇಲ್ಲದ ಈ ಗುಡಿಯಲ್ಲಿ ಅಶ್ವತ್ಥ ಗಿಡದ ಬೊಡ್ಡೆಗೆ ಸಿಂಧೂರಹಚ್ಚಿ ಪೂಜಿಸುತ್ತಾರೆ. ಅನಂತರ ಮುಂದೆ ಇಲ್ಲೊಂದು ಉತ್ಸವ ಮೂರ್ತಿಯನ್ನು ತಯಾರಿಸಿ ಇಟ್ಟರು.

ಇಬ್ರಾಹಿಮನ ಈ ಹಿಂದೂ ತತ್ವಜ್ಞಾನ ಪ್ರಿಯತೆ ಜನರು ಆಗಲೇ ಇವನನ್ನು 'ಜಗದ್ಗುರು' ಎಂದು ಕರೆಯುವಂತೆ ಮಾಡಿತು. ಉತ್ತರದಲ್ಲಿ ಅಕಬರನು ಸ್ಥಾಪಿಸಿದ 'ದೀನೇ ಇಲಾಹಿ' ಧರ್ಮದಂತೆ ಇಬ್ರಾಹಿಮನೂ ಒಂದು ಹೊಸ ಧರ್ಮವನ್ನು ಸ್ಥಾಪಿಸಿರಬೇಕೆಂದು ಬಲವಾಗಿ ಶಂಕಿಸಲಾಗಿದ್ದರೂ ಈವರೆಗೆ ಆ ಬಗ್ಗೆ ಐತಿಹಾಸಿಕ ಆಧಾರಗಳು ಸಿಕ್ಕಿಲ್ಲ. ಆದರೆ ಇಬ್ರಾಹಿಮನು ದೇಶೀಯ ಮತ್ತು ವಿದೇಶೀಯ ಪರಂಪರೆಯಲ್ಲಿ ಉತ್ಕೃಷ್ಟವಾದುದನ್ನು ಸಮನ್ವಯಮಾಡಿ ಒಂದು ವಿಶಿಷ್ಟವಾದ ದಕ್ಷಿಣ ಸಂಸ್ಕೃತಿಯನ್ನು ರೂಪಿಸಿ ಅದು ವಿಕಾಸವಾಗುವಂತೆ ಪ್ರಯತ್ನಿಸಿದನು.

ಇಬ್ರಾಹಿಮನು ಖ್ಯಾತ ಸಂಗೀತಗಾರನಷ್ಟೇ ಅಲ್ಲದೆ ಸ್ವತಃ ಕವಿಯೂ ಸಾಹಿತ್ಯ ಪ್ರೋತ್ಸಾಹಕನೂ ಆಗಿದ್ದನು. ಅವನ ಆಸ್ಥಾನದಲ್ಲಿ ಸುಮಾರು ಮೂರು ನೂರು ಜನ ಕವಿಗಳು, ಸಾಹಿತಿಗಳು ಮತ್ತು ಇತಿಹಾಸಕಾರರಿದ್ದರು. ಮಹಾರಾಷ್ಟ್ರದ ಪ್ರಸಿದ್ಧ ಕವಿ ವಾಮನ ಪಂಡಿತ ಒಂದೊಮ್ಮೆ ಇಬ್ರಾಹಿಮನ ಆಸ್ಥಾನದಲ್ಲಿದ್ದನು. ಇಂದಿಗೂ ಇತಿಹಾಸ ಜಗತ್ತಿನಲ್ಲಿ ಪ್ರಾಮಾಣ್ಯ ಗ್ರಂಥವೆನಿಸಿದ "ಭಾರತದಲ್ಲಿ ಮುಸಲ್ಮಾನ ಅರ

ಇಬ್ರಾಹಿಮ ರೋಜಾ



ಸರು" ಎಂಬ ಗ್ರಂಥವನ್ನು ಬರೆದ ಮೊಹಮ್ಮದ ಫಿರಿಸ್ತಾ ಇಬ್ರಾಹಿಮನ ಜೀವದ ಗೆಳೆಯನಾಗಿದ್ದ. ಫಿರಿಸ್ತಾನು ಇಬ್ರಾಹಿಮನ ಆದೇಶದಂತೆಯೇ ಆ ಕೃತಿಯನ್ನು ರಚಿಸಿದನಲ್ಲದೆ ಅದನ್ನು 'ಜಗದ್ಗುರು ಇಬ್ರಾಹಿಮ'ನಿಗೇ ಅರ್ಪಿಸಿದ್ದಾನೆ. ಇಬ್ರಾಹಿಮನ ಆಸ್ಥಾನದಲ್ಲಿದ್ದ ಇನ್ನೊಬ್ಬ ಶ್ರೇಷ್ಠ ಸಾಹಿತಿಯೆಂದರೆ ಜಗದ್ವಿಖ್ಯಾತ ಪದ್ಯಗಳನ್ನು ಬರೆದ 'ಝುಹುರಿ' ಕವಿಚಕ್ರವರ್ತಿ. ಇವನ ಕಾವ್ಯವನ್ನು ಇಂದಿಗೂ ಭಾರತದ ವಿಶ್ವವಿದ್ಯಾಲಯಗಳಲ್ಲಿ ಅಭ್ಯಸಿಸುತ್ತಿದ್ದಾರೆ.

ಇಬ್ರಾಹಿಮನು ಪರ್ಶಿಯನ್ ಭಾಷೆಯ ಜೊತೆಗೆ ದಕ್ಷಿಣದ ಉರ್ದು ಭಾಷೆಗೂ ಇತರ ಸ್ಥಳೀಯ ಭಾಷೆಗಳಿಗೂ ಪ್ರೋತ್ಸಾಹ ನೀಡುತ್ತಿದ್ದನು. ಅವನೇ ಸ್ವತಃ ದಕ್ಷಿಣೀ ಉರ್ದು ಭಾಷೆಯಲ್ಲಿ ಕಾವ್ಯವನ್ನು ರಚಿಸಿದನು. ಭಾಷೆಯನ್ನು ಬೆಳೆಸುವ ಸದುದ್ದೇಶದೊಂದಿಗೆ ■ ಕಾವ್ಯವನ್ನು ರಚಿಸುವುದರಲ್ಲಿ ಅವನಲ್ಲಿದ್ದ ಇನ್ನೊಂದು ಮುಖ್ಯ ಉದ್ದೇಶವೆಂದರೆ, ಪರ್ಶಿಯನ್ನರಿಗೆ ಇಲ್ಲಿನ ಭಾಷೆಯಲ್ಲೇ ಭಾರತೀಯ ಸಂಗೀತವನ್ನು ತಿಳಿಸುವುದು. "ಕಿತಾಬ-ಇ-ನೌರಸ"ವೆಂಬ ಗೀತಸಂಗ್ರಹವೇ ಅ[illegible] ಪ್ರಮುಖ ಕೃತಿ. ಆಸ್ಥಾನ ಕವಿಚಕ್ರವ[illegible] "ಝುಹುರಿ"ಯ ಮುನ್ನುಡಿಯನ್ನೊಳಗೊಂ[illegible] ಈ ಗ್ರಂಥದಲ್ಲಿ ಬೇರೆ ಬೇರೆ ರಾಗಗಳಲ್ಲಿ ರಚಿಸಿ[illegible] ಗೀತೆಗಳಿವೆ. ಈ ಪುಸ್ತಕದ ಮೊದಲ ಪುಟದಲ್ಲಿ "ಜಗದ್ಗುರು ಕೃತ ಕಿತಾಬ-ಇ-ನೌರಸ" ಎಂಬ ಉಲ್ಲೇಖವಿದೆ. ಇದರಲ್ಲಿ ಹಿಂದೂ ದೇವದೇವತೆಗಳಿಗೆ ಗೌರವ ಪುರಸ್ಕಾರಗಳಿಂದ ಆವಾಹನ ಮಾಡಲಾಗಿದೆ. ಪ್ರಥಮ ಪದ್ಯದಲ್ಲಿಯೆ ಸರಸ್ವತಿಯ ಆವಾಹನ ಇಂತಿದೆ :

"ನವರಸ ಸೂರ ಜುಗ ಜುಗ ಜುನೀ
ಆನದ ಸರ್ವಗುಣೀ ||

ಜಾ ಸತ್ಸರಸ್ವತೀ ಮಾತಾ
ಇಬ್ರಾಹಿಮ ಪ್ರಸಾದ ಭೂಯೀ ದೂನೀ"||

ಹೇ ತಾಯಿ ಸರಸ್ವತಿಯೇ, ಇಬ್ರಾಹಿಮನ ಮೇಲಿನ ನಿನ್ನ ಅನುಗ್ರಹದಿಂದ ನವರಸ ಕಾವ್ಯವು ಜಗತ್ತಿನಲ್ಲಿ ಬಹುಕಾಲ ಬಾಳುತ್ತದೆ- ಹೀಗೆ ಕಾವ್ಯವನ್ನು ಪ್ರಾರಂಭಿಸಿ ಗಣೇಶ, ಇಂದ್ರ, ಶಿವಪಾರ್ವತಿ ಇತ್ಯಾದಿ ದೈವತಗಳನ್ನು ಇಬ್ರಾಹಿಮನು ಮುಕ್ತಕಂಠದಿಂದ ಹೊಗಳುತ್ತ ಸರಸ್ವತಿ ಮತ್ತು ಗಣಪತಿ ತನ್ನ ತಾಯಿ-ತಂದೆಯರೆಂದೂ ಹೇಳಿದ್ದಾನೆ.

"ಶಾರದಾ ಗಣೇಶ ಮಾತಾಪಿತಾ ತುಮ
ಮಾನೋ
ನಿರ್ಮಲ ಬಿಂಬ ಸ್ಫಟಿಕ ತೀಸೀ ತಾಶ !
ಇಬ್ರಾಹಿಮ ಗುಪಿತ ಗಹೀಸೂ ಅಬ
ನವಾಜ ಪರಗಟ ಕೀನೋ ಧನ್ನ ಮೇರೋ
ರಾಸ"

ಒಟ್ಟು ಐವತ್ತೇಳು ಪದ್ಯಗಳುಳ್ಳ "ಕಿತಾಬ-ಇ-ನೌರಸ"ದಲ್ಲಿ ಭೂಪಾಳೀ, ರಾಮಕಲೀ, ಭೈರವಿ, ಪೂರ್ವಿ ಆಸಾವರಿ, ದೇಸೀ, ತೋಡೀ, ಗೌರಿ, ಕೇದಾರ, ಧನಾಶ್ರೀ, ಕಾನಡಾ, ಕಲ್ಯಾಣ ರಾಗಗಳನ್ನು ಬಳಸಿಕೊಳ್ಳಲಾಗಿದೆ. ಅಲ್ಲಲ್ಲಿ ರಾಗಗಳನ್ನು ಮೂರ್ತೀ[illegible]ಲಾಗಿದೆ. ಉದಾಹರಣೆಗೆ ಶಿವನನ್ನು [illegible]ಮೂರ್ತೀಕರಿಸುವ ಭೈರವಿ ರಾಗ ಹೀಗಿದೆ:-

"ಭೈರವ ಕರ್ಪೂರರಾಗ ಭಾಲ ತಿಲಕ
ಚಂದ್ರಾ !
ತ್ರಿನೇತ್ರ ಜಟಾ ಮುಕುಟ ಗಂಗಾಧರಾ ||"

ಸ್ತ್ರೀ ಸೌಂದರ್ಯ, ವಿರಹ ಸಂದರ್ಭಗಳೂ ಇಬ್ರಾಹಿಮನ ಈ ಕಾವ್ಯದಲ್ಲಿ ಸುಮನೋಹರವಾಗಿ ವರ್ಣಿತವಾಗಿವೆ. ಇಂಥ ವರ್ಣನೆಗಳು ಅವನ ಸಹಜ ಕವಿತಾಶಕ್ತಿಯನ್ನು ತೋರಿಸುತ್ತವೆ. ಇದಕ್ಕೆ "ಕಿತಾಬ-ಇ-ನೌರಸ"ದಲ್ಲಿ ಹಲವು ಉದಾಹರಣೆಗಳು ಸಿಗುತ್ತವೆ.

ವಿರಹದ ಬಗ್ಗೆ ಅವನೊಂದು ಪದ್ಯದಲ್ಲಿ ಹೀಗೆ ಬರೆಯುತ್ತಾನೆ:

"ಹೇ ಪವನ ನ ಜಾ ಉನಪರ ಜಿಸ
ಬಿರಹಿ ಕಠಿಣ ಅಗನ ಭಾಗ ।
ಹೂಂ ಜಲೂಂ ಕುಭ ಡರ ನಹೀಂ
ಮುಂಜ ಡರ ಜಗ ಜಲಜಾಯೆ ಉಸ ಆಗ"

ಹೇ ಪವನ, ವಿರಹಾಗ್ನಿಯಿಂದ ಪರಿತಪಿಸುತ್ತಿರುವ ವಿರಹಿಗಳ ಹತ್ತಿರ ಹೋಗಬೇಡ. ನಿನ್ನನ್ನು ಕಂಡು ಅವರು ಅಂಜುತ್ತಾರೆನ್ನುವ ಭಯಕ್ಕಿಂತ ನಿನ್ನಿಂದ ಅವರ ವಿರಹಾಗ್ನಿ ಹರಡುತ್ತಾ ಇಡೀ ಜಗತ್ತನ್ನೆ ಅದು ಸುಟ್ಟೀತೆಂಬ ಭೀತಿ ಹೆಚ್ಚಾಗಿದೆ ನನಗೆ.

ಇಬ್ರಾಹಿಮನ ಚಿತ್ರವನ್ನೇ ಕೊಡುವ ಒಂದು ಪದ್ಯವೂ ಅದರಲ್ಲಿದೆ. ಕೇಸರೀವಸ್ತ್ರ ಭೂಷಿತ, ಶ್ಯಾಮದಂತ, ಮೆಹಂದಿ ಹಚ್ಚಿದ ಉಗುರು, ಕೊರಳಲ್ಲಿ ಸ್ಫಟಿಕದ ಮಾಲೆ, ಒಂದು ಕೈಯಲ್ಲಿ ತಂಬೂರಿ, ಇನ್ನೊಂದರಲ್ಲಿ ನವರಸ ಗೀತ ಸಂಗ್ರಹ, ಮುಖದಿಂದ ಆ ಕಾವ್ಯದ ಗಾಯನ, ಆತ ಸದ್ಗುಣಿ ಮತ್ತು ಪ್ರೇಮಲ. ವಿಜಾಪುರವೇ ಅವನ ಪ್ರಿಯನಗರ, ಗಣಪತಿ ಅವನ ತಂದೆ, ಶಾರದೆಯೇ ತಾಯಿ—ಹೀಗಿದೆ ಆ ಪದ್ಯದ ಅರ್ಥ. ತನ್ನ ಅತ್ತೆಯಾದ "ಬಡೀಸಾಹಿಬಾ", ಹೆಂಡತಿಯಾದ "ಮಲಿಕಾ ಜಹಾನ್", ಪ್ರಿಯ ಆನೆಯಾದ "ಅತಿಶಖಾನ", ಮೆಚ್ಚಿನ ತಂಬೂರಿ "ಮೋತೀಖಾನ" —ಇವುಗಳ ಮೇಲೂ ಒಂದೊಂದು ಪದ್ಯ ರಚಿಸಿದ್ದಾನೆ. ಆತನ ಗೀತ ಪ್ರೇಮದಿಂದ ಜನರೆಲ್ಲ ಅವನಿಗೆ "ನಾದ ಮೂರ್ತಿ ಜಗದ್ಗುರು" ಎನ್ನುತ್ತಿದ್ದರಂತೆ.

"ಇಬ್ರಾಹಿಮು ಗಾಯೇ ಬಜಾಯೇ ।
ಪರ ಚಂಗ ಜಗತ್-ಗುರು ನಾದ
ಮಾರತ ಖಿತಾವು ಪಾವೆ"

ಹಿಂದೂ ದೇವತೆಗಳನ್ನು ಪ್ರಾರ್ಥಿಸಿದ್ದರೂ ಇಬ್ರಾಹಿಮನು ಪೈಗಂಬರನನ್ನು ಪ್ರಶಂಸಿಸಲು ಮರೆಯಲಿಲ್ಲ. ಒಟ್ಟಿನಲ್ಲಿ ಧರ್ಮಾಂಧತೆಯಿಂದ ಅವನು ದೂರವಾಗಿದ್ದನು. "ಯಾವನೊಬ್ಬ ಬ್ರಾಹ್ಮಣನಾಗಲೀ ತುರುಕನಾಗಲೀ ಅವನ ಭಾಷೆ ಯಾವುದೇ ಆಗಿರಲಿ ಅವನ ಹೃದಯದಿಂದ ಹೊರಹೊಮ್ಮುವ ಭಾವನೆ ಒಂದೇ. ಸರಸ್ವತೀ ಪ್ರಸಾದವನ್ನು ಪಡೆದವನೇ ಧನ್ಯ. ಓ ಇಬ್ರಾಹಿಮ, ಜಗತ್ತು ಜ್ಞಾನವನ್ನು ಅರಸುತ್ತಿದೆ. ಜ್ಞಾನದ ಪ್ರಭಾವವನ್ನು ಸ್ಥಿರ ಹೃದಯದಿಂದ ಧ್ಯಾನಿಸಿ ಸೇವೆ ಮಾಡು" ಎಂಬುದೇ ಅವನ ಆತ್ಮ ಸಂದೇಶವಾಗಿದೆ. ಧರ್ಮಸಮನ್ವಯವನ್ನು ಕುರಿತು ಹೇಳುವ ಅವನ ಆತ್ಮ ಸಂದೇಶವು ಇಬ್ರಾಹಿಮನ ವ್ಯಕ್ತಿತ್ವವನ್ನು ಸಮ್ರಾಟ ಅಕಬರನಿಗಿಂತಲೂ ಒಂದು ಗುಂಜಿ ತೂಕ ಎತ್ತರಕ್ಕೆ ಒಯ್ಯುತ್ತದೆ.

ಇಬ್ರಾಹಿಮ ವಿಶೇಷ ಆಸ್ಥೆಯಿರಿಸಿದ್ದ ಇನ್ನೊಂದು ವಿಷಯವೆಂದರೆ ಚಿತ್ರಕಲೆ. ಆದಿಲಶಾಹಿ ಅರಸರ ಪೋಷಣೆಯಲ್ಲಿ ಭಾರತೀಯ ಮತ್ತು ಪರ್ಶಿಯದ ಚಿತ್ರಕಲಾ ಪದ್ಧತಿಗಳ ಸಮನ್ವಯವಾಗಿ "ವಿಜಾಪುರ ಚಿತ್ರಕಲೆ" ನಿರ್ಮಾಣವಾಯಿತು. ಅದು ಇಬ್ರಾಹಿಮನ ಆಳ್ವಿಕೆಯ ಕಾಲದಲ್ಲಿ ಪರಮೋಚ್ಚ ಪರಿಪೂರ್ಣ ಸ್ಥಿತಿಗೆ ಮುಟ್ಟಿತಲ್ಲದೆ ಅದು "ವಿಜಾಪುರ ಚಿತ್ರಕಲಾ ಪದ್ಧತಿ" ಎಂಬ ಹೆಸರಿನಿಂದ ಭಾರತೀಯ ಚಿತ್ರಕಲೆಯಲ್ಲಿ ಮಹತ್ವವಾದ ವಿಶಿಷ್ಟ ಸ್ಥಾನವನ್ನೂ ಪಡೆಯಿತು.

ಸಾಹಿತ್ಯ-ಸಂಗೀತ-ಚಿತ್ರಕಲೆಗಳಂತೆ ಶಿಲ್ಪಕಲೆಗೂ ಅವನು ವಿಶೇಷ ಪ್ರೋತ್ಸಾಹವಿತ್ತನು. ಹಿಂದೂ-ಮುಸಲ್ಮಾನರ ವಾಸ್ತು ಶಿಲ್ಪಕಲಾ ಸಮನ್ವಯದ ಅತ್ಯುಚ್ಚ ಸೌಂದರ್ಯಸಿದ್ಧಿಯನ್ನು ಸಾರುವ "ಇಬ್ರಾಹಿಮ್ ರೋಝಾ" ಇಂದಿಗೂ ವಿಜಾಪುರದಲ್ಲಿ ತಲೆಯೆತ್ತಿ ನಿಂತಿದೆ. ಇಬ್ರಾಹಿಮ ಆದಿಲ್‌ಶಹನ ಕಬರಸ್ಥಾನವಾಗಿರುವ ಈ ರಮ್ಯ ಕಟ್ಟಡವು ನಾಲ್ಕು ನೂರು ಅಡಿ ಚಚ್ಚೌಕಾಕಾರದ ಆವಾರದಲ್ಲಿ ನಿಂತಿದೆ. ಇಬ್ರಾಹಿಮ್ ರೋಝಾವನ್ನು ಕಟ್ಟಲು

ಸುಮಾರು ಇಪ್ಪತ್ತು ವರ್ಷಗಳು ಹಿಡಿದ ವೆಂದೂ ಅಂದಿನ ಕಾಲದ ೧,೫೯,೦೦೦ ಹೊನ್ನುಗಳು ವೆಚ್ಚವಾದುವೆಂದೂ ಅದರ ಮೇಲಿನ ಶಿಲಾಲೇಖಗಳಿಂದ ತಿಳಿದು ಬರು ತ್ತದೆ. ಇದನ್ನು "ಮಲಿಕ್-ಸಂದಲ್" ಎಂಬ ವನು ಕಟ್ಟಿದನೆಂದು ದಕ್ಷಿಣ ಭಾಗದ ಬಾಗಿಲ ಮೇಲಿರುವ ಶಿಲಾಲಿಪಿಯಿಂದ ತಿಳಿಯುತ್ತದೆ. ಮುಹಮ್ಮದೀಯರ ಈ ಕಟ್ಟಡದ ಮೇಲೆ ಪ್ರಪ್ರಥಮವಾಗಿ ಹಿಂದೂ ಸಂಪ್ರದಾಯದ "ಕಮಲ"ದ ನಕ್ಷೆಯನ್ನು ಬಿಡಿಸಿರುವುದನ್ನು ಕಾಣಬಹುದು. ಇಬ್ರಾಹಿಮ್ ರೋಝಾದ ಕಲಾಕುಶಲತೆ ಹಾಗೂ ರಮಣೀಯತೆಗಳಿಗೆ ಮನಸೋತ ಪ್ರಖ್ಯಾತ ಕಲಾವಿಮರ್ಶಕ ಇತಿ ಹಾಸಕಾರ ಫರ್ಗ್ಯುಸನ್ ತನ್ನ "ಪೌರ್ವಾತ್ಯ ಮತ್ತು ಭಾರತೀಯ ವಾಸ್ತುಶಿಲ್ಪ" ಎಂಬ ಉದ್ಗ್ರಂಥದಲ್ಲಿ, "ಸೂಕ್ಷ್ಮ ಅಲಂಕಾರ ಸಮೃದ್ಧಿಯಲ್ಲ ಇಬ್ರಾಹಿಮ ರೋಝಾ ಎಂಬ ಕಬರಸ್ಥಾನವನ್ನು ಸರಿಗಟ್ಟುವ ಯಾವ ಕಟ್ಟ ಡವೂ ಹಿಂದುಸ್ತಾನದಲ್ಲಿಲ್ಲ" ಎಂದು ಬರೆದಿ ದ್ದಾನೆ. ಸಾತಮಂಜಿಲ್, ಜಲಮಂದಿರ, ತಾಜಬಾವಡಿ, ಮಲಿಕಾಜಹಾಂ ಮಸೀದಿಗ ಗಳನ್ನು ಇಬ್ರಾಹಿಮನೇ ಸ್ವತಃ ಕಟ್ಟಿಸಿದ.

ಎರಡನೆಯ ಇಬ್ರಾಹಿಮ ಆದಿಲಶಹನು ಜಗದ್ಗುರು ಎನಿಸಿಕೊಂಡು ತನ್ನ ವಂಶಜರಲ್ಲೇ ಹೆಚ್ಚು ದೀರ್ಘಕಾಲ ವೈಭವದಿಂದ ರಾಜ್ಯವಾಳಿ ದನು. ಇವನ ಅಸ್ಥಾನಕ್ಕೆ ಭೆಟ್ಟಿಕೊಟ್ಟ ಅನೇಕ ರಾಯಭಾರಿಗಳಲ್ಲಿ ಒಬ್ಬನಾದ ಅಸದ ಬೇಗ (ಅಕಬರನ ರಾಯಭಾರಿ) ವಿಜಾಪುರ ಪಟ್ಟಣವನ್ನು "ಪ್ರವಾಸಿಗರಿಗೆ ಜಗತ್ತಿನಲ್ಲಿ ಇನ್ನೆಲ್ಲಿಯೂ ಕಾಣಸಿಗದಂಥ ಸುಂದರ ಸಂಪ ದ್ಭರಿತ ಆಶ್ಚರ್ಯಕರ ಪಟ್ಟಣ" ಎಂದು ಹೊಗಳಿದ್ದಾನೆ.

ಎರಡನೇ ಇಬ್ರಾಹಿಮ ಆದಿಲಶಾಹ ಕ್ರಿ. ಶ. ೧೬೨೬ ರಲ್ಲಿ ತೀರಿಕೊಂಡನು. ಆತನು ಮರಣ ಹೊಂದಿ ಇಂದಿಗೆ ೩೪೦ ವರ್ಷಗಳು ಸಂದರೂ ಧರ್ಮಾಂಧತೆಯಿಂದ ದೂರವಾಗಿದ್ದ ಈ ಸರ ಸ್ವತೀ ಭಕ್ತನು ಮೀಟಿದ ಧರ್ಮಸಮನ್ವ ಯದ ತಂಬೂರಿಯ ನಾದ ಇಂದಿಗೂ ರಸಿಕ ರನ್ನು ಅಚ್ಚರಿಗೊಳಿಸುತ್ತಿದೆ.

"ಝುನನ-ಝುನನ-ಝುನ್-
ಮೋತಿಖಾನ ಕೀ ತಾಂತ ಗಾಜೇ।
ತಾಲ ಮೃದಂಗ ಭೇದ ಸೋಂ
ನವರಸ ಬಾಜೇ।
ಝುನನ-ಝುನನ-ಝುನ್-
ಝುನನ-ಝುನನ-ಝುನ್ ॥"



## ರಾಧೆಯ ಭಾಗ್ಯ

ಕೃಷ್ಣ ನಿನ್ನ ನೆರಳಿನಂತೆ ನಡೆವನಲ್ಲೆ ರಾಧಿಕೆ?
ಹೃದಯ ಮುಕುರದಲ್ಲಿ ಮಾಡಿ ಇರುವ ಸದಾಕಾಲಕೆ!
ದೇವಗಂಗೆ ಹರಿದ ತೆರದಿ ಭಗೀರಥನ ಹಿಂದಕೆ,
ಹರಿಯೆ ಹರಿದು ಬರುವ ನಿನ್ನ ಮನೋರಥದ ವೇಗಕೆ!
ಮಾನ್ಯೆ ನೀನು, ಧನ್ಯನವನು, ಬೇರೆ ಮಾತು ಏತಕೆ?

ಸಂಗ್ರಹ: ಎಚ್. ಜಿ. ಲೋಕೂರು

— 'ರಸಿಕಪ್ರಿಯಾ'ದಿಂದ

# ನಗೆಮಲ್ಲಿಗೆ

ರಿಕ್ರೂಟಿಂಗ್ ಆಫೀಸರ್– ಯಾವ ಆಟ ಆಡುತ್ತೀಯಪ್ಪ?

ಸೈನ್ಯ ಸೇರಲು ಬಂದ ತರುಣ– ದೊಡ್ಡಾಟದೀ, ನಮ್ಮೂರಾಗ ಅರ್ಜುನನ ಪಾರ್ಟ ಹಾಕಂವಾ ನಾನ್ರಿ. —ವಿ. ಜಿ. ಲೋಕೇಶ್ವರ

*

"ಏಕೇ, ಇಂದು ಹತ್ತಾರು ಕಡೆ ಭಾಷಣ ಮಾಡಿ ಮಾಡಿ ಸುಸ್ತಾಗಿ ಹೋಗಿದ್ದೇನೆ, ಒಂದಿಷ್ಟು ಕಾಲನ್ನಾದರೂ ಒತ್ತು."

"ಅಲ್ಲರಿ. ಭಾಷಣ ಮಾಡಿದರೆ ಗಂಟಲು ಮಾತ್ರ ನೋವಾಗಬಹುದು. ಕಾಲಿಗೂ ಭಾಷಣಕ್ಕೂ..." "ತಡಿ. ನಿನ್ನ ಬುದ್ಧಿ ಓಡಿಸಬೇಡ. ಹಾಗೆ ಹೇಳಿ ಕಾಲಿನ ಬದಲ ಗಂಟಲು ಒತ್ತಬೇಕೆನ್ನುತ್ತೀಯೇನು?"

*

ಪಕ್ಕಾ ಕುಡುಕನೊಬ್ಬನಿಗೆ ಒಬ್ಬರು ಯೋಗಾಭ್ಯಾಸ ಮಾಡಿದರೆ ಈ ಚಟ ಬಿಡಲು ಸಾಧ್ಯವಾಗಬಹುದು ಎಂದಿದ್ದರಿಂದ ಆತ ಅಪಾರ ಕಷ್ಟವೆನಿಸಿದರೂ ಯೋಗಾಸನಗಳನ್ನು ಹಾಕುವುದನ್ನು ಕಲಿತ.

ಕೆಲ ದಿನಗಳ ಮೇಲೆ ಅವನ ಹೆಂಡತಿಯನ್ನು ಯಾರೋ ಕೇಳಿದರು, "ಅಮ್ಮಾ, ಯೋಗಾಭ್ಯಾಸದಿಂದ ನಿಮ್ಮ ಗಂಡನಿಗೆ ಸಹಾಯವಾಯಿತೆ?"

"ಹೌದು ಎನ್ನಬೇಕು. ಈಗ ಅವರು ತಲೆಯ ಮೇಲೆ ನಿಂತು ಕೂಡ ಕುಡಿಯಬಲ್ಲರು." ಎಂದಳು ಹೆಂಡತಿ.

*

ಪ್ರೊಫೆಸರರು ಕಾಯಿಪಲ್ಲೆ ಪೇಟೆಗೆ ಹೋಗಿ ಒಬ್ಬನಿಂದ ಎಂಟಾಣೆಯ ಬಟಾಟೆ ಕೊಂಡು ಅವನಿಗೆ ರೂಪಾಯಿ ನೋಟು ಕೊಟ್ಟು ಚಿಲ್ಲರೆ ತೆಗೆದುಕೊಳ್ಳದೆ ಮುಂದೆ ನಡೆದರು. ಬಟಾಟೆ ಮಾರುವವ ಪ್ರಾಮಾಣಿಕನಾಗಿದ್ದ. ಆತ "ರಾಯರೇ" ಎಂದು ಪ್ರೊಫೆಸರರನ್ನು ಕೂಗಿದ ಎಂಟಾಣೆ ವಾಪಸು ಕೊಡಲೆಂದು.

ಆಗ ಪ್ರೊಫೆಸರರು ತಿರುಗಿ ನೋಡಿ "ಎಲಾ ರೊಕ್ಕ ಕೊಡಲು ಮರೆತೇಬಿಟ್ಟೆನೆಂದು ಕಾಣುತ್ತದೆ." ಎನ್ನುತ್ತ ಬಟಾಟೆ ಮಾರುವವನಿಗೆ ರೊಕ್ಕ ಕೊಡಲೆಂದು ಕಿಸೆಗೆ ಕೈ ಹಾಕಿದರು.



"ಅಯ್ಯೋ! ನಾಳೆ ಬೀದಿಗುಡಿಸಿದರಾಯ್ತು. ಮಂತ್ರಿಗಳ ಪ್ರೋಗ್ರಾಮು ಮುಂದಕ್ಕೆ ಹಾಕಿದರಂತೆ."

ಮೆನೇಜರ್ (ತಡಮಾಡಿ ಬಂದ ಕಾರಕೂನನಿಗೆ)—"ಏನ್ರೀ, ಯಾವಾಗಲೂ ತಡಮಾಡಿ ಬರುತ್ತೀರಲ್ರಿ. ಈ ಆಫೀಸಿನಲ್ಲಿ ಎಷ್ಟು ಗಂಟೆಗೆ ಕೆಲಸ ಸುರುವಾಗುತ್ತೆಂತ ಗೊತ್ತಿಲ್ಲೇನ್ರೀ ?"

ಕಾರಕೂನ– "ಇಲ್ಲಾ ಸಾರ್, ನಾನು ಬರೋವಾಗ ದಿನಾಲೂ ಎಲ್ಲರೂ ಕೆಲಸ ಮಾಡುತ್ತಾನೇ ಇರ್ತಾರೆ ಸಾರ್."

*

ಡಾಕ್ಟರರು ಹೊಸತಾಗಿ ಬೇಟೆಯಾಡಲು ಆರಂಭಿಸಿದ್ದರು. ಒಂದು ದಿನ ತಮ್ಮ ಅಡಿಗೆಯವನನ್ನು ಕರೆದುಕೊಂಡು ಅವರು ಮೊಲದ ಬೇಟೆಗೆ ಹೋದರು. ಆದರೆ ಅವರ ಗುರಿ ಒಮ್ಮೆಯೂ ಸಾಧಿಸಲಿಲ್ಲ. ಡಾಕ್ಟರರು ಬೇಸತ್ತು ಬಂದೂಕು ಒಗೆದು "ಈ ಮೊಲಗಳು ತೀರ ತ್ರಾಸದಾಯಕ ಪ್ರಾಣಿಗಳು. ನಾನು ಇವುಗಳ ಬೇಟೆಯಾಡಲಾರೆ" ಎಂದರು.

ಆಗ ಅಡಿಗೆಯವನೆಂದ, "ಯಾಕೆ ಬೇಸರ ಡಾಕ್ಟರರೆ? ನಿಮ್ಮ ಎದುರು ಬಂದು ಮಲಗಿ ಪ್ರಾಣ ಕಳೆದುಕೊಳ್ಳಲು ಮೊಲಗಳೇನು ರೋಗಿಗಳೆ ?"

*

ಹೆಂಡತಿ– ಸಾಕು ಬಿಡ್ರಿ ನಿಮ್ಮ ಬುದ್ಧಿವಂತಿಕೆ ಪ್ರದರ್ಶನ! ನೀವು ನನ್ನ ಹತ್ತಿರ ಲಗ್ನದ ಪ್ರಸ್ತಾಪ ಮಾಡಿದಾಗ ಶುದ್ಧ ಮೂರ್ಖರಂತೆ ಕಾಣಿಸುತ್ತಿದ್ದಿರಿ.

ಗಂಡ– ಅಂದರೆ ? ಮೂರ್ಖನಂತೆ ಕಾಣುತ್ತಿದ್ದೆ ಎಂದರೆ ! ಆಗ ನಿಜವಾಗಿಯೂ ನಾನು ಮೂರ್ಖನೇ ಆಗಿದ್ದೆ.

*

ವಕೀಲರು ಸಾಕ್ಷಿಗಾರನನ್ನು ಕೇಳಿದರು, "ಸಪ್ಟಂಬರ್ ೫ ನೇ ತಾರೀಖಿನಂದು ನೀನು ರಾಮಲಾಲನನ್ನು ಭೆಟ್ಟಿಯಾಗಲು ಅವನ ಮನೆಗೆ ಹೋದಾಗ ಆತ ನಿನಗೆ ಏನು ಹೇಳಿದ ?".

ಪ್ರತಿವಾದಿ ಪಕ್ಷದ ವಕೀಲರು ಈ ಪ್ರಶ್ನೆಗೆ ಆಕ್ಷೇಪವೆತ್ತಿದರು. ಅರ್ಧ ಗಂಟೆಕಾಲ ಈ ಬಗ್ಗೆ ಚರ್ಚೆ ನಡೆದ ನಂತರ ನ್ಯಾಯಾಧೀಶರು "ಈ ಪ್ರಶ್ನೆ ಕೇಳಬಹುದು" ಎಂದು ತೀರ್ಪಿತ್ತರು. ಆಗ ವಾದಿ ಪಕ್ಷದ ವಕೀಲ ಮತ್ತೊಮ್ಮೆ ಅದೇ ಪ್ರಶ್ನೆಯನ್ನು ಕೇಳಿದರು.

ಸಾಕ್ಷಿಗಾರ ಉತ್ತರವಿತ್ತ, "ಏನೂ ಇಲ್ಲ. ನಾನು ಹೋದಾಗ ಆತ ಮನೆಯಲ್ಲಿ ಇರಲೇ ಇಲ್ಲ."

*

ಆತ– ಅಲ್ಲಾ, ದರೋಡೆಖೋರನೊಬ್ಬ ೧೨ ತಾಸಿನೊಳಗಾಗಿ ಊರು ಬಿಡು, ಇಲ್ಲವಾದರೆ ಒಳ್ಳೆಯದಾಗದು ಎಂದು ನಿನಗೆ ಪತ್ರ ಬರೆದರೆ ನೀನೇನು ಮಾಡುವೆ ?

ಈತ– ಆ ಪತ್ರವನ್ನು ಟ್ರೇನಿನಲ್ಲಿ ಕುಳಿತೇ ಓದುವೆ.

*

ಗಂಡ– ನನಗೆ ಗೊತ್ತಿದೆ ಬಿಡೆ. ನಾನು ಲಕ್ಷಾಧೀಶನಾಗಿದ್ದರಿಂದಲೆ ನೀನು ನನ್ನನ್ನು ಲಗ್ನವಾದಿ.

ಹೆಂಡತಿ– ಇಲ್ರಿ. ಕೊರಳಾಣೆ ಮಾಡಿ ಬೇಕಾದ್ರೂ ಹೇಳ್ತೇನೆ. ನೀವು ಕೋಟ್ಯಧೀಶರಾಗಿದ್ದರೂ ನಿಮ್ಮನ್ನು ಲಗ್ನವಾಗುತ್ತಿದ್ದೆ.

*

ಆತ– ಅಲ್ಲಪ್ಪಾ, ಏನಿದು ವಿಚಿತ್ರ ? ಮನುಷ್ಯರು ಗಾಳಿ ಬಿಸಿಲಿನಿಂದ ರಕ್ಷಣೆ ಮಾಡಿಕೊಳ್ಳಲು ಕಣ್ಣಿಗೆ ಕಪ್ಪು ಕನ್ನಡಕ ಧರಿಸುತ್ತಾರೆ. ಆದರೆ ನೀನು ನಿನ್ನ ಕುದುರೆಯ ಕಣ್ಣಿಗೆ ಹಸಿರು ಕನ್ನಡಕ ಹಾಕಿದ್ದಿಯಲ್ಲ ಏನು ಸಮಾಚಾರ ಅಂತ ?

ಈತ– ಒಣಗಿ ಹಳದಿಯಾದ ಹುಲ್ಲನ್ನೂ ಹಸಿರು ಹುಲ್ಲು ಎಂದು ತಿಳಿದು ಅದು ತಿನ್ನಲಿ ಅಂತ.



ಈ ತಿಂಗಳು ಶ್ರವಣಬೆಳಗೊಳದಲ್ಲಿ
ಮಹಾ ಗೋಮಟಾಭಿಷೇಕ ನೆರವೇರಲಿದೆ.
ಆದರೆ ಈ ಗೋಮಟ ಯಾರು ?

# ಬಾಹುಬಲಿ ಗೋಮಟನಾದ !

ಸೇವ ನಮಿರಾಜ ಮಲ್ಲ

ಗಿರಿಯ ನೆತ್ತಿಯ ಮೇಲೆ ಪ್ರಚಂಡ ಗಾತ್ರದ ಮಹಾ ಶಿಲಾಮೂರ್ತಿ ನಿಂತಿದೆ. ಪ್ರಶಾಂತ ಕಳೆಯ ಮಂದಸ್ಮಿತ-ಸುಂದರ, ಭವ್ಯ, ದಿಗಂಬರ ಮೂರ್ತಿ. ನೂರಾರು ವರ್ಷಗಳ ಮಳೆ, ಗಾಳಿ, ಬಿಸಿಲುಗಳನ್ನು ಉಂಡೂ ಅವಿಚಲವಾಗಿ ನಿಂತ ಮೂರ್ತಿ. ಪ್ರತಿ ವರ್ಷವೂ ಸಾವಿರಗಟ್ಟಲೆ ಜನ. ಈ ಗಗನಚುಂಬಿ ಮೂರ್ತಿಯನ್ನು ,ಬೆರಗಾಗಿ ನೋಡಿ ಅದರ ಶಿಲ್ಪ ವೈಭವವನ್ನು ಮೆಚ್ಚುತ್ತಾರೆ.

ಆದರೆ ಯಾರದೀ ಮೂರ್ತಿ? ಅಖಂಡ ಶಿಲೆಯಿಂದ ಈ ಮೂರ್ತಿಯನ್ನು ಕಡೆದು ಪರ್ವತಾಗ್ರದ ಮೇಲೊಯ್ದು ನಿಲ್ಲಿಸಲು ಶಿಲ್ಪಿಗಳಿಗೆ ಸ್ಫೂರ್ತಿಯೊದಗಿಸಿದ, ಯಜಮಾನನಿಗೆ ಧನವ್ಯಯವನ್ನು ಪ್ರೇರಿಸಿದ ವ್ಯಕ್ತಿ ಯಾರಾಗಿರಬಹುದು? ಈ ಮೂರ್ತಿ ಏನನ್ನು ಜಗತ್ತಿಗೆ ಸಾರುತ್ತಿದೆ? ಯಾವ ಸಂದೇಶವನ್ನು ಅದರ ಸ್ಮಿತಾಧರಗಳು ಮೌನದಿಂದ ಘೋಷಿಸುತ್ತಿವೆ?

ಇದು ಭೋಗದ ಮಧ್ಯದಲ್ಲಿ ವೈರಾಗ್ಯವನ್ನು, ವಿಜಯದ ಕ್ಷಣದಲ್ಲಿ ಅಧಿಕಾರ ಮೋಹತ್ಯಾಗವನ್ನು ಸ್ವೀಕರಿಸಿದ ಮಹಾಪುರುಷನೊಬ್ಬನ ಮೂರ್ತಿಯಾಗಿದೆ. ಜೈನ ಪುರಾಣಗಳಲ್ಲಿ ಬರುವ ಅಪರೂಪ ವ್ಯಕ್ತಿಗಳಲ್ಲೊಬ್ಬನಾದ ಬಾಹುಬಲಿ ರಾಜಕುಮಾರನ ನೆನಪನ್ನು ಅದು ಕೊಡುತ್ತದೆ. ಚಕ್ರವರ್ತಿ ಪದ[illegible]ಗಿ ದಿಗ್ವಿಜಯಕ್ಕೆ ಬಂದ ಅಣ್ಣನನ್ನು ಸೋಲಿಸಿ ಅದೇ ಕ್ಷಣದಲ್ಲಿ ಪ್ರಪಂಚದ ನಶ್ವರತೆಯ ಅರಿವು [illegible] ಸಮಸ್ತವನ್ನೂ ಪರಿತ್ಯಜಿಸಿದ ಧೀರ ವಿರ



ಕ್ತನ ವಿಗ್ರಹವಿದು.

ಕಥೆ ಹಳೆಯದು. ಕೃತಯುಗದಷ್ಟು ಹಳೆಯದು.

ಬಾಹುಬಲಿ ವೃಷಭ ಮತ್ತು ಸುನಂದೆಯರ ಮಗ. ವೃಷಭನು ಅಯೋಧ್ಯಾಧಿಪತಿ. ಸುನಂದೆ ಮಹಾಕಚ್ಛ ರಾಜನ ಸೋದರಿ. ವೃಷಭನ ಇನ್ನೊಬ್ಬ ರಾಣಿ ಯಶಸ್ವತಿಯ ಮಗ ಭರತ; ಅವನು ಬಾಹುಬಲಿಗಿಂತ ಹಿರಿಯ. ಮುಂದೆ ವೃಷಭ ರಾಜನು ಸಂಸಾರದಲ್ಲಿ ವಿರಕ್ತನಾಗಿ ದೀಕ್ಷೆಯನ್ನು ಕೈಗೊಂಡಾಗ ಭರತನನ್ನು ರಾಜನನ್ನಾಗಿ ನೇಮಿಸಿದ. ಬಾಹುಬಲಿಗೆ ಯುವರಾಜ ಪದವಿ ದೊರಕಿತು. ಅವನು ಪೌದನಾಪುರದಲ್ಲಿ ನೆಲಸಿದ. ಸುಂದರಿ ಎಂಬ ಒಬ್ಬ ಸೋದರಿಯೂ ಅವನಿಗಿದ್ದಳು.

ಬಾಹುಬಲಿಯು ತನ್ನ ರೂಪಸಂಪತ್ತಿನಿಂದಾಗಿ ಆ ಕಾಲದ ಮನ್ಮಥನೆಂದು ಹೆಸರು ಪಡೆದಿದ್ದ. ಅವನ ತಲೆಕೂದಲು ಭ್ರಮರದಂತೆ ಕಾಂತಿಯುಕ್ತವಾಗಿ ಕಬ್ಬಿಣದ ಉಂಗುರಗಳಂತೆ ಶೋಭಿಸುತ್ತಿದ್ದುವು. ಹಣೆಯು ಅಷ್ಟಮೀ ಚಂದ್ರನಂತೆ ವಿಶಾಲವಾಗಿತ್ತು. ಕರ್ಣಕುಂಡಲಗಳನ್ನು ಧರಿಸಿದ ಅವನ ಮುಖವು ಎರಡು ಚಕ್ರವಾಕ ಪಕ್ಷಿಗಳಿಂದ ಆವೃತವಾದ ತಾವರೆಯಂತೆ ಪ್ರಕಾಶಿಸುತ್ತಿತ್ತು. ಅವನ ಮುಖವು ಮಂದಹಾಸವನ್ನು ಬೀರುತ್ತಿತ್ತು. ಅವನ ಕಣ್ಣುಗಳು ಶುಭ್ರವಾದ ಮುಖಸರೋವರದಲ್ಲಿರುವ ನೈದಿಲೆ ಹೂಗಳಂತೆ ಹೊಳೆಯುತ್ತಿದ್ದುವು. ಪಚ್ಚೆಯ ರತ್ನಗಳನ್ನು ಪೋಣಿಸಿದ ಐದು ನೂರಾ ನಾಲ್ಕು ಎಳೆಗಳುಳ್ಳ ವಿಜಯಚ್ಛಂದವೆಂಬ ಹಾರವು ಅವನ ಎದೆಯ ಮೇಲೆ ಜೋಲಾಡುತ್ತಿತ್ತು. ಅವನ ಭುಜಗಳು ಚಿಕ್ಕ ಶಿಖರಗಳಂತೆ ಕಾಣುತ್ತಿದ್ದುವು. ಅವನ ತೇಜೋಮಯವಾದ ದೊಡ್ಡ ಮತ್ತು ಬಲಿಷ್ಠ ಬಾಹುಗಳಿಂದಾಗಿ ಅವನಿಗೆ ಬಾಹುಬಲಿಯೆಂಬ ಹೆಸರು ಬಂದಿತ್ತು. ಅವನ ನಾಭಿಯು ವರ್ತುಲಾಕಾರವಾಗಿ ಆಳವಾಗಿತ್ತು. ನಡು ವಿಸ್ತಾರವಾಗಿತ್ತು. ತೊಡೆಗಳು ಬಾಳೆಯ ಕಂಭಗಳಂತಿದ್ದುವು. ಅವನ ಕಣಕಾಲುಗಳು ಶಕ್ತಿಯುತವಾಗಿದ್ದುವು. ಅವುಗಳ ಬಲದಿಂದ ಮುಂದೆ ಅವನು ಪ್ರತಿಮಾಯೋಗ ತಪಸ್ಸನ್ನು ಸಿದ್ಧಿಸಲು ಸಾಧ್ಯವಾಯಿತು. ಮೃದುವಾದ ತಲದಿಂದೊಡಗೂಡಿದ ಎಸಳುಗಳಂಥ ಬೆರಳುಗಳಿದ್ದ ಅವನ ಕೆಂಪಾದ ಪಾದಗಳು ಕೆಂದಾವರೆಯನ್ನು ಹೋಲುತ್ತಿದ್ದುವು.

ಈ ರೂಪಾತಿಶಯಗಳನ್ನು ಪಡೆದಿದ್ದ ಬಾಹುಬಲಿಯನ್ನು ಮನೋಭವ, ಮನೋಜ, ಮನೋ-ಭೂ, ಮನ್ಮಥ, ಅಂಗಜ, ಮದನ ಮತ್ತು ಅನ-ನ್ಯಜ ಎಂದೂ ಕರೆಯುತಿದ್ದರು. ಅವನು ಧರಿಸುತಿದ್ದ ವಿಜಯಚ್ಛಂದ ಹಾರವು ಕಾಮದೇವನು ಧರಿಸುವ ಮುತ್ತಿನ ಹಾರವಾಗಿತ್ತು. ತಮ್ಮ ಸೋದರರ ಮಧ್ಯೆ ಭರತನು ಸೂರ್ಯನಂತಿದ್ದರೆ ಬಾಹುಬಲಿಯು ಚಂದ್ರನಂತಿದ್ದ.

ತನ್ನ ಮಕ್ಕಳಿಗೆ ವಿದ್ಯಾಭ್ಯಾಸವನ್ನು ವೃಷಭನೇ ಮಾಡಿಸಿದ. ಬಂಗಾರದ ಹಲಿಗೆಯಲ್ಲಿ ಶ್ರುತದೇವಿಯನ್ನು ಪೂಜಾ ಸಹಿತವಾಗಿ ಸ್ಥಾಪಿಸಿ ಎರಡು ಕೈಗಳಿಂದಲೂ ಅಕ್ಷರ ಮಾಲಿಕೆಯನ್ನು ಬರೆದ. ಆ ಮೇಲೆ ಸಂಖ್ಯೆಗಳನ್ನೂ ಸಂಖ್ಯಾ ಸ್ಥಾನಗಳನ್ನೂ ಅದರಲ್ಲಿ ಮೂಡಿಸಿದ. ಅವರಿಗೆ ವ್ಯಾಕರಣ, ಛಂದಸ್ಸು, ಅಲಂಕಾರಗಳಿಂದೊಡಗೂಡಿದ ವಾಙ್ಮಯವನ್ನು ಉಪದೇಶಿಸಿದನು. ಹೀಗೆಯೇ ತನ್ನ ಪುತ್ರರಿಗೂ ಗಾಂಧರ್ವ ಶಾಸ್ತ್ರ, ಚಿತ್ರಕಲೆ, ಶಿಲ್ಪಕಲೆ, ವಾಸ್ತುವಿದ್ಯೆ ಮುಂತಾದುವನ್ನು ಕಲಿಸಿದನು. ಬಾಹುಬಲಿಯು ಕಾಮಶಾಸ್ತ್ರ, ಸ್ತ್ರೀಪುರುಷರ ಲಕ್ಷಣ, ಆಯುರ್ವೇದ, ಧನುರ್ವಿದ್ಯೆ, ಆನೆ ಕುದುರೆಗಳ ಲಕ್ಷಣ ಶಾಸ್ತ್ರ, ಮತ್ತು ರತ್ನಪರೀಕ್ಷಾ ಶಾಸ್ತ್ರಗಳನ್ನು ಸವಿಸ್ತಾರವಾಗಿ ಅಭ್ಯಸಿಸಿದನು.

ಭರತ ಬಾಹುಬಲಿಗಳ ಕುಲ ಮಹಿಮಾಶಾಲಿಯಾದದ್ದು. ಬಾಹುಬಲಿಯ ಅಜ್ಜನಾದ ನಾಭಿರಾಜ ಮನುವು ಹದಿನಾಲ್ಕು ಮಂದಿ ಕುಲಧರರಲ್ಲಿ ಕೊನೆಯವನು. ಆಗ ಭೋಗಭೂಮಿಯ ಸ್ಥಿತಿಯು ಭಾರತದಲ್ಲಿ ನಷ್ಟವಾಗಿ ಕರ್ಮಭೂಮಿಯ ಸ್ಥಿತಿಯು ಅವತರಿಸಿತ್ತು. ಮಹೌಷಧಿಗಳೂ ಕಲ್ಪವೃಕ್ಷಗಳೂ ತಮ್ಮ ಶಕ್ತಿಯನ್ನು ಕಳೆದು ಕೊಂಡುವು. ಭೂಮಿಯಲ್ಲಿ ತಾನಾಗಿ ಬೆಳೆಯುತಿದ್ದ ಆಹಾರದ ಬೆಳೆ ವಿರಳವಾಯಿತು. ಹೀಗೆ ಪ್ರಕೃತಿಯ ಸಸ್ಯ-ವೃಕ್ಷಗಳ ಶಕ್ತಿ ಕುಂದಲು ಜನರಲ್ಲಿ ರೋಗಬಾಧೆಗಳು ಹರಡಿದುವು. ಪ್ರಜೆಗಳು ಇಂಥ ಪರಿವರ್ತನೆಯಿಂದಾಗಿ ಕಳವಳಗೊಂಡು ನಾಭಿರಾಜನ ಬಳಿಗೆ ಹೋಗಲು ಅವನು ವೃಷಭನಿಂದಲೇ ಅವರಿಗೆ ಪರಿಹಾರ ದೊರೆಯುವುದೆಂದನು. ಅವರು ಹಾಗೆಯೇ ವೃಷಭನಿಗೆ ಮೊರೆ

ಮುಟ್ಟರು.

ಆಗ ಅವನು ತನ್ನೊಳಗೇ ವಿಚಾರಿಸಿದ: ಕಲ್ಪವೃಕ್ಷಗಳು ಈಗ ನಷ್ಟವಾಗಲು ಕರ್ಮಭೂಮಿಯ ಸ್ಥಿತಿಯ ಉದಯವೇ ಕಾರಣ. ವಿದೇಹ ಕ್ಷೇತ್ರದಲ್ಲಿ ಇಂಥ ಸ್ಥಿತಿಯನ್ನು ಎದುರಿಸಲು ವ್ಯವಸ್ಥೆಯಾಗಿದೆ. ಅಲ್ಲಿಯ ಪ್ರಜೆಗಳು ಅಸಿ, ಮಷಿ, ಕೃಷಿ, ವಾಣಿಜ್ಯ, ವಿದ್ಯಾ, ಶಿಲ್ಪಗಳೆಂಬ ಷಟ್ಕರ್ಮಗಳನ್ನು ಆಚರಿಸುತ್ತಿದ್ದಾರೆ. ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ವರ್ಣಾಶ್ರಮ ವ್ಯವಸ್ಥೆಯನ್ನು ಮಾಡಿಕೊಂಡಿದ್ದಾರಲ್ಲದೆ ಗ್ರಾಮ, ಗೃಹ ಮುಂತಾದ ರಚನೆಗಳನ್ನು ಮಾಡಿಕೊಂಡಿದ್ದಾರೆ. ಇಲ್ಲಿನ ಪ್ರಜೆಗಳೂ ಅವರನ್ನು ಅನುಸರಿಸುವುದೊಂದೇ ಈಗ ಜೀವನೋಪಾಯ.

ಹೀಗೆಂದು ಅವನು ಭಾವಿಸುತ್ತಿದ್ದಂತೆಯೇ ದೇವೇಂದ್ರನು ಅವನ ಮನೋಭಿಲಾಷೆಯನ್ನು ಕಾರ್ಯಗತ ಮಾಡತೊಡಗಿದನು. ಶುಭ ಮುಹೂರ್ತ ಶುಭ ಲಗ್ನದಲ್ಲಿ ಅಯೋಧ್ಯಾ ಪಟ್ಟಣದ ಮಧ್ಯಭಾಗದಲ್ಲಿಯೂ ಪೂರ್ವಾದಿ ದಿಕ್ಕುಗಳಲ್ಲೂ ಅವನು ಜಿನಾಲಯಗಳನ್ನು ನಿರ್ಮಿಸಿದನು. ಕೋಸಲಾದಿ ದೇಶಗಳನ್ನೂ ಅಯೋಧ್ಯಾದಿ ಪಟ್ಟಣಗಳನ್ನೂ ಉದ್ಯಾನ ಗ್ರಾಮ ಖೇಟಾದಿಗಳನ್ನೂ ವಿಂಗಡಿಸಿದನು. ಆಂಧ್ರ ಕರ್ಣಾಟ ಕೋಶಲ ಮೊದಲಾದ ರಾಜ್ಯಗಳನ್ನು ವಿಭಾಗಿಸಿ, ಅವುಗಳನ್ನು ನೀರಿನ ಪೂರೈಕೆಯ ಆಧಾರದ ಮೇರೆಗೆ ಗುಂಪುಗೂಡಿಸಿದನು. ಆಯಾ ದೇಶಗಳ ಸೀಮೆಗಳಲ್ಲಿ ದುರ್ಗಗಳ ರಚನೆಯಾಯಿತು. ದೇಶ ಮಧ್ಯದಲ್ಲಿ ರಾಜಧಾನಿಗಳೂ ದುರ್ಗಗಳ ಮಧ್ಯದಲ್ಲಿ ಗ್ರಾಮಗಳನ್ನೂ ಪುರಗಳನ್ನೂ ಖರ್ವಟಗಳನ್ನೂ ರಚಿಸಲಾಯಿತು. ಪುರಗಳ ನಿರ್ಮಾಣ ಮಾಡಿದ ದೇವೇಂದ್ರನಿಗೆ ಪುರಂದರನೆಂಬ ಹೆಸರಾಯಿತು. ಅಮೇಲೆ ವೃಷಭನು ಷಟ್ಕರ್ಮಗಳನ್ನು ಪ್ರಜೆಗಳಿಗೆ ಉಪದೇಶ ಮಾಡಿದ: ಸೈನಿಕರೇ ಮೊದಲಾದ ಖಡ್ಗಧಾರಿಗಳು ಅಸಿಕರ್ಮನಿರತರು, ಬರವಣಿಗೆ ವ್ಯವಸಾಯಿಗಳು ಮಷಿಕರ್ಮನಿರತರು; ಭೂಮಿಯ ವ್ಯವಸಾಯಿಗಳು ಕೃಷಿ ಕಾರ್ಮಿಕರು; ಶಾಸ್ತ್ರಾಭ್ಯಾಸದ ಮೂಲಕ ಜೀವಿಸುವವರು ವಿದ್ಯಾ ಕರ್ಮಿಗಳು ಮತ್ತು ವ್ಯಾಪಾರದ ಮೂಲಕ ಜೀವಿಸುವವರು ವೈಶ್ಯರು. ಹೀಗೆಯೇ ಮೂರು ವರ್ಣಾಶ್ರಮಗಳನ್ನು ವಿಂಗಡಿಸಿದನು; ಶಸ್ತ್ರಧಾರಿಗಳು ಕ್ಷತ್ರಿಯರು; ಕೃಷಿ, ವ್ಯಾಪಾರ ಮತ್ತು ಪಶುಪಾಲನೆಯಿಂದ ಜೀವಿಸುವವರು ವೈಶ್ಯರು. ಈ ಎರಡು ವರ್ಣದವರ ಸೇವೆ ಮಾಡಿ ಬದುಕುವವರು ಶೂದ್ರರು.

ವೃಷಭನು ಇಂಥ ವ್ಯವಸ್ಥೆಯನ್ನು ಮಾಡಿದುದರಿಂದ ಕೃತ ಯುಗವು ಆರಂಭವಾಯಿತು. ಅವನಿಗೆ ಪ್ರಜಾಪತಿ ಎಂದು ಹೆಸರಾಯಿತು. ದೇವತೆಗಳು ಅವನಿಗೆ ಅಧಿರಾಜ ಪದವಿಯನ್ನಿತ್ತರು. ಇಂಥ ಸಂಭ್ರಮವು ನಡೆಯುತ್ತಿದ್ದಾಗ ನೀಲಾಂಜನೆ ಎಂಬ ನರ್ತಕಿಯೊಬ್ಬಳು ವೃಷಭನ ಆಸ್ಥಾನ ಮಂಟಪದಲ್ಲಿ ನರ್ತಿಸಿದಳು. ಆಕೆ ಭಾವ ಲಯಗಳಲ್ಲಿ ಮಗ್ನಳಾಗಿ ನರ್ತಿಸುತ್ತಿದ್ದಂತೆ ಅವಳ ಆಯುಷ್ಯ ನೀಗಿ ಅದೃಶ್ಯಳಾದಳು. ದೇವೇಂದ್ರನೇನೋ ರಸಭಂಗವಾಗದಂತೆ ಬೇರೊಬ್ಬ ನರ್ತಕಿಯನ್ನು ತಂದು ನರ್ತನವನ್ನು ಮುಂಬರಿಸಿದರೂ ವೃಷಭ ರಾಜನಿಗೆ ಈ ದೃಶ್ಯವು ಸಂಸಾರದ ಕ್ಷಣಭಂಗುರತೆಯ ಜ್ಞಾನವನ್ನಿತ್ತಿತು. ಅವನು ಒಮ್ಮೆಲೇ ವೈರಾಗ್ಯ ಭಾವನೆಯನ್ನು ತಾಳಿದನು.

ಭರತಕ್ಷೇತ್ರಕ್ಕೆ ಭರತನನ್ನು ರಾಜನನ್ನಾಗಿ ಮಾಡಿ, ಬಾಹುಬಲಿಯನ್ನು ಯುವರಾಜನನ್ನಾಗಿ ನೇಮಿಸಿದನು. ವೃಷಭನ ಪರಿನಿಷ್ಕ್ರಮಣ ಕಲ್ಯಾಣದ ಸಮಾರಂಭವೂ ಭರತ ಬಾಹುಬಲಿಗಳ ಪಟ್ಟಾಭಿಷೇಕವೂ ಹೀಗೆ ಒಟ್ಟಾಗಿ ಸಂಭ್ರಮದಿಂದ ನಡೆದವು. ವೃಷಭನು ಅಮೇಲೆ ಸೇವಕ, ಗೋವು ಮುಂತಾದ ಸಚೇತನದ್ರವ್ಯವನ್ನೂ ಮತ್ತು ರತ್ನಗಳಂಥ ಅಚೇತನ ದ್ರವ್ಯಗಳನ್ನೂ ಪರಿತ್ಯಜಿಸಿ ತಲೆಯಿಂದ ಐದು ಮುಷ್ಟಿ ಕೂದಲುಗಳನ್ನು ಕಿತ್ತು ದಿಗಂಬರನಾಗಿ ಜಿನದೀಕ್ಷೆಯನ್ನು ಪಡೆದನು.

ಬಾಹುಬಲಿಯು ರಾಜ್ಯಾಭಿಷೇಕದ ಬಳಿಕ ಪೌದನಾಪುರದಲ್ಲಿ ರಾಜ್ಯಭಾರ ಮಾಡತೊಡಗಿದನು. ಅವನ ರಾಣಿ ಇಚ್ಛಾಮಹಾದೇವಿ. ಪ್ರಣಯಚಂದ್ರಮನೆಂಬವನು ಅವನ ಮಂತ್ರಿಯಾಗಿದ್ದ. ವಸಂತಕನೆಂಬವನು ದಳಪತಿ, ಮುಕುಂದನೆಂಬುದು ಅವನ ಪಟ್ಟದಾನೆಯ ಹೆಸರು.

ಇತ್ತ ಭರತನ ಆಯುಧಶಾಲೆಯಲ್ಲಿ ಆಗ ಚಕ್ರೋದ್ಭವವಾಯಿತು. ಅವನಿಗೆ ಪುತ್ರೋತ್ಪತ್ತಿಯೂ ಆಯಿತು. ಭರತನ ಆಯುಧ ಶಾಲೆ

ಯಲ್ಲಿ ಉದ್ಭವಿಸಿದ ಚಕ್ರರತ್ನದೊಡನೆ ಇತರ ಅನೇಕ ಜೀವಾಜೀವರತ್ನಗಳೂ ಸೃಷ್ಟಿಯಾಗಿದ್ದವು. ಇದರ ಸಂಕೇತ ಸ್ಪಷ್ಟವಾಗಿತ್ತು. ಭರತನು ಚಕ್ರವರ್ತಿಯಾಗಲಿದ್ದನು. ಮುಂದೆ ಶರತ್ಕಾಲವು ಬಂತು. ಅದು ದಿಗ್ವಿಜಯವನ್ನು ಆರಂಭಿಸುವ ಋತು. ತನ್ನ ಚಕ್ರವರ್ತಿ ಪದಸೂಚಕವಾಗಿ ದಿಗ್ವಿಜಯಕ್ಕೆ ಹೊರಡಲು ಸೇನೆ ಸಿದ್ಧವಾಗಬೇಕೆಂದು ಪ್ರಸ್ಥಾನ ಭೇರಿಯನ್ನು ಭರತನು ಹೊಡೆಸಿದನು. ಶುಭ ಮುಹೂರ್ತದಲ್ಲಿ ಸೈನ್ಯ ಸಮೇತನಾಗಿ ರಾಜಧಾನಿಯಿಂದ ಹೊರಟು ಅಂದಿನಿಂದ ಅವನು ಶಿಬಿರವಾಸವನ್ನು ಆರಂಭಿಸಿದನು. ವಿಜಯೇಂದ್ರವೆಂಬುದು ಅವನ ಆನೆಯಾಗಿತ್ತು. ಅಲ್ಲಲ್ಲಿ ರಾಜರು ಅವನಿಗೆ ಕಪ್ಪಕಾಣಿಕೆಗಳನ್ನಿತ್ತು ಅವನ ಅಧಿಪತ್ಯಕ್ಕೆ ತಲೆಬಾಗಿದರು. ಗಂಗಾದ್ವಾರದಲ್ಲಿದ್ದ ಸಮುದ್ರ ದಂಡೆಯ ಮೇಲೆ ಮೂರು ರಾತ್ರಿಗಳನ್ನು ಕಳೆದು ಮುಂದೆ ಮಾಗಧಾಮರರನ್ನು ಜಯಿಸಲು ಸಮುದ್ರದ ಮೇಲೆ ರಥದಲ್ಲಿ ಹನ್ನೆರಡು ಯೋಜನ ಮುಂದುವರಿದನು. ಆಗ ಅಲ್ಲಿ ರಥವು ಅಚಲವಾಯಿತು. ಅಲ್ಲಿಂದಲೇ ಅವನು ಮಾಗಧಾಮರನಿದ್ದಲ್ಲಿಗೆ ಒಂದು ಬಾಣವನ್ನು ಹೊಡೆಯಲು ಅದರ ರಭಸದಿಂದ ಭೂಮಿ ಕಂಪಿಸಿದಂತಾಯಿತು. ಮಾಗಧನು ಭರತನಿಗೆ ಶರಣಾಗತನಾಗಿ ಕಪ್ಪಕಾಣಿಕೆಗಳನ್ನಿತ್ತನು.

ಅಲ್ಲಿಂದ ಭರತ ಸೈನ್ಯದೊಡನೆ ದಕ್ಷಿಣಾಭಿಮುಖವಾಗಿ ಮುಂಬರಿದನು. ಸಮುದ್ರ ಮಧ್ಯದಲ್ಲಿದ್ದ ವರತನುವನ್ನೂ ಪ್ರಭಾಸಾಮರನೆಂಬವನನ್ನೂ ಗೆದ್ದನು. ಮುಂದೆ ಸಿಂಧೂ ತೀರಕ್ಕೆ ಬರುವಾಗ ವಸಂತಋತು ಆರಂಭವಾಗಿತ್ತು. ಅಲ್ಲಿ ವಿಜಯಾರ್ಧ ಪರ್ವತದ ಕೆಳಗೆ ಅವನು ಬೀಡು ಬಿಟ್ಟನು. ಅಲ್ಲಿ ವಿಜಯಾರ್ಧ ಕುಮಾರನು ಅವನಿಗೆ ಶರಣಾದನು. ಕುರುರಾಜಾದಿಗಳು ಅಲ್ಲಿಗೆ ಬಂದು ಉತ್ತರಾರ್ಧವನ್ನು ಭರತನು ಸುಲಭವಾಗಿ ಜಯಿಸಲು ಸಾಧ್ಯವಿದೆಯೆಂದು ಸಲಹೆ ನೀಡಿದರು. ಕೃತಮಾಳನೆಂಬ ವ್ಯಂತರನು ಆಗ ಬಂದು ವಿಜಯಾರ್ಧ ಗುಹಾದ್ವಾರವನ್ನು ಹೇಗೆ ಪ್ರವೇಶಿಸಬೇಕೆಂಬ ರಹಸ್ಯವನ್ನು ಹೇಳಿದನು. ಈ ಉಪಾಯವನ್ನು ತನ್ನ ಸೇನಾನಾಯಕನಿಗೆ ಭರತನು ತಿಳಿಸಿದನು. ಅವನು ತನ್ನ ದಂಡರತ್ನದೊಡನೆ ಗುಹಾದ್ವಾರದ ಬಳಿಗೆ ಹೋದನು. ಅಲ್ಲಿ ತಮಿಸ್ರ ಗುಹೆಯ ಕವಾಟವನ್ನು ಒಡೆದು ಮ್ಲೇಚ್ಛ ಖಂಡದ ರಾಜರನೇಕರನ್ನು ಜಯಿಸಿ ಕೆಲವರನ್ನು ಸೆರೆ ಹಿಡಿದು ತಂದು ಭರತ ಚಕ್ರವರ್ತಿಯ ಮುಂದೆ ನಿಲ್ಲಿಸಿದನು. ಭರತನು ಅವರನ್ನು ಸನ್ಮಾನಿಸಿ, ಭೇರಿಯನ್ನು ಹೊಡೆಯಿಸುತ್ತ ತಮಿಸ್ರ ಗುಹೆಯನ್ನು ಪ್ರವೇಶಿಸಿದನು. ಅಲ್ಲಿ ಬೆಳಕನ್ನುಂಟುಮಾಡಲು ಕಾಕಿಣೀರತ್ನದಿಂದ ಸೂರ್ಯ ಚಂದ್ರರ ರೂಪವನ್ನು ಗುಹೆಯ ಗೋಡೆಯಲ್ಲಿ ಬರೆಯಿಸಿ ಉತ್ತರ ದ್ವಾರದಿಂದ ಹೊರಬಿದ್ದನು. ಪಶ್ಚಿಮ ಖಂಡವನ್ನೂ ಮಧ್ಯಮ ಖಂಡವನ್ನೂ ಅವನು ಜಯಿಸಿ ಸಿಂಧು ಪ್ರಪಾತಕ್ಕೆ ಬರಲು ಸಿಂಧು ದೇವಿಯು ಅವನಿಗೆ ಅಭಿಷೇಕ ಮಾಡಿದಳು. ಮುಂದೆ ಹಿಮವತ್ಕುಮಾರನು ಶರಣಾದ. ವೃಷಭಾದ್ರಿಯಲ್ಲಿ ಭರತನು ತನ್ನ ಪ್ರಶಸ್ತಿಯನ್ನು ದಂಡರತ್ನದಲ್ಲಿ ಬರೆಸಿ ಗಂಗಾಕೂಟದ ಮೂಲಕ ಪುನಃ ವಿಜಯಾರ್ಧ ಪರ್ವತವನ್ನು ದಾಟಿದ.

ಹೀಗೆ ಅವನ ದಿಗ್ವಿಜಯಕ್ಕೆ ಅರುವತ್ತು ಸಾವಿರ ವರ್ಷಗಳು ಬೇಕಾದುವು. ಅವನು ಅಯೋಧ್ಯೆಗೆ ಹಿಂದಿರುಗಿ ಪುರದ್ವಾರವನ್ನು ಪ್ರವೇಶಿಸುವಾಗ ಅವನ ಚಕ್ರರತ್ನವು ಗಟಕ್ಕನೆ ನಿಂತುಬಿಟ್ಟಿತು. ಇದನ್ನು ಕಂಡು ಭರತನಿಗೆ ಅತ್ಯಾಶ್ಚರ್ಯವಾಯಿತು. ಷಟ್ಖಂಡಗಳನ್ನು ತಾನು ಇಷ್ಟು ಕಾಲ ಜಯಿಸಿ ಬಂದೆ. ಸಾವಿರಾರು ರಾಜರು ತನಗೆ ಶರಣಾದರು. ತನ್ನನ್ನು ಎದುರಿಸಿ ತನ್ನೊಡನೆ ಕಾಳಗ ಮಾಡಿದ ರಾಜರ ಸಂಖ್ಯೆಯೇ ಕಡಿಮೆಯಾಗಿದ್ದಾಗ ತನ್ನನ್ನು ಇನ್ನೂ ಪ್ರತಿಭಟಿಸುವ ಶಕ್ತಿಯುಳ್ಳವರು ಭೂಮಂಡಲದಲ್ಲಿ ಯಾರಿರಬಹುದು ಎಂದು ಅವನಿಗೆ ಸೋಜಿಗವಾಯಿತು. ಅವನು ಪ್ರಧಾನಿಯನ್ನು ಕೇಳಿದನು.

"ತಮ್ಮ ಸೋದರರು ಇನ್ನೂ ತಮಗೆ ಶರಣಾಗದ್ದರಿಂದ ಚಕ್ರ ನಿಂತಿರಬೇಕು" ಎಂದು ಪ್ರಧಾನಿ ಉತ್ತರಿಸಿದನು.

ಕೂಡಲೆ ಭರತ ಚಕ್ರವರ್ತಿಯು ಅಲ್ಲಿ ಬೀಡು ಬಿಟ್ಟು ತನ್ನ ಸೋದರರಿಗೆಲ್ಲ ದಿಗ್ವಿಜಯದ ಪತ್ರವನ್ನು ಕಳಿಸಿದ. ಸೋದರರಲ್ಲಿ ಬಾಹುಬಲಿಯನ್ನು ಹೊರತಾಗಿ ಎಲ್ಲರೂ ಅವನಿಗೆ ಪ್ರತ್ಯುತ್ತರಿಸದೆ

ತಮ್ಮ ತಂದೆ ಹಿಡಿದ ದಾರಿಯನ್ನೇ ಹಿಡಿದು ದೀಕ್ಷೆಯನ್ನು ಕೈಗೊಂಡು ವಿರಕ್ತರಾಗಿ ಹೋದರು.

ಇನ್ನು ಉಳಿದವನು ಬಾಹುಬಲಿಯೊಬ್ಬನೇ. ದಕ್ಷಿಣಾಂಕನೆಂಬ ಮಂತ್ರಿಯನ್ನು ಕರೆದು ಅವನನ್ನು ಶರಣಾಗಬೇಕೆಂಬ ಓಲೆಯೊಡನೆ ಪೌದನಾಪುರಕ್ಕೆ ಕಳಿಸಿದನು.

ದಕ್ಷಿಣಾಂಕನು ಪೌದನಾಪುರದ ಸೊಬಗನ್ನು ನೋಡಿ ಬೆರಗಾದನು. ಅಲ್ಲಿ ಕನ್ನಡಿಗಳೇನು, ಮಣಿಮಾಲೆಗಳೇನು, ಪಟ್ಟೆ ಜೀನಾಂಬರಗಳೇನು ! ಪನ್ನೀರಿನ ತಂಬಿಗೆಗಳು, ಕರ್ಪೂರದ ರಾಶಿ, ಕಸ್ತೂರಿ–ಪುನುಗುಗಳು ಸುಗಂಧವನ್ನು ಪಸರಿಸುತಿದ್ದುವು. ದ್ರಾಕ್ಷಿ, ಖರ್ಜೂರ ಮುಂತಾದ ಫಲಗಳ ಅಂಗಡಿಗಳೇನು, ನವಿಲು, ಕೋಗಿಲೆ, ಪಾರಿವಾಳಗಳ ಬೆಡಗುಬಿನ್ನಾಣಗಳೇನು! ಸಂಪಗೆ, ಮಲ್ಲಿಗೆ. ಸುರಗಿ ಮುಂತಾದ ಪುಷ್ಪಗಳಿಂದ ನಗರವೇ ತುಂಬಿಹೋಗಿತ್ತು. ಸುಗಂಧಗಳನ್ನು ಉಪಯೋಗಿಸುವ ರಸಿಕ ಜನರೇ ಅಲ್ಲಿ ಎಲ್ಲೆಲ್ಲೂ. ಎಲ್ಲರೂ ಭೋಗಾಸಕ್ತರು, ಶೃಂಗಾರಪ್ರಿಯರು. ದಕ್ಷಿಣಾಂಕನು ಹೇಗೋ ಬಾಹುಬಲಿಯ ಅರಮನೆಯನ್ನು ತಲುಪಿ, ತನ್ನ ಪರಿವಾರದವರನ್ನು ಹಿಂದೆ ಬಿಟ್ಟು ತಾನೊಬ್ಬನೇ ಮುತ್ತಿನ ದ್ವಾರದ ಒಳಗೆ ಹೋಗಿ ತನ್ನ ಬರವನ್ನು ಆಳೊಬ್ಬನಿಗೆ ತಿಳಿಸಿದನು.

ಬಾಹುಬಲಿಯ ಆಸ್ಥಾನದಲ್ಲಾದರೊ ಎಲ್ಲೆಲ್ಲೂ ಕಣ್ಣು ಕೋರೈಸುವ ಸುಂದರಿಯರೇ ತೋರಿ ಬರುತಿದ್ದರು. ಮುಖವೀಣೆ, ಜಂತ್ರವಾದ್ಯಗಳಿಂದ ಮಧುರವಾದ ಸ್ವರಗಳು ಕೇಳುತಿದ್ದುವು. ಚಿನ್ನದ ಬಾಗಿಲುಗಳೂ ಮಾಣಿಕ್ಯದ ಕಂಭಗಳೂ ಹೊಳೆಯುತಿದ್ದುವು. ದಕ್ಷಿಣಾಂಕನನ್ನು ಒಳಗೆ ಸೇವಕನು ಕರೆದುಕೊಂಡು ಹೋಗುವಾಗ ಗಿಣಿಗಳು ಅವನನ್ನು ನೋಡಿ :

"ಭರತೇಶನಲ್ಲಿದ್ದವ ಇಲ್ಲಿಗೇಕೆ ಬಂದ?" ಎಂದು ವ್ಯಂಗ್ಯವಾಗಿ ಉಲಿದುವು

ಮುಂದೆ ನಾರಿಯರ ಮಧ್ಯೆ ಓಲಗದಲ್ಲಿದ್ದ ಬಾಹುಬಲಿಯನ್ನು ದಕ್ಷಿಣಾಂಕ ಕಂಡನು. ಅವನ ಎಂಟು ಸಾವಿರ ರಾಣಿಯರು ತೆರೆಯೊಳಗಿದ್ದರು. ಮಂತ್ರಿಗಳು ಸಿಂಹಾಸನದ ಮುಂದಿದ್ದರು. ಸಖಿಯರು ಚಾಮರದಿಂದ ಗಾಳಿ ಬೀಸುತ್ತಿದ್ದರು. ಕೆಲವರು ಅವನ ಪಾದಗಳನ್ನೊತ್ತುತಿದ್ದರು. ದಕ್ಷಿಣಾಂಕನು ಅವನ ಒಳಿಗೆ ಹೋಗಿ ಕಾಣಿಕೆಯನ್ನಿತ್ತು ಸಾಷ್ಟಾಂಗವೆರಗಿದನು. ಬಾಹುಬಲಿ ಅವನನ್ನು ಸತ್ಕರಿಸಿ, ಬಳಿಯಲ್ಲೇ ಕುಳಿತುಕೊಳ್ಳಲು ಅಪ್ಪಣೆ ಮಾಡಿದ.

"ಏನಯ್ಯಾ, ನಿನ್ನ ಒಡೆಯನನ್ನು ಎಲ್ಲೆಲ್ಲಿ ತಿರುಗಾಡಿಸಿಕೊಂಡು ಬಂದೆ? " ಎಂದು ಬಾಹುಬಲಿ ನಕ್ಕನು. "ನೀನೂ, ನಾಗರ ಮುಂತಾದ ಪ್ರಚಂಡ ಸೇನಾನಿಗಳೂ ಅವನೊಡನಿದ್ದು ಏನು ಮಾಡಿದಿರಿ? ಚಿಂತೆಯಿಲ್ಲ. ನೀವು ನಿಮ್ಮ ದೊರೆಯನ್ನು ಹೊಗಳುತ್ತ ಹೊಗಳುತ್ತ ಅವನನ್ನು ಸಾಕಷ್ಟು ಪರಿಭ್ರಮಣ ಮಾಡಿಸಿದಿರಪ್ಪ ! "

ಅದಕ್ಕೆ ದಕ್ಷಿಣನು ವಿನಯದಿಂದ ಹೀಗೆಂದ : "ನಿಮ್ಮಣ್ಣನೇನು ಅಂಥ ಉಬ್ಬಾಳಲ್ಲ. ಅವರು ಪರರ ಹೊಗಳಿಕೆಗೆ ಕಿವಿಗೊಡುವವರಲ್ಲ."

"ಅಲ್ಲಪ್ಪಾ, ಆ ಬಡವರಿಂದ ಕಂದುರೆ ಆನೆ ಆಭರಣಗಳನ್ನೆಲ್ಲ ನೀವು ಸುಲಿದುಕೊಂಡು ಬಂದಿರಲ್ಲ ? "

"ಯಾರು ಬಡವರು ಸ್ವಾಮಿ? ವ್ಯಂತರರೇ, ಖೇಚರರೇ, ಮ್ಲೇಚ್ಛರೇ–ಇವರೆಲ್ಲ ಅತಿಬಲರಲ್ಲವೆ? ತಮ್ಮ ಅಣ್ಣನ ಭೇರಿಯ ಶಬ್ದ ಕೇಳಿದೊಡನೆ ಕಪ್ಪಕಾಣಿಕೆಗಳನ್ನು ತಂದು ಮಣಿದರು. ತಾನು ಇಚ್ಛಿಸಿದುದನ್ನು ಪಡೆಯಬಲ್ಲ ಚಿಂತಾಮಣಿಯನ್ನು ಪಡೆದ ತಮ್ಮ ಅಣ್ಣನಿಗೆ ಇಂಥ ಕ್ಷುಲ್ಲಕ ವಸ್ತುಗಳ ಬಯಕೆಯಿಂದೆಯೇ? ಅವರು ಸಮಸ್ತರಿಗೂ ಸುಖವಾಗಲೆಂದು ಕೊಬ್ಬಿದ ಅರಸರನ್ನು ಶಿಕ್ಷಿಸಲು ಹೋಗಿದ್ದರು. ಅವರೇನಾದರೂ ಸುಲಿಗೆ ಮಾಡಲಿಲ್ಲ. ಯಾರನ್ನೂ ಅಪಮಾನ ಮಾಡಲಿಲ್ಲ. ಅರಸರನ್ನು ನೀವು–ತಾವು ಎಂದು ಆದರಪೂರ್ವಕ ಉಪಚರಿಸಿದರು. ಅವರ ದಿಗ್ವಿಜಯದಿಂದಾಗಿ ಹಲವು ಅರಸರಿಗೆ ಜ್ಞಾನೋದಯವಾಯಿತು. ಹಲವರು ವ್ರತಿಕರಾದರು. ಹೀಗೆ ಲೋಕಕ್ಕೇ ಇದರಿಂದ ಸುಖ ಬಂದೊದಗಿದೆ."

"ಇದು ಮಹಾ ಸಾಮರ್ಥ್ಯವಪ್ಪ!" ಎಂದು ಬಾಹುಬಲಿ ವ್ಯಂಗ್ಯವಾಗಿ ನುಡಿದ. "ತನ್ನನ್ನು ಕಂಡವರೆಲ್ಲ ಚತುರರಾದರು, ಸುಶೀಲರಾದರು ಎಂದು ತಿಳಿದುಕೊಳ್ಳುವುದೂ ಉಂಟೆ? "

ಆಗ ದಕ್ಷಿಣಾಂಕನು ದಿಗ್ವಿಜಯದ ಸಮಯದಲ್ಲಿ

ನಡೆದುದೆಲ್ಲವನ್ನೂ ವಿಸ್ತಾರವಾಗಿ ವರ್ಣಿಸಿದ. ಕೊನೆಗೆ,

"ನಿಮ್ಮಿಬ್ಬರನ್ನೂ ಲೋಕವೇ ಕೊಂಡಾಡುತ್ತಿದೆ. ತಾವು ಅತಿ ದಕ್ಷರು, ತಮ್ಮ ಅಣ್ಣ ಅತಿ ಪರಾಕ್ರಮಿ ಎಂದು ಸೂರ್ಯ ಚಂದ್ರರ ಲೋಕಗಳಲ್ಲೂ ನುಡಿಯುತ್ತಿದ್ದಾರೆ. ತಮಗೆ ಭರತ ಚಕ್ರಿಯು ಮಂತ್ರಿ ಮಿತ್ರರು ನನ್ನ ಮೂಲಕ ಈ ಕಾಣಿಕೆಗಳನ್ನು ಕಳಿಸಿದ್ದಾರೆ. ಇದು ತಮ್ಮಣ್ಣನ ದೊಡ್ಡ ಗುಣವಲ್ಲವೆ?" ಎಂದ.

ಅಂದು ದಕ್ಷಿಣಾಂಕ ಅಲ್ಲೇ ಬಾಹುಬಲಿಯ ಅತಿಥಿಯಾಗಿ ಉಳಿದ. ಮರುದಿನ ಬಾಹುಬಲಿಯು ಅವನು ಏಕಾಗಿ ಬಂದುದೆಂದು ಪ್ರಶ್ನಿಸಿದ.

"ತಮ್ಮಣ್ಣನು ದಿಗ್ವಿಜಯದ ಬಳಿಕ ತಂದೆ ತಾಯಂದಿರ ದರ್ಶನ ಮಾಡಿದರು. ಈಗ ತಮ್ಮನ್ನೂ ತಮ್ಮ ಮಾತೆಯನ್ನೂ ಕಾಣುವ ಹಂಬಲವನ್ನು ಅವರು ವ್ಯಕ್ತಪಡಿಸಿದ್ದಾರೆ. ಅವರು ಅನತಿದೂರದಲ್ಲೇ ಇದ್ದಾರೆ. ತಾವು ಅವರನ್ನೊಮ್ಮೆ ಕಾಣಬೇಕು."

ಬಾಹುಬಲಿ ಇದರ ಮಥಿತಾರ್ಥವನ್ನರಿತ: "ಓಹ್! ಎಲ್ಲ ಗೊತ್ತಿದೆ ದಕ್ಷಿಣಾಂಕಾ. ಅವನು ನಮ್ಮ ಅಣ್ಣನಲ್ಲ. ಅವನು ಒಡೆಯ. ಈಗ ದಂಡೆತ್ತಿ ಬಂದು ನನ್ನನ್ನು ಕಾಣಬೇಕೆಂದಿದ್ದಾನೆ. ಈ ಠಕ್ಕಿನ ವಿನಯ ನನಗೆ ಬೇಡಯ್ಯಾ. ಭರತನ ಚಕ್ರ ಈಗ ಅಚಲವಾಗಿ ನಿಂತಿದೆ. ಇದಕ್ಕೆ ನನ್ನ ಪರಾಕ್ರಮವೇ ಕಾರಣ. ಇದಕ್ಕಾಗಿ ನಿನ್ನನ್ನು ಅವನು ನನ್ನ ಬಳಿಗೆ ಕಳಿಸಿದ್ದಾನೆ. ಇದ್ದುದನ್ನು ನುಡಿಯಲು ನೀನು ಅಂಜಿ ಬಣ್ಣದ ಮಾತಿನಲ್ಲಿ ನನ್ನನ್ನು ಮರುಳುಗೊಳಿಸಬೇಡ."

ದಕ್ಷಿಣಾಂಕ ನಿರುತ್ತರನಾದ.

"ಏನಯ್ಯಾ, ಭೂತ ಪ್ರೇತಗಳು ಅಂಜಿ ಚಕ್ರವರ್ತಿಗೆ ಎರಗಿದರೆಂದು ನಾನೂ ಎರಗುವೆನೆ? ನನಗೆ ಅವನದೇನು ಹಂಗು? ಅವನಿಗೆ ನಮ್ಮಪ್ಪ ದೊಡ್ಡ ರಾಜ್ಯವನ್ನಿತ್ತಿದ್ದರೂ ನನಗೂ ಉಂಬಳಿಯಾಗಿ ಈ ಚಿಕ್ಕ ರಾಜ್ಯವನ್ನಿತ್ತಿದ್ದಾರೆ. ಇದನ್ನು ನಮ್ಮಣ್ಣ ನೋಡಿ ಸಹಿಸಲಾರನಾದನೆ?"

"ಹಾಗೆನ್ನಬೇಡಿ ಸ್ವಾಮಿ" ಎಂದ ದಕ್ಷಿಣಾಂಕ "ತಮ್ಮ ಚಕ್ರಾಧಿಪತ್ಯದಿಂದ ಅರ್ಧಾಂಶವನ್ನು ತಮಗೆ ಬಿಟ್ಟುಬಿಡುವೆನೆನ್ನುತ್ತಾರೆ ತಮ್ಮ ಅಣ್ಣ."

"ಸಾಕಯ್ಯ, ನಾನೇನಾದರೂ ರಾಜ್ಯದ ಆಸೆಯಿಂದ ನಮ್ಮಣ್ಣನ ಕಾಲಿಗೆ ಬೀಳುವೆನೆಂದು ಭಾವಿಸಿದೆಯಾ? ನನ್ನಮ್ಮ ನನ್ನಪ್ಪನ ಊಳಿಗದ ಹೆಣ್ಣಲ್ಲ. ನನ್ನಣ್ಣ ನನ್ನನ್ನು ಊಳಿಗದ ಆಳಿನಂತೆ ಬರಹೇಳಲಾರ. ನೀನು ನಿನ್ನೊಡೆಯನನ್ನು ಹೊಗಳಿ ಹೊಗಳಿ ನನ್ನನ್ನು ಸುಮ್ಮನೆ ಕೆಣಕಬೇಡ."

ದಕ್ಷಿಣಾಂಕ ಆಗ ಮರುಗಿ ಮರುಗಿ "ಅಯ್ಯೋ, ನಾನು ತಮ್ಮ ಅಮೃತದಂಥ ಮನಸ್ಸಿನಲ್ಲಿ ಕೋಪವನ್ನುಂಟುಮಾಡಿದೆನೆ? ಹಾಲು ಬರುವಲ್ಲಿ ನೆತ್ತರನ್ನು ಬರಿಸಿದೆನೆ? ನಾನು ಮಹಾಪಾಪಿ" ಎಂದು ವಿಲಪಿಸಿದ.

ಹೀಗೆಂದು ಅವನು ಎದ್ದು ಹೋಗುವಾಗ ಬಾಹುಬಲಿಯ ಮಂತ್ರಿಯೊಬ್ಬನು ಹಿಂದಕ್ಕೆ ಕರೆದ.

"ನೀವಿಬ್ಬರೂ ವೃಷಭ ತೀರ್ಥಂಕರರ ಮಕ್ಕಳು. ನೀವೇ ವಿರಸಗೊಂಡರೆ ಲೋಕದಲ್ಲಿರುವ ಇತರರ ಪಾಡೇನು? ಗುರುವಿಗೆ ಶಿಷ್ಯನೆರಗಬೇಕು. ಗಂಡನಿಗೆ ಹೆಂಡತಿ ಮಣಿಯಬೇಕು. ಅಣ್ಣನಿಗೆ ತಮ್ಮ ತಲೆಬಾಗಬೇಕು. ಇಲ್ಲವಾದರೆ ಲೋಕವು ಹೇಗೆ ನಡೆದೀತು?"

ಇದನ್ನು ಕೇಳಿದೊಡನೆ ಬಾಹುಬಲಿ ಕಿಡಿಕಿಡಿಯಾದ. ಅವನ ಮಂತ್ರಿಗಳಲ್ಲಿ ಹೆಚ್ಚಿನವರು ದಕ್ಷಿಣಾಂಕನ ನುಡಿಯನ್ನು ಅನುಮೋದಿಸಿದುದನ್ನು ಕಂಡಂತೂ ಅವನ ಕೋಪ ಇನ್ನೂ ಹೆಚ್ಚಿತು. ಆದರೆ ಮಂತ್ರಿ ವಸಂತನು ಮಾತ್ರ ಬಾಹುಬಲಿಯು ಮಣಿಯಬಾರದೆಂದ. ದಕ್ಷಿಣಾಂಕನು ಖಿನ್ನವದನನಾಗಿ ಅಲ್ಲಿಂದ ಹಿಂತಿರುಗಿದ.

ಭರತ ಚಕ್ರವರ್ತಿಯು ದಕ್ಷಿಣಾಂಕನನ್ನು ಕುತೂಹಲದಿಂದ ಬರಮಾಡಿಕೊಂಡನು.

"ನಾನೇನೋ ವಿನಯ ತಂತ್ರದ ಮೂಲಕ ಬಾಹುಬಲಿ ಸ್ವಾಮಿಯನ್ನು ಒಲಿಸಲು ಯತ್ನಿಸಿದೆ. ಆದರೆ ನನ್ನ ಪಾಪದ ಫಲದಿಂದಲೋ ಏನೋ ಅವರು ಶರಣಾಗಲು ಕೇಳಲಿಲ್ಲ. ಅದರ ಬದಲು ಅವರು ಯುದ್ಧಸನ್ನದ್ಧರಾಗಿದ್ದಾರೆ."

ಈ ಮಾತುಗಳನ್ನು ಭರತೇಶನು ಕೇಳಿ "ಸರಿ, ಇವನ ಭುಜಬಲ ಪರಾಕ್ರಮವನ್ನು ನೋಡಿಯೇ ಬಿಡುತ್ತೇನೆ. ಸೈನ್ಯ ಸಿದ್ಧವಾಗಲಿ," ಎಂದ.

ಹೀಗೆ ಸೈನ್ಯ ಸಮೇತನಾಗಿ ಪೌದನಾಪುರಕ್ಕೆ

ಭರತ ಚಕ್ರವರ್ತಿಯು ದಂಡೆತ್ತಿಕೊಂಡು ಹೋದ. ಬಾಹುಬಲಿಯೂ ಆಗ ಸಮರ ಸಿದ್ಧತೆ ನಡೆಸಿದ್ದ. ಈ ಯುದ್ಧದಲ್ಲಿ ತಾನೇ ಗೆಲ್ಲುವೆನೆಂಬ ವಿಶ್ವಾಸ ಅವನಲ್ಲಿ ಮೂಡಿತ್ತು.

ಹೀಗೆ ಸೈನ್ಯಗಳು ಒಂದನ್ನೊಂದು ಎದುರಾದಾಗ ಉಭಯ ಪಕ್ಷದ ಮಂತ್ರಿಗಳಿಗೂ ವಿವೇಕದ ಒಂದು ಉಪಾಯ ಹೊಳೆಯಿತು : ಈ ಯುದ್ಧವು ಚತುರಂಗ ಬಲಗಳೊಡನೆ ನಡೆದರೆ ಪ್ರಳಯದಂಥ ವಿನಾಶ ಸಂಭವಿಸಬಹುದು. ಆದ್ದರಿಂದ ಇವರಿಬ್ಬರೊಳಗೆ ಧರ್ಮಯುದ್ಧ ನಡೆಯುವಂತೆ ಮಾಡುವುದೇ ಲೇಸೆಂದು ಅವರು ಭಾವಿಸಿ, ಭರತ ಚಕ್ರವರ್ತಿಗೆ ತಮ್ಮ ಇಂಗಿತವನ್ನು ಅರುಹಿದರು. ಅವನು ಅದಕ್ಕೆ ಒಪ್ಪಲು ಅವರು ಬಾಹುಬಲಿಯನ್ನೂ ಅದಕ್ಕೆ ಒಡಂಬಡಿಸಿದರು.

ಅಣ್ಣ ತಮ್ಮಂದಿರಲ್ಲಿ ಶಕ್ತಿಪರೀಕ್ಷೆ ಪ್ರಾರಂಭವಾಯಿತು. ಅದೊಂದು ವಿಶಿಷ್ಟ ಯುದ್ಧವೇ ಆಗಿತ್ತು. ಹಿಂಸೆ ಇರಲಿಲ್ಲ. ಕೇವಲ ಪರಸ್ಪರರ ಧೃತಿಶಕ್ತಿಯನ್ನು ಒರೆಗೆ ಹಚ್ಚುವುದಾಯಿತು. ಎರಡೂ ಸೇನೆಗಳು ಎವೆಯಿಕ್ಕದೆ ನೋಡುತ್ತಿದ್ದಂತೆ, ಮೊದಲು ದೃಷ್ಟಿಯುದ್ಧವಾಯಿತು. ಬಾಹುಬಲಿಯು ತನ್ನ ತೇಜಃಪುಂಜವಾದ ಕಣ್ಣುಗಳಿಂದ ಎವೆಯಿಕ್ಕದೆ ನೋಡಿ ಭರತನನ್ನು ದಿಟ್ಟಿಸಿದ. ದೃಷ್ಟಿಗಳು ದೃಷ್ಟಿಗಳೊಡನೆ ತಾಕಲಾಡಿದವು. ಒಬ್ಬರ ದೃಷ್ಟಿ ಇನ್ನೊಬ್ಬರದನ್ನು ಉಕ್ಕಿನ ಹಿಡಿತದಲ್ಲಿ ಹಿಡಿದಂತೆ ಹಿಡಿದು ಮಣಿಸಲು ಯತ್ನಿಸಿದವು. ಈ ನಿರ್ಧಾರಪೂರ್ಣ ದೃಷ್ಟಿಗಳು ಎಷ್ಟೋ ಕಾಲ ಒಂದರೊಡನೊಂದು ತೊಡಕಿದ್ದವು. ಆದರೆ ಕೊನೆಗೆ ಭರತರಾಜನ ದೃಷ್ಟಿಗೆ ತಮ್ಮನ ಕಟ್ಟಾಯದ ನೋಟವನ್ನು ಸಹಿಸುವುದಾಗಲಿಲ್ಲ. ಅವು ಹಾಗೆಯೆ ಮಣಿದವು.

ಒಂದು ಪರೀಕ್ಷೆ ಮುಗಿದಂತಾಯಿತು. ಬಳಿಕ ಸೋದರರು ಜಲಯುದ್ಧವನ್ನು ಪ್ರಾರಂಭಿಸಿದರು. ಅವರು ತಮ್ಮ ಮಹಾಬಾಹುಗಳ ಆಸ್ಫಾಲನದಿಂದ ತೆರೆಗಳನ್ನೆಬ್ಬಿಸುತ್ತ ಒಬ್ಬರೊಬ್ಬರ ಮೇಲೆ ನೀರೆರಚತೊಡಗಿದರು. ಆದರೆ ಅದರಲ್ಲೂ ಶಕ್ತಿ ಅಸಮವಾಗಿಯೆ ಇತ್ತು.

ಪ್ರಹೋನ್ನತ ಕಾಯನಾದ ಬಾಹುಬಲಿಯ ಮೇಲೆ ಭರತನು ಎರಚಿದ ನೀರು ಅವನ ಕತ್ತಿಗಿಂತ ಮೇಲೆ ಬೀಳಲಿಲ್ಲ. ಬಾಹುಬಲಿ ಎರಚಿದ ನೀರು ಮುಖದ ಮೇಲಪ್ಪಳಿಸುವುದನ್ನು ಭರತನಿಗೆ ತಪ್ಪಿಸಿಕೊಳ್ಳಲಾಗಲಿಲ್ಲ. ಭರತ ಇದರಲ್ಲೂ ಸೋತ.

ಮೂರನೆಯದು ಮಲ್ಲಯುದ್ಧ. ಬಾಹುಬಲಿಯು ಒಮ್ಮೆಲೇ ಭರತನನ್ನು ಎತ್ತಿ ನೆಲದಲ್ಲಿ ಕೆಡವಿದ.

ಹುಂಡಾವಸರ್ಪಿಣೀ ಯೋಗದ ಮಹಿಮೆಯಿಂದಾಗಿ ಹೀಗೆ ಅಣ್ಣನಾದ ಭರತನಿಗೆ ತಮ್ಮನಾದ ಬಾಹುಬಲಿಯಿಂದ ಸೋಲುಂಟಾಯಿತು. ಬಾಹುಬಲಿಯ ಕೀರ್ತಿ ಲೋಕದಲ್ಲಿ ಹರಡಿತು. ತಮ್ಮನೊಡನೆ ಹೋರಾಡುವ ಅಯೋಗ್ಯವಾದ ಕೆಲಸವನ್ನು ಭರತನು ಮಾಡಿದನೆಂದು ಜನರು ಹಳಿಯುವುದನ್ನು ಕೇಳಿ ಅವನು ನಾಚಿಕೊಂಡ.

ಭರತನ ಚಕ್ರರತ್ನ ಬಾಹುಬಲಿಯ ದಕ್ಷಿಣ ಬಾಹುವಿನ ಕೆಳಗೆ ಬಂದು ನಿಂತಿತು. ಅಣ್ಣನ ಚಕ್ರ ತನ್ನನ್ನರಸಿಕೊಂಡು ಬರುವುದನ್ನು ಕಂಡು ಈ ತಮ್ಮನಿಗೆ ವಿಜಯೋತ್ಸಾಹ ಉಕ್ಕಬೇಕಾಗಿತ್ತು. ಆದರೆ ಹಾಗಾಗಲಿಲ್ಲ. ಸಹಸಾ ಅವನ ಮನಸ್ಸಿನಲ್ಲಿ ಈ ಎಲ್ಲ ಕಜ್ಜಾಟದ ಹುಚ್ಚುತನದ ಅರಿವು ಮೂಡಿತು. "ಅಯ್ಯೋ! ಚಂಚಲವಾದ ರಾಜ್ಯದಾಸೆಗಾಗಿ ತಾವು ಸೋದರರು ಕಾದಾಡಿ ವಿರಸಹೊಂದಿದೆವು. ಆದಿತೀರ್ಥಂಕರನ ಮಕ್ಕಳಾದ ನಮಗೂ ಈ ವಿಧಿಯಾಯಿತೆ? ಇದೆಲ್ಲ ಇಂದ್ರಿಯಸುಖದ ಕಾರ್ಯಭಾರ. ಈ ಹುಚ್ಚಿನಿಂದ ಮುಕ್ತನಾಗಲು ಜಿನದೀಕ್ಷೆಯನ್ನು ಕೈಕೊಳ್ಳುವುದೇ ಪರಿಹಾರ" ಎಂದು ಆ ಕ್ಷಣದಲ್ಲಿ ಅವನು ನಿರ್ಧರಿಸಿದ.

ಹಾಗೆಯೇ ಭರತನನ್ನುದ್ದೇಶಿಸಿ, "ಅಣ್ಣಾ, ನೀನು ಕೋಪವನ್ನು ಬಿಟ್ಟುಬಿಡು. ನಿನ್ನ ತಮ್ಮಂದಿರೊಡನೆ ಕಾದಾಡುವುದು ನಿನಗೆ ಶೋಭಿಸುವುದೇ? ನನ್ನನ್ನು ಗೆಲ್ಲಲು ನಿನ್ನ ಚಕ್ರಕ್ಕೆ ಸಾಮರ್ಥ್ಯವಿಲ್ಲ. ಆದರೆ ಅದು ನಿನ್ನಲ್ಲೇ ನೆಲಸಲಿ. ನನ್ನ ರಾಜ್ಯವೂ ನಿನಗೇ ಇರಲಿ. ನಿನ್ನೊಡನೆ ಹಿರಿದಾದ ಅವಿನಯವನ್ನು ತೋರಿ ನಾನು ಮಾಡಿದ ಅಪರಾಧವನ್ನು ತಪಸ್ಸುಮಾಡಿ ಪರಿಹರಿಸಿಕೊಳ್ಳುವೆ," ಎಂದು ಕಣ್ಣೀರಿಟ್ಟ.

ಭರತ ಏನು ಹೇಳಬಹುದಾಗಿತ್ತು? ಅವನು

ಕರಗಿ ಹೋದ. ನಿನ್ನೆಯವರೆಗೆ ಭೋಗಸಾಮ್ರಾಜ್ಯದಲ್ಲಿ ಮುಳುಗಿದ ಈ ಸಶರೀರ ಕಾಮದೇವ, ಯಾರಿಗೂ ಬಾಗಿ ಬಾಳೆನೆಂದಿದ್ದ ಧೀರೋದ್ಧತ ತಮ್ಮ ಸರ್ವತ್ಯಾಗಕ್ಕಣಿಯಾಗಿದ್ದಾನೆ. ತಪಸ್ಸಿಗೆ ಹೋಗಬಾರದೆಂದು ಭರತ ತಮ್ಮನಿಗೆ ಆಗ್ರಹಪಡಿಸಿದ. ಆದರೆ ಬಾಹುಬಲಿ ಭೋಗದಲ್ಲೆಷ್ಟು ದಿಟ್ಟನೋ ತ್ಯಾಗದಲ್ಲಿ ಅಷ್ಟೇದಿಟ್ಟ. ಆತ ನೇರವಾಗಿ ಮಂದಾರ ಪರ್ವತಕ್ಕೆ ನಡೆದ. ಅಲ್ಲಿ ಜೈನ ದೀಕ್ಷೆಯನ್ನು ಕೈಕೊಂಡು, ಗುರುವಿನಿಂದ ದ್ವಾದಶಾಂಗಾದಿಗಳನ್ನು ಅಭ್ಯಸಿಸಿ, ಏಕಾಕಿಯಾಗಿ ಪರ್ವತಾಗ್ರದಲ್ಲಿ ಪ್ರತಿಮಾಯೋಗದಲ್ಲಿ ನಿಂತ.

ಬಾಹುಬಲಿ ಅಲ್ಲಿ ಹಾಗೆ ನಿಂತಿದ್ದಂತೆ ಕಾಲಚಕ್ರ ಮುಂದೆ ಸರಿಯುತ್ತಿತ್ತು. ಋತುಗಳು ಕ್ರಮವಾಗಿ ಅವನ ಸುತ್ತ ಮೆರವಣಿಗೆ ಹಾಯ್ದು ಹೋದವು. ಮಳೆ ಧೋಧೋ ಎಂದು ಅವನ ತಲೆಯ ಮೇಲೆ ಸುರಿಯಿತು. ಮಿಂಚು ಸಿಡಿಲುಗಳು ಅವನ ಪಕ್ಕಗಳಲ್ಲಿ ಭಯೋತ್ಪಾದನೆ ಮಾಡಿದವು. ಶರತ್ಕಾಲ ತನ್ನ ತಿಳಿಬಾನಿನಲ್ಲಿ ನಕ್ಷತ್ರಮಾಲೆಯನ್ನು ಎಳಸಿತು. ಹೇಮಂತದ ತಂಪು ಶಿಶಿರದ ಹಿಮಕ್ಕೆ ಆಸ್ಪದವಿತ್ತಿತು. ವಸಂತ ತನ್ನ ಹೂವಿನ ಕೋಲುಗಳೊಡನೆ ನರ್ತಿಸಿತು. ಗ್ರೀಷ್ಮ ತನ್ನ ಕೆಂಡಗಳನ್ನು ಅವನ ತಲೆಯ ಮೇಲೆ ಕಾರಿತು. ಬಾಹುಬಲಿ ಒಂದನ್ನೂ ಗಮನಿಸದೆ ನಿಂತ ನಿಟ್ಟಿನಲ್ಲಿ ನಿಂತೇ ಇದ್ದ. ಅವನ ಅಚಲತೆಯಿಂದಾಗಿ ಇಕ್ಕೆಲಗಳಲ್ಲಿಯೂ ಹುತ್ತಗಳು ಬೆಳೆದವು. ನೆತ್ತಿಯ ತನಕ ಬಳ್ಳಿಗಳು ಹರಡಿದುವು. ವಿಷದ ಹಾವುಗಳು ಅವನ ಮೈ ಮೇಲೆ ಹರಿದುವು. ತಲೆಗೂದಲು ಬಳ್ಳಿಗಳಂತೆ ಹೆಣೆಯಿತು. ಇಂಥ ಉಗ್ರ ತಪಸ್ಸನ್ನಾಚರಿಸಿದರೂ ಬಾಹುಬಲಿಗೆ ಕೈವಲ್ಯಜ್ಞಾನೋದಯವಾಗಲಿಲ್ಲ. ಭರತ ಚಕ್ರವರ್ತಿಯು ತಮ್ಮನ ಈ ತೊಡಕಿನಿಂದ ವ್ಯಾಕುಲಗೊಂಡು ತಂದೆ ವೃಷಭ ಸ್ವಾಮಿ ಬಳಿಗೆ ಹೋಗಿ ಇದನ್ನು ನಿವೇದಿಸಿದನು.

"ಬಾಹುಬಲಿಗೆ ತಾನು ನಿನಗೆ ಸೇರಿದ ನೆಲದಲ್ಲಿ ನಿಂದಿದ್ದೇನೆಂಬ ಮನಃಕಷಾಯವಿದೆ. ಅದು ತೊಲಗದೆ ಅವನಿಗೆ ಕೈವಲ್ಯಜ್ಞಾನೋದಯವಾಗದು. ಆದ್ದರಿಂದ ನೀನು ಅವನಲ್ಲಿಗೆ ಹೋಗಿ ಎರಗಬೇಕು," ಎಂದು ಅವರು ಉಪದೇಶಿಸಿದರು.

ಭರತನು ಅಂತೆಯೇ ಬಾಹುಬಲಿಯ ಬಳಿಗೆ ಹೋಗಿ ಎರಗಿ, "ಇದು ನಿನ್ನದೇ ರಾಜ್ಯ; ಇದರಲ್ಲೇ ಅಪಾರ್ಥಮಾಡಬೇಡ" ಎಂದು ಸಮಾಧಾನಪಡಿಸಿದನು.

ಬಾಹುಬಲಿಗೆ ಆಗ ಮನಃಕಷಾಯ ತೊಲಗಿ ಕೈವಲ್ಯ ಜ್ಞಾನೋದಯವಾಯಿತು.

ಆ ಮೇಲೆ ಬಾಹುಬಲಿಯು ಅನೇಕ ದೇಶಗಳಲ್ಲಿ ವಿಹರಿಸುತ್ತ ಧರ್ಮೋಪದೇಶ ಮಾಡುತ್ತ ಮುಂದೆ ಆದಿ ತೀರ್ಥಂಕರರ ಸನ್ನಿಧಿಯಲ್ಲಿ ನೆಲೆಸಿದನು. ಭರತ ಚಕ್ರವರ್ತಿಯೂ ಅಲ್ಲಿಗೆ ಹೋಗಿ ಅವನನ್ನು ಪೂಜಿಸಿದ.

ತದ್ಭವ ಮೋಕ್ಷಗಾಮಿಯಾದ ಬಾಹುಬಲಿ ಮುಂದೆ ಮುಕ್ತಿಯನ್ನು ಸಂದನು. *



ಶಕ್ತಿಯೇ ಬದುಕಿನ ಅತ್ಯುತ್ತಮ ಮಾರ್ಗದರ್ಶಿ. ಬೇರೆ ವಿಷಯಗಳಲ್ಲಿ ಹೇಗೋ ಹಾಗೆಯೇ ಧರ್ಮಪಥದಲ್ಲಿಯೂ ದುರ್ಬಲಕಾರಿಯಾದುದನ್ನೆಲ್ಲಾ ಕಿತ್ತೊಗೆ. ಅದರ ಸಹವಾಸವೇ ಬೇಡ.

*

ದುರ್ಬಲತೆಯ ನಿವಾರಣೆಗೆ ದುರ್ಬಲತೆಯನ್ನು ಕುರಿತು ಚಿಂತಿಸುವುದಲ್ಲ ಔಷಧ-ಬಲದ ಚಿಂತನೆ. ಮನುಷ್ಯರಿಗೆ ಅವರಲ್ಲಿ ಸುಪ್ತವಾಗಿರುವ ಬಲವನ್ನು ಕುರಿತು ಬೋಧಿಸು.

*

"ಜನರ ಧರ್ಮಕ್ಕೆ ಚ್ಯುತಿತರದಂತೆ ಜನತೆಯ ಉದ್ಧಾರ"

— ಇದೇ ನಿನ್ನ ಧ್ಯೇಯವಾಗಿರಲಿ.

— ವಿವೇಕಾನಂದ

# ಮಾತೇ ನಾಕ ಮಾತೇ ನರಕ

ಪಿ. ಎಂ. ಗಿರಿರಾಜು

ಒಮ್ಮೆ ಒಬ್ಬ ಪ್ರಯಾಣಿಕ ದಾರಿಯಲ್ಲಿ ನಡೆದು ನಡೆದು ಸಾಕಾಗಿ ಸಮೀಪದ ಹಳ್ಳಿಯನ್ನು ಸೇರಿಕೊಂಡ. ಪ್ರಯಾಣದ ದಣಿವು ಆಯಾಸಗಳಿಂದ ಕಂಗೆಟ್ಟ ಆ ಪಯಣಿಗ ಒಂದು ಕಡೆ ತಂಗಿ ವಿಶ್ರಮಿಸಿಕೊಳ್ಳಲು ಆಲೋಚಿಸಿದ ತನ್ನ ಕಣ್ಣಿಗೆ ಕಂಡ ಮುದುಕನೊಬ್ಬನನ್ನು ಕೇಳಿದ, "ಅಯ್ಯಾ" ಈ ಹಳ್ಳಿಯಲ್ಲಿ ಒಳ್ಳೆಯವರು ಯಾರಿದ್ದಾರೆ?" ಆ ಮುದುಕ ತನ್ನ ಬೊಚ್ಚು ಬಾಯಿಯಲ್ಲೇ ಮುಗುಳ್ನಗುತ್ತಾ ಹೇಳಿದ. "ನಿನ್ನ ನಾಲಿಗೆ ಒಳ್ಳೆಯದಾದರೆ ಈ ಹಳ್ಳಿಯವರೆಲ್ಲ ಒಳ್ಳೆಯವರೇ."

ಈ ಪ್ರಸಂಗ ಘಟಿತವೋ ಅಘಟಿತವೋ ಗೊತ್ತಿಲ್ಲ. ಆದರೆ ಈ ಪುಟ್ಟ ಪ್ರಸಂಗದಲ್ಲಿ ಅಡಗಿರುವ ನೀತಿಯು ಮಾತು ಬಹು ದೊಡ್ಡದು. ಇದು ಎಲ್ಲರೂ ಒಮ್ಮತದಿಂದ ಒಪ್ಪಿಕೊಳ್ಳಬಹುದಾದ ಮಾತು.

ಬಹು ಹಳೆಯ ಕಾಲದಿಂದಲೂ ನಮ್ಮ ಭಾರತದಲ್ಲಿ "ಒಳ್ಳೆ ಮಾತಿನ" ಪ್ರಶಂಸೆ ನಡೆದು ಬಂದಿದೆ. "ಮಾತು ಆಡಿದರೆ ಹೋಯಿತು ಮುತ್ತು ಒಡೆದರೆ ಹೋಯಿತು", "ಮಾತು ಬಲ್ಲವ ಮಾಣಿಕ ತಂದ". "ಮಾತೇ ಮುತ್ತು ಮಾತೇ ಮಿತ್ತು" ಇವೇ ಮೊದಲಾದ ಅಸಂಖ್ಯಾತ ಅನುಭವದ ಗಾದೆಗಳು ಮಾತಿನ ಹಿರಿಮೆಯನ್ನೂ ವ್ಯಾಪ್ತಿಯನ್ನೂ ಸಾರುತ್ತಾ ಬಂದಿವೆ.

ಜಗತ್ತಿನಲ್ಲಿ ಇಂದು ನಡೆಯುತ್ತಿರುವ ಅಸಂಖ್ಯಾತ ಅನಾಹುತಗಳಿಗೆ ಪರಸ್ಪರ ಸದ್ಭಾವನೆಯ ನ್ಯೂನತೆಯೇ ಪ್ರಧಾನ ಕಾರಣವಾಗಿದೆ ಎಂದು ನಾವು ಘಂಟಾಘೋಷವಾಗಿ ಹೇಳಬಹುದು. ಸರಿಯಲ್ಲದ ರೀತಿಯಿಂದ ಮಾತನಾಡುವಿಕೆಯೇ ಪರಸ್ಪರ ಸಂಶಯ ದ್ವೇಷ ದುರ್ಭಾವನೆಗೆ ನೆಲಗಟ್ಟಾಗಿದೆ. ಯಾವುದೋ ಮಾತಿನ ಮುಳ್ಳಿನ ಇರಿತ ವಿರಸಕ್ಕೆ ಕಾರಣವಾಗಿ ಅನೇಕ ಜೀವಗಳ ಹಾನಿಗೆ ದಾರಿಯಾಗಬಹುದು. ದೇಶ ದೇಶಗಳ ವಿಶ್ವವೇದಿಕೆಯಿಂದ ಹಿಡಿದು ಒಂದೇ ಕುಟುಂಬದ ಎರಡು ವ್ಯಕ್ತಿಗಳ ನಡುವಣ ಹಗೆತನ ಭಿನ್ನಾಭಿಪ್ರಾಯಗಳಿಗೆ ಯಾವುದೋ ವಿವೇಚನೆಯಿಲ್ಲದ ಮಾತು ಅಥವಾ ಮಾತುಗಳು ಬಹು ಸಂದರ್ಭಗಳಲ್ಲಿ ಕಾರಣವಾಗಿರುತ್ತವೆ.

ಹಾಗಾದರೆ ಮಾನವನು ತನ್ನ ಕಡುಹಗೆಯೂ ಕಡುಕೆಳೆಯೂ ಆದ ಮಾತನ್ನು ತನ್ನ ಅಳವಿನಲ್ಲಿಟ್ಟುಕೊಳ್ಳುವುದು ಹೇಗೆ? ಬಹು ಹಳೆಯ ಕಾಲದಿಂದ ಹಲವಾರು ಜ್ಞಾನಿಗಳೂ ಅನುಭಾವಿಗಳೂ ಈ ಪ್ರಶ್ನೆಯನ್ನು ತಮ್ಮದೇ ಆದ ರೀತಿಯಲ್ಲಿ ಬಿಡಿಸಿದ್ದಾರೆ. ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನನ್ನು ನೆಪವಾಗಿಟ್ಟುಕೊಂಡು ಹೇಳಿದ ತತ್ತ್ವ ಸಂಗತಿಗಳಲ್ಲಿ "ವಾಙ್ಮಯ ತಪಸ್ಸು" ಒಂದು. ಶ್ರೀಕೃಷ್ಣನು ಮಾತನ್ನು ಒಂದು "ತಪ"ದಂತೆ ಆಚರಿಸಬೇಕು ಎಂದು ಹೇಳುತ್ತಾನೆ. ಇದೇ ವಿಚಾರದಲ್ಲಿ ಕನ್ನಡದ ಅನುಭಾವಿಗಳಾದ ಬಸವಣ್ಣನವರು "ಮಾತೆಂಬುದು ಜ್ಯೋತಿರ್ಲಿಂಗ" ಎಂದು ಜಗಕ್ಕೆ ತಿಳಿಸಿ ಮಾತಿನ ಪವಿತ್ರತೆಯ ಪರಮಾವಧಿಯನ್ನು ಅಳೆದು ಬಿಟ್ಟಿದ್ದಾರೆ. ಶ್ರೀ ಶಂಕರ ಭಗವತ್ಪಾದರು "ಸ್ತೋತ್ರಾಣಿ ಸರ್ವಾ ಗಿರಃ" ಎಂಬ ನುಡಿಮುತ್ತಿನಲ್ಲಿ ನುಡಿಮುತ್ತಿನ ಬೆಲೆಯನ್ನು ಕಟ್ಟಿದ್ದಾರೆ. "ಆಡುವುದೆಲ್ಲಾ ಅವನ ಹೊಗಳಿಕೆಯೇ" ಎಂದು ಅರ್ಥ. ನಾವು ಆಡುವ ಮಾತು ಭಗವಂತನ ಕೀರ್ತನೆಯಷ್ಟೇ ಆನಂದದಾಯಕವೂ ಕಲ್ಯಾಣಕಾರಕವೂ ಆಗಿರಲಿ ಎಂಬುದು ಅವರ ತಾತ್ಪರ್ಯ.

ಮಾತಿನ ಬಗ್ಗೆ ಗೀತಾಚಾರ್ಯ ಶ್ರೀಕೃಷ್ಣನು ಹೇಳುವ ವಿಚಾರವನ್ನು ಗಮನಿಸೋಣ. ಭಗವಂತನು ಹೇಳುತ್ತಾನೆ:

ಅನುದ್ವೇಗಕರಂ ವಾಕ್ಯಂ ಸತ್ಯಂ
ಪ್ರಿಯಹಿತಂ ಚ ಯತ್ ।
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ
ತಪ ಉಚ್ಯತೇ ।

ಉದ್ವೇಗವನ್ನುಂಟುಮಾಡದ, ನಿಜವಾದ, ಪ್ರಿಯವಾದ, ಹಿತವಾದ, ಪ್ರಾಚೀನ ಪವಿತ್ರ ಗ್ರಂಥಗಳನ್ನು ಆಧಾರವಾಗಿ ಉಳ್ಳ ಮಾತು "ಮಾತಿನ ತಪಸ್ಸು" ಎನ್ನಿಸಿಕೊಳ್ಳುತ್ತದೆ.

ಶ್ರೀ ಕೃಷ್ಣನ ಅಭಿಪ್ರಾಯದಲ್ಲಿ ಮಾತಿನಲ್ಲಿರಬಹುದಾದ ಮೊದಲನೆಯ ದೋಷವೆಂದರೆ "ಉದ್ವೇಗವನ್ನುಂಟುಮಾಡುವಿಕೆ." ಹೀನವೂ ಅವಿವೇಕಪೂರ್ಣವೂ ಆದ ಒಂದು "ಉದ್ವೇಗಕಾರಕ" ಮಾತು ಜಗಳ, ದೊಂಬಿ, ಲೂಟಿ, ಕೊಲೆ, ಅಮಾನುಷ ಅತ್ಯಾಚಾರಗಳಲ್ಲಿ ಮುಗಿಯುದನ್ನು ನಾವೆಲ್ಲರೂ ಕಂಡಿದ್ದೇವೆ, ಕೇಳಿದ್ದೇವೆ. ಉದ್ವೇಗವನ್ನುಂಟುಮಾಡುವ ಮಾತು ಉದ್ವೇಗದಲ್ಲಿಯೇ ಪರ್ಯವಸಾನವಾಗುತ್ತದೆ. ಬೋಧಿಸತ್ವನು ಒಂದೆಡೆ ಹೇಳುತ್ತಾನೆ: "ನೀವು ಆಡುವ ಮಾತು ಉದ್ವೇಗರಹಿತವಾಗಿರಲಿ. ಇಲ್ಲದಿದ್ದರೆ ಅದು ಕೇಳುವವನ ಎದೆಯನ್ನು ಇರಿಯುತ್ತದೆ. ಅವನು ಪ್ರತಿಯಾಗಿ ಅಷ್ಟೇ ಉದ್ವೇಗದಿಂದ ಮಾತನಾಡಿದರೆ ಅದು ನಿನ್ನ ಎದೆಯನ್ನೂ ಇರಿಯುತ್ತದೆ." ಕೇವಲ ಒಂದೇ ಒಂದು ಉದ್ವೇಗಕಾರಕ ಮಾತಿನಿಂದ ತುಂಬಿದ ಸಂಸಾರಗಳು ನುಚ್ಚುನೂರಾಗಿರುವ ಕಹಿಪ್ರಸಂಗಗಳುಂಟು. ಒಂದು ಮಾತು ಕೇಳಿ ಅದರಿಂದ ಉಂಟಾದ ಉದ್ವೇಗದ ದೆಸೆಯಿಂದ ಆ ಕಾವಿನ ರಭಸದಲ್ಲಿ ಆತ್ಮಹತ್ಯೆಯನ್ನು ಮಾಡಿಕೊಂಡ ವಿಷಾದ ಪ ಸಂಗಗಳು ಜೀವನದಲ್ಲಿ ನೋಡಲು ಸಿಗುತ್ತವೆ. ಆದುದರಿಂದ ಉದ್ವೇಗದಲ್ಲಿರುವಾಗ್ಗೆ ಮಾತನ್ನೇ ಆಡಬಾರದು. ಆದರೆ ಆ ಸಾಧನೆ ಬಹು ಕಷ್ಟಸಾಧ್ಯವಾದದ್ದು. ಕ್ರೋಧದಿಂದಲೇ ಉದ್ವೇಗ ಹುಟ್ಟುತ್ತದೆ. ಕ್ರೋಧವನ್ನು ಹತೋಟಿಯಲ್ಲಿಟ್ಟವನು ಉದ್ವೇಗವನ್ನೂ ಹೊಂದುವುದಿಲ್ಲ; ಉದ್ವೇಗಕಾರಕವಾಗಿ ಮಾತನ್ನೂ ಆಡುವುದಿಲ್ಲ. ಶ್ರೀ ಕೃಷ್ಣನ ಮಾತಿನಲ್ಲಿಯೇ ಹೇಳುವುದಾದರೆ ಅಭ್ಯಾಸ ವೈರಾಗ್ಯಗಳಿಂದ ದುರ್ನಿಗ್ರಹವಾದ ಮನಸ್ಸನ್ನು ನಿಗ್ರಹಿಸುವುದರ ಮೂಲಕ, ಮಾನವನು ಚಿತ್ತಚಾಂಚಲ್ಯದಿಂದ ಉಂಟಾಗುವ ಕ್ರೋಧಾದಿ ದೋಷಗಳನ್ನು ಯಶಸ್ವಿಯಾಗಿ ತಡೆಗಟ್ಟಬಹುದು.

ಮಾತಿನಲ್ಲಿರುವ ಎರಡನೆಯ ದೋಷವೆಂದರೆ ಅಸತ್ಯತೆ. ಸತ್ಯದಿಂದ ಸಾಧಿಸಲಾಗದುದೇ ಇಲ್ಲ. "ಸತ್ಯಮೇವ ಜಯತೇ ನಾನೃತಂ" ಎಂಬ ಉಪನಿಷದ್ವಾಕ್ಯವು ಸತ್ಯದ ಸರ್ವೋತ್ಕೃಷ್ಟತೆಯನ್ನು ಸಾರುತ್ತದೆ. ಸುಳ್ಳಿನ ಸರಪಳಿಯನ್ನು ಹೆಣೆಯುವವನು ಬೈಬಲ್ಲಿನಲ್ಲಿ ಬರುವ ಕಡು ಜಾಣ ಕಮ್ಮಾರ ತಾನು ಕಟ್ಟಿದ ಮುರಿಯಲಾಗದ ಕೋಳದಲ್ಲಿ ತಾನೇ ಬಂಧಿತನಾಗಿ ಕಣ್ಣು ಕಣ್ಣು ಬಿಡುವ ರೀತಿಯಲ್ಲಿ ತನ್ನ ಸುಳ್ಳಿನ ಸರಪಳಿಯಿಂದಲೇ ಬಂಧಿತನಾಗಿ ನಾಚುವ ಪ್ರಸಂಗ ನಿಶ್ಚಯವಾದದ್ದು. ಯೋಗಶಾಸ್ತ್ರದಲ್ಲಿ "ವಾಕ್ ಶಕ್ತಿಯ" ವಿಚಾರ ಪ್ರಸ್ತಾಪಿಸಲ್ಪಟ್ಟಿದೆ. "ನಿಷ್ಠೆಯಿಂದ ದೀರ್ಘಕಾಲ ಸುಳ್ಳಾಡದವನು ನುಡಿದುದೆಲ್ಲವೂ ನಿಜವಾಗುತ್ತದೆ" ಎಂಬ ಪ್ರತೀತಿ ಉಂಟು. ಲೌಕಿಕ ದೃಷ್ಟಿಯಿಂದ ನೋಡಿದರೂ ಇದು ನಿಜವೇ ಸರಿ. ಹುಸಿಯ ನುಡಿಯದಿರುವುದೇ ಅಂತರಂಗ ಬಹಿರಂಗ ಶುದ್ಧಿ. ಇದರಿಂದಲೇ ನಾವು ಭಗವಂತನ ಒಲುಮೆಯನ್ನು ಶ್ರಮವಿಲ್ಲದೇ ಗಳಿಸಬಹುದು.

ಮಾತಿನಲ್ಲಿರುವ ಮೂರನೆಯ ದೋಷವೆಂದರೆ "ಕಟುತನ" ಅಥವಾ ಅಪ್ರಿಯತೆ. ಕಟುವಾಗಿ ಮಾತನಾಡುವುದಕ್ಕಿಂತ ಕೀಳುತನವಿಲ್ಲ. ಸತ್ಯದ ನೆಪದಲ್ಲಿ ಕಟುವಾಗಿ ಮಾತನಾಡುವುದು ಅಜ್ಞಾನದ ಲಕ್ಷಣ. ಸತ್ಯವೆಂಬುದು ಹೊನ್ನೆಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಆದರೆ ಶುಷ್ಕ ಶುದ್ಧ ಸತ್ಯವೆಂಬುದು ಗಣಿಯಿಂದ ಆಗ ತಾನೆ ಅಗೆದು ತೆಗೆದ ಬಂಗಾರದ ಅದುರು ಇದ್ದಂತೆ. ಅಮೂಲ್ಯವೇನೊ ನಿಜ, ಆದರೆ, ಹಾಗೆಯೇ ನಿಷ್ಪ್ರಯೋಜಕ ವಸ್ತು. ಅದುರಿಗೆ ಸಲ್ಲುವ ಸಂಸ್ಕಾರ ಸಂದರೆ ಮಾತ್ರ ಅದು ಅದುರಿನಿಂದ ಹೊನ್ನು ಎನ್ನಿಸಿಕೊಳ್ಳುತ್ತದೆ. ಅಂತೆಯೇ ಸತ್ಯ ವಾಕ್ಯಕ್ಕೆ ಪ್ರಿಯತೆಯು ನವರಿನ ಸಂಸ್ಕಾರ

ಸಂದರೆ ಮಾತ್ರ ಸೊಗಸೆನಿಸುತ್ತದೆ. "ನ ಬ್ರೂಯಾತ್ ಸತ್ಯಮಪ್ರಿಯಂ" "ಅಪ್ರಿಯವಾದ ಕಟುವಾದ, ನಿಜವನ್ನು ಹೇಳಲಾಗದು" ಮಾನವನು ಪ್ರಾಣಿ ವರ್ಗದಿಂದ ಬೇರ್ಪಟ್ಟರೂ ಸುಸಂಸ್ಕೃತನೆನಿಸಿದರೂ ತನ್ನ ಗುರಿಯನ್ನು ಮುಟ್ಟುವುದು ಸಭ್ಯತೆ ವಿನಯಗಳಿಂದಲೇ. "ಕೊಡದಿದ್ದರೊಂದು ಹೋಯಿತು ಕೆಡುನುಡಿಗಳ ತೊರೆದು ಸಲ್ನುಡಿಗಳ ನುಡಿದರೆ ನಾಲಿಗೆ ಬಿದ್ದು-ಹೋಗುವುದೇ ?" ಎಂದು ಬಸವಣ್ಣನವರು ಮಾರ್ಮಿಕವಾಗಿ ಮಾನವ ಜನಾಂಗವನ್ನು ಪ್ರಶ್ನಿಸುತ್ತಾರೆ.

ಮಹಾಭಾರತದಲ್ಲಿ ಒಮ್ಮೆ ವಿದುರನು ಹೃದಯವನ್ನೇ ಕಲಕುವ ಮಾತೊಂದನ್ನು ಧೃತರಾಷ್ಟ್ರನಿಗೆ ಹೇಳುತ್ತಾನೆ. "ಪ್ರಿಯವಾಗಿ ಮಾತನಾಡುವವರು ಅಸಂಖ್ಯಾತರು ದೊರೆತಾರು, ಆದರೆ ಹಿತವಾಗಿ ಹೇಳುವವರೂ ಕೇಳುವವರೂ ದುರ್ಲಭ" ಎನ್ನುತ್ತಾನೆ. ಮಾತಿನ ದೋಷಗಳಲ್ಲಿ ಮೂರನೆಯದು ಮುಖಸ್ತುತಿ. ಸಾಮಾನ್ಯವಾಗಿ ಮಾನವರು ಮಾತನಾಡುವಾಗ ತಮ್ಮ ಮಾತಿನ ಪರಿಣಾಮವನ್ನು ಗಮನಿಸುವುದಿಲ್ಲ. ಏನೋ ಹಿತವಾಗುವ ರೀತಿಯಲ್ಲಿ ಮಾತನಾಡುವುದಕ್ಕಿಂತ ಆತ್ಮದ್ರೋಹ ಇನ್ನೊಂದಿಲ್ಲ. ಶ್ರೋತೃವಿನ ಹಿತಾಹಿತಗಳನ್ನು ಲಕ್ಷಿಸಿ ಮಾತನಾಡುವುದು ನಿಜವಾದ ಜ್ಞಾನಿಯ ಲಕ್ಷಣ. ನಾವು ಆಡುವ ನುಡಿ ಆನಂದದಾಯಕವಾಗಿರಬೇಕು. ಕಲ್ಯಾಣಕಾರಕವಾಗಿರಬೇಕು. ಕೆಲವರು ಕೇಳುವವರ ತಾಳ್ಮೆಯನ್ನು ಅಲಕ್ಷಿಸಿ ತಮ್ಮ ವಾಗ್ಧಾರೆಯಲ್ಲಿ ಕೇಳುವವರನ್ನು ತೋಯಿಸಿಬಿಡುತ್ತಾರೆ. ನಾವು ಆಡುವ ಪ್ರತಿ ನುಡಿಯನ್ನೂ ಕೇಳುವವನು ಶ್ರದ್ಧೆ ಕುತೂಹಲಗಳಿಂದ ಕೇಳುವಂತೆ ನಾವು ಮಾತನಾಡಬೇಕು. ಅದು ಜಾಣತನದ ಲಕ್ಷಣ ಎನ್ನಿಸಿಕೊಳ್ಳುತ್ತದೆ. ನಮ್ಮ ಮಾತು ತತ್ತ್ವವೇತ್ತ ಸಾಕ್ರೇಟೀಸನ ನುಡಿಮುತ್ತುಗಳನ್ನು ಹೋಲಬೇಕು. ಅವನ ಕಾಲದ ಯುವ ಜನಾಂಗ ಅವನು ಆಡುವುದನ್ನು ಹುಚ್ಚೆದ್ದು ಕೇಳುತ್ತಿದ್ದಿತಂತೆ. ಅವನ ನುಡಿ ಹಿತನುಡಿಗಳಾಗಿದ್ದವು, ಪರಿಣಾಮಕಾರಿಯಾಗಿದ್ದವು, ಅವು ಕೇವಲ ಪಾಂಡಿತ್ಯ ಪ್ರದರ್ಶಕ ವಾಗ್ಜಾಲವಾಗಿರಲಿಲ್ಲ. ನಾವು ಹಿತಾಹಿತಗಳನ್ನೂ ಪರಿಣಾಮವನ್ನೂ ಆಲೋಚಿಸಿ ನುಡಿಯುವುದು ಮಾತೆಂಬ ತಪಸ್ಸಿನ ಅಮೂಲ್ಯವಾದ ನಾಲ್ಕನೆಯ ಸೂತ್ರ.

ಕೊನೆಯದಾಗಿ ನಮ್ಮ ಮಾತು ಶಾಸ್ತ್ರ-ವಿಚಾರಗಳಿಂದ ಪುಷ್ಟವಾಗಿರಬೇಕು. ಪ್ರಾಚೀನ ಕಾಲದಿಂದಲೂ ಅಸಂಖ್ಯಾತ ಸಾಧುಸಂತರೂ ಜ್ಞಾನಿ ಅನುಭಾವಿಗಳೂ ಬಹು ಶ್ರಮಪಟ್ಟು ಮಾನವಕೋಟಿಯ ಅಭ್ಯುದಯಕ್ಕೋಸುಗ ತಮ್ಮ ವಿಚಾರಮಂಥನದಿಂದ ಉತ್ಪತ್ತಿಯಾದ ಜ್ಞಾನ ವಿವೇಕಸುಧೆಯನ್ನು ಪ್ರಪಂಚಕ್ಕೆ ಧಾರೆಯೆರೆದು ಕೊಟ್ಟಿದ್ದಾರೆ. ಮಾನವನು ತನ್ನ ಅಲ್ಪಾಯುಷ್ಯದಲ್ಲಿ ಜೀವನದ ಚಿದಂಬರ ರಹಸ್ಯವನ್ನು ಪರಿಪೂರ್ಣವಾಗಿ ಯಾರ ಹಂಗೂ ಇಲ್ಲದೆ ಅರಿಯುವುದು ಅಸಾಧ್ಯವಿಷಯವೇ ಸರಿ. ಅದಕ್ಕಾಗಿ ಆತ ಹಿಂದಿನವರು ಉತ್ತು ಹದಮಾಡಿದ ನೆಲದಲ್ಲಿ ತನ್ನ ವಿವೇಕವನ್ನು ಬಿತ್ತಿ ತನ್ನ ಪಾಲಿನ ಜ್ಞಾನವನ್ನು ಪಡೆಯುವುದು ಸುಲಭ ಮಾರ್ಗ. ಹಳೆಯ ಅನುಭಾವಿ ಜ್ಞಾನಿಗಳ ದಾರಿಯಲ್ಲಿ ಪ್ರಯತ್ನಿಸಿ ಮಾತನಾಡುವುದರಿಂದ ಮಾನವನು ತನ್ನ ಮಾತಿನ ಪರಿಪೂರ್ಣತೆಯನ್ನು ಸಂಪಾದಿಸಬಹುದು.

ಹೀಗೆ ಪ್ರತಿ ಮಾನವನು ಉದ್ವೇಗಕಾರಕವಲ್ಲದ ಸತ್ಯವಾದ, ಪ್ರಿಯವಾದ, ಹಿತವಾದ ಪ್ರಾಚೀನ ಪವಿತ್ರಗ್ರಂಥ ವಿಚಾರಗಳಿಂದ ಪುಷ್ಟವಾದ ಮಾತನ್ನಾಡಿದರೆ, ಭೂಮಿಯೇ ಸ್ವರ್ಗವಾದೀತು.

*



ವೀರನು ಸಾಮಾನ್ಯರಿಗಿಂತ ಹೆಚ್ಚು ಧೀರನಲ್ಲ, ಹೆಚ್ಚು ಕಾಲ ಧೀರನಾಗಿರುತ್ತಾನೆ.



೧೯೬೬ ನೋಬೆಲ್ ಸಾಹಿತ್ಯ ಪಾರಿತೋಷಕ ಪಡೆದ
ಇಸ್ರೇಲ್ಯ ಲೇಖಕನ ಒಂದು ರೂಪಕ ಕಥೆ

# ಶತ್ರುವಿನಿಂದ ಮಿತ್ರ


ಮೂಲ ಹಿಬ್ರು:
**ಶಾಮುವೆಲ್ ಯೋಸೆಫ್ ಅಗನಾನ್**

ಕನ್ನಡಕ್ಕೆ:
**ಕೆ. ಶಾಂತಾರಾಮ ಪೈ**


ಶಾಲ್ವಿಯಾತ್ ನಿರ್ಮಾಣವಾಗುವ ಮೊದಲು ವಾಯುರಾಜನು ಸರ್ವ ಜಗತ್ತನ್ನು ಆಳುತ್ತಿದ್ದನು. ಮತ್ತವನ ಮಂತ್ರಿಗಳು, ಚಾಕರರು, ಅಜೇಯ ಸೈನ್ಯಪಡೆಗಳಂತಹ ಗಾಳಿಗಳು ಅವನ ಬಳಿ ಸೇರಿ ಪರ್ವತಗಳ ಮೇಲೆ, ಕಣಿವೆಗಳಲ್ಲಿ ಮತ್ತು ಬೆಟ್ಟ ಕೊಳ್ಳಗಳಲ್ಲಿ ಜಗತ್ತೆಲ್ಲ ತಮ್ಮದೇ ಏನೊ ಎಂಬಂತೆ ಸ್ವಚ್ಛಂದ ವಿಹಾರ ನಡೆಸಿದ್ದವು.

ನಾನೊಮ್ಮೆ ಅಲ್ಲಿ ಹೋಗಿ ಆ ಆಹ್ಲಾದಕರ ಸ್ಥಳವನ್ನು ನೋಡಿದ್ದೆ. ಬೀಸುವ ತಂಗಾಳಿ, ನಿರಭ್ರ ನೀಲಿ ಆಕಾಶ, ವಿಸ್ತಾರವಾದ, ಸ್ವತಂತ್ರವಾದ ಬಯಲು ಪ್ರದೇಶ. ನಾನು ಆ ಪ್ರದೇಶದಲ್ಲಿ ಕ್ಷಣಕಾಲ ಅತ್ತಿತ್ತ ನಡೆಯತೊಡಗಿದೆ. ಆಗ ಒಬ್ಬ ಗಾಳಿ ನನ್ನನ್ನು ಕೇಳಿದ, "ನೀನೇನು ಮಾಡುತ್ತಿರುವಿ ಇಲ್ಲಿ?"

"ನಡೆಯುತ್ತಿದ್ದೇನೆ," ಎಂದೆ.

"ಹಾ! ನೀನು ನಡೆಯುತ್ತಿರುವಿಯಲ್ಲವೆ!" ಎಂದು ಆ ಗಾಳಿ ನನ್ನ ತಲೆಯನ್ನು ತಟ್ಟಿ ಟೊಪ್ಪಿಗೆಯನ್ನು ಹವೆಯಲ್ಲಿ ಹಾರಿಸಿದನು. ಟೊಪ್ಪಿಗೆಯನ್ನೆತ್ತಿಕೊಳ್ಳಲು ನಾನು ಬಗ್ಗಿದಾಗ ಆತ ನನ್ನ ಕೋಟನ್ನು ತಿರುವು ಮುರುವು ಮಾಡಿ ನನ್ನನ್ನು ಕಂಚೇಷ್ಟೆಗೈದನು. ಕೋಟನ್ನು ನಾನು ತಲೆಯಿಂದ ಕಳಚಿಕೊಂಡಾಗ ಆತ ಮತ್ತೆ ಬಂದು ನನ್ನನ್ನು ದೂಡಿ ನೆಲಕ್ಕೆ ಕೆಡವಿ, ಗರ್ಜಿಸಿ ಅಟ್ಟಹಾಸ ಮಾಡಿದನು. ಕೆಳಗೆ ಬಿದ್ದ ನಾನು ಮೆಲ್ಲನೆದ್ದು ನೆಟ್ಟಗೆ ನಿಂತುಕೊಂಡೆ. ಗಾಳಿ ಪುನಃ ನನ್ನೆದುರು ಜಿಗಿದು ನಿಂತು ಗಟ್ಟಿಯಾಗಿ ಕಿರುಚಿದನು: "ನಿನ್ನ ದಾರಿ ಹಿಡಿ, ನಿನ್ನ ದಾರಿ ಹಿಡಿ!" ನನಗಿಂತಲೂ ಬಲಶಾಲಿಯಾದ ಈತನನ್ನು ಪ್ರತಿಭಟಿಸುವುದು ಸಾಧ್ಯವಿಲ್ಲೆಂದು ಕಂಡುಕೊಂಡು ನಾನು ನನ್ನ ದಾರಿಯನ್ನು ಹಿಡಿದೆನು.

"News From Israel" ಕೃಪೆಯಿಂದ

ನಗರಕ್ಕೆ ಮರಳಿ ಬಂದು ನನ್ನ ಮನೆಯನ್ನು ಹೊಕ್ಕೆ. ಸಮಾಧಾನವಾಗದೆ ಪುನಃ ಹೊರಗೆ ಬಂದೆ. ನನಗರಿವಿಲ್ಲದಂತೆಯೆ ನನ್ನ ಕಾಲುಗಳು ನನ್ನನ್ನು ತಾಲ್ಬಿಯಾತ್‌ಗೆ ಹೊತ್ತೊಯ್ದುವು. ಮೊದಲು ನಾನಲ್ಲಿ ಬಂದಿದ್ದಾಗ ಗಾಳಿ ಮಾಡಿದ್ದೆಲ್ಲ ಜ್ಞಾಪಕಕ್ಕೆ ಬಂತು. ಕೆನ್‌ವಾಸ್ ಬಟ್ಟೆಗಳು, ದಾರಗಳೆಲ್ಲವನ್ನು ತಂದು ನನಗಾಗಿ ಡೇರೆಯೊಂದನ್ನು ಹಾಕಿಕೊಂಡೆ; ಗಾಳಿ, ಬಿರುಗಾಳಿದೆಸೆಯಿಂದ ನಿರಾಶ್ರಿತನಾಗಬಾರದೆಂದು.

ಒಂದು ರಾತ್ರಿ ನಾನಲ್ಲಿ ವಸತಿ ಮಾಡಿದೆ. ಅಂದು ದೀಪ ಒಮ್ಮೆಲೆ ಆರಿಹೋಯಿತು. ಯಾರು ಹೀಗೆ ದೀಪವನ್ನು ಆರಿಸಿದವರೆಂದು ನೋಡಲು ನಾನು ಡೇರೆಯೆ ಹೊರಗೆ ಬಂದೆ. ಅಲ್ಲಿ ಗಾಳಿ ನಿಂತಿದ್ದನ್ನು ಕಂಡೆ.

"ನಿನಗೇನು ಬೇಕು ?" ಎಂದು ಕೇಳಿದೆ.

ಆತ ನನ್ನ ಕಿವಿಗಳಿಗೆ ಗುದ್ದುಕೊಟ್ಟು ಮೋರೆಯ ಮೇಲೆ ಬೀಸಿ ಹೊಡೆದನು. ಆಗ ನಾನು ಮತ್ತೆ ಡೇರೆಯನ್ನು ಹೊಕ್ಕೆ. ಅವನು ನನ್ನ ಡೇರೆಯ ಗೂಟಗಳನ್ನು ಹೊರಕ್ಕೆಳೆದ, ದಾರಗಳನ್ನು ಕಿತ್ತ, ಇಡೀ ನನ್ನ ಡೇರೆಯನ್ನೆ ಎತ್ತಿ ತಿರುಗಿಸಿ ಕೆನ್‌ವಾಸ್ ಬಟ್ಟೆಗಳನ್ನು ಹರಿದು ಚಿಂದಿ ಮಾಡಿದ; ಬಳಿಕ ನನ್ನತ್ತ ತಿರುಗಿ ನನ್ನನ್ನು ಘಾಸಿ ಮಾಡಿ ಕೆಳಗೆ ಕೆಡವಿದ.

ಲೇಖಕರು



ಅವನ ಶಕ್ತಿಯನ್ನು ನನ್ನ ಶಕ್ತಿ ಸರಿಗಟ್ಟುವುದು ತೀರ ಅಸಾಧ್ಯವೆಂದು ತಿಳಿದು ನಾನು ಎದ್ದು ನಗರಕ್ಕೆ ಹಿಂತಿರುಗಿದೆ.

ನಗರಕ್ಕೆ ಮರಳಿ ನಗರದ ಗೋಡೆಗಳ ಹಿಂದೆ ಇರತೊಡಗಿದೆ. ಆದರೆ ಮನಸ್ಸು ಅಸ್ವಸ್ಥವಾಯಿತು. ಶುದ್ಧವೂ ಸೌಮ್ಯವೂ ಆದ ಹವೆಯಿರುವ ಸ್ಥಳಕ್ಕಾಗಿ ಪರಿತಪಿಸತೊಡಗಿದೆ. ಮತ್ತೆಲ್ಲಿಯೂ ತಾಲ್ಬಿಯಾತ್‌ನಲ್ಲಿ ಇದ್ದಂಥ ಹವೆಯಿರದ್ದರಿಂದ ಅಲ್ಲಿಗೇ ತೆರಳಿದೆ. ಗಾಳಿ ಪುನಃ ನನ್ನನ್ನು ಬೆದರಿಸಲಿಕ್ಕಿಲ್ಲೆಂದು ಎಣಿಸಿ ಕೆಲವು ಮರದ ಹಲಗೆಗಳನ್ನು ಜತೆಯಲ್ಲಿ ತಂದು ನನಗಾಗಿ ಒಂದು ಗುಡಿಸಲನ್ನು ಕಟ್ಟಿಕೊಂಡೆ. ನನಗಿನ್ನು ವಿಶ್ರಾಂತಿಯ ಸ್ಥಳ ಸಿಕ್ಕಿತೆಂದು ನಾನೆಣಿಸಿಕೊಂಡೆ. ಆದರೆ ಗಾಳಿ ಬೇರೆಯೆ ಭಾವಿಸಿದ್ದ. ಆ ದಿನ ಗಾಳಿ ತುಂಬ ಕಷ್ಟದಿಂದ ನನ್ನ ಗುಡಿಸಲಿನ ಛಾವಣಿಯನ್ನೂ ಗೋಡೆಗಳನ್ನೂ ಬಹು ಶಿಥಿಲಗೊಳಿಸಿದ. ಒಂದು ರಾತ್ರಿ ಆತ ನನ್ನ ಇಡೀ ಗುಡಿಸಲನ್ನೇ ಕಿತ್ತೊಯ್ದ.

ನನ್ನ ಗುಡಿಸಲನ್ನು ಕಿತ್ತು ಆತ ನನ್ನನ್ನು ನಿರಾಶ್ರಿತನನ್ನಾಗಿ ಮಾಡಿಹೋದ. ನಾನು ಮತ್ತೆ ನಗರಕ್ಕೆ ಮರಳಿದೆ.

ಮೊದಲ ಮತ್ತು ಎರಡನೆಯ ಬಾರಿ ನನಗೇನಾಗಿತ್ತೊ ಅದೇ ಮೂರನೆಯ ಬಾರಿಯೂ ಆಯಿತು. ನಗರಕ್ಕೆ ಮರಳಿದ ನನಗೆ ಶಾಂತಿಯಿರಲಿಲ್ಲ. ಹೃದಯ ನನ್ನನ್ನು ನಾನು ಯಾವ ಸ್ಥಳದಿಂದ ಓಡಿಸಲ್ಪಟ್ಟಿದ್ದೆನೊ ಅದೇ ಸ್ಥಳಕ್ಕೆ ಮರಳಿ ಓಡಿಸಿತ್ತು.

ನಾನದಕ್ಕೆ ಹೇಳಿದೆ : "ಯಾವ ಸ್ಥಳದಿಂದ ನಮ್ಮ ಉಚ್ಚಾಟನೆಯಾಯಿತೊ ಅದೇ ಸ್ಥಳಕ್ಕೆ ಮರಳುವುದು ಅಸಾಧ್ಯವೆಂಬುದು ನಿನಗೆ ತಿಳಿಯದೆ ?" ಆದರೆ ನಾನು ಸಾವಿರ ಸಲ 'ಅಸಾಧ್ಯ' ಎಂದರೂ ಹೃದಯ ಸಾವಿರ ಏಕೆ, ಸಾವಿರದ

ಒಂದು ಸಲು "ಇದು ಸಾಧ್ಯ" ಎಂದೇ ನುಡಿಯಿತು.

ತಾಲ್ಪಿಯಾತ್‌ನಲ್ಲಿ ಕಲ್ಲು, ಮರಮುಟ್ಟುಗಳಿಂದ ನನಗಾಗಿ ಒಂದು ಮನೆಯನ್ನು ಕಟ್ಟಿಕೊಂಡೆ.

ಚಿಕ್ಕದಾದ ನನ್ನ ಮನೆಯನ್ನು ನಾನು ಹೊಗಳಲಾರೆ. ಆದರೂ ಇದಕ್ಕಿಂತ ದೊಡ್ಡ ಮನೆಗಳಿರುಹವಾದರೂ ನನ್ನದು ಚಿಕ್ಕದೆಂದು ನಾನು ಲಜ್ಜಿತನಾಗಿಯೂ ಇಲ್ಲ. ನನ್ನದು ಚಿಕ್ಕ ಮನೆಯಾದರೂ ಆಡಂಬರದಲ್ಲಿ ಹೆಚ್ಚಿನ ಆಸಕ್ತಿಯಿಲ್ಲದ ನನ್ನಂಥವನಿಗೆ ಸಾಕಾಗುವಷ್ಟು ಸ್ಥಳ ಇದರಲ್ಲಿತ್ತು.

ನಾನು ಮನೆಯನ್ನು ಕಟ್ಟಿದ್ದನ್ನು ಕಂಡ ಗಾಳಿ ಬಂದು ಕೇಳಿದನು :

"ಇದು ಏನು ?"

ನಾನೆಂದೆ : "ಇದು ಒಂದು ಮನೆ."

ಆತ ನಗುತ್ತ ಹೇಳಿದ : "ಮನೆಯೆಂಬ ಹೆಸರಿನ ಇಂಥ ಹಾಸ್ಯಾಸ್ಪದ ವಸ್ತುವನ್ನು ನಾನು ಇದು ವರೆಗೂ ಕಂಡಿಲ್ಲ." ನಾನೂ ನಕ್ಕು, "ಯಾವುದನ್ನು ನೀನು ಹಿಂದೆ ನೋಡಿಲ್ಲವೂ ಅದು ನಿನ್ನಿದಿರಿನಲ್ಲಿಯೆ ಈಗ ನಿಂತಿದೆ" ಎಂದೆ.

ಆತ ನಕ್ಕ. "ಏನಿದು, ಇದು ಕವಿತೆಯೆ ?" ಎಂದ.

ನಾನೂ ನಕ್ಕು "ಒಂದು ಮನೆ, ಒಂದು ಮನೆ" ಎಂದೆ.

ಪುನಃ ನಕ್ಕು ಆತ, "ಸರಿ. ನಾನು ಹೋಗಿ ಪರೀಕ್ಷಿಸಿ ನೋಡುತ್ತೇನೆ" ಎಂದ.

ಆತ ತನ್ನ ಕೈ ಚಾಚಿ ಬಾಗಿಲನ್ನು ಪರೀಕ್ಷಿಸಿದ. ಆತನ ಸ್ಪರ್ಶಕ್ಕೆ ಬಾಗಿಲು ಮುರಿದು ಬಿದ್ದಿತು. ಆತ ಕೈಚಾಚಿ ಕಿಟಕಿಗಳನ್ನು ಪರೀಕ್ಷಿಸಿದಾಗ ಅವೂ ಮುರಿದುಬಿದ್ದವು. ಕೊನೆಯದಾಗಿ ಆತ ಜಿಗಿದು ಛಾವಣಿಗೆ ಹೋದ. ಅವನು ಮೇಲೆ ಹೋದ, ಛಾವಣಿ ಕೆಳಗೆ ಬಂತು.

ಗಾಳಿ ನನ್ನೆಡೆ ನೋಡಿ ನಕ್ಕು ಕೇಳಿದ, "ಎಲ್ಲಿದೆ ನೀನು ಕಟ್ಟಿದ ಮನೆ?"

"ಎಲ್ಲಿತ್ತು ನನ್ನ ಮನೆ?" ನಾನೂ ಕೇಳಿದೆ. ಈ ಸಲ ಮಾತ್ರ ನಾನು ನಗಲಿಲ್ಲ.

ಮೊದಮೊದಲು ಗಾಳಿ ನನ್ನನ್ನು ದೂರ ಓಡಿಸುತ್ತಿದ್ದಾಗ ನಾನು ನಗರಕ್ಕೆ ಹಿಂತಿರುಗುತ್ತಿದ್ದೆ. ಕೊನೆಗೇನಾಯಿತೆಂದರೆ ನಾನು ನಗರಕ್ಕೆ ಹಿಂತಿರುಗುವುದೇ ನಿಂತುಹೋಯಿತು. ಪ್ರತಿ ಸುತ್ತಿನಲ್ಲೂ ನನಗೆ ನಿರಾಶೆ ಬಂತು. ಏನು ಮಾಡುವುದೆಂದು ನನಗೆ ತಿಳಿಯಲಿಲ್ಲ. ನಗರದ ಘಟನೆಯಿಂದ ನಗರಕ್ಕೆ ಮರಳುವುದು ಅಸಾಧ್ಯವಾಗಿತ್ತು. ಗಾಳಿ ನನ್ನನ್ನು ದಬ್ಬುತ್ತಿದ್ದುದರಿಂದ ತಾಲ್ಪಿಯಾತ್‌ಗೆ ಮರುಳುವುದೂ ಅಸಾಧ್ಯವಾಗಿತ್ತು. ನನಗಾಗಿ ಹಾಕಿಕೊಂಡ ಡೇರೆ ಮತ್ತು ಗುಡಿಸಲು ಕೊನೆತನಕ ಉಳಿಯಲಿಲ್ಲ. ನನಗಾಗಿ ಕಟ್ಟಿಕೊಂಡ ಪುಟ್ಟ ಮನೆಯು ಗಾಳಿಯಲ್ಲಿ ನಿಲ್ಲಲಿಲ್ಲ. ಮನೆ ಚಿಕ್ಕದೂ ದುರ್ಬಲವೂ ಆಗಿದ್ದುದರಿಂದ ಅದು ಗಾಳಿಯಲ್ಲಿ ನಿಂತಿರಲಿಕ್ಕಿಲ್ಲ. ಮನೆ ದೊಡ್ಡದೂ ಗಟ್ಟಿಮುಟ್ಟೂ ಆಗಿದ್ದರೆ ನಿಲ್ಲುತ್ತಿತ್ತೋ ಏನೊ. ನಾನು ಗಟ್ಟಿಮುಟ್ಟಾದ ಮರ-ಜಂತಿಗಳನ್ನೂ ದೊಡ್ಡ ದೊಡ್ಡ ಕಲ್ಲು ಚಪ್ಪಡಿಗಳನ್ನೂ ಗಾರೆ ಸಿಮೆಂಟುಗಳನ್ನೂ ತರಿಸಿ ಯೋಗ್ಯ ಕೆಲಸಗಾರರನ್ನು ನೇಮಿಸಿ ಅವರ ಕೆಲಸವನ್ನು ರಾತ್ರಿ ಹಗಲು ಕಣ್ಣಿಟ್ಟು ಕಾಯತೊಡಗಿದೆ. ಈ ಸಲ ನೆಲಗಟ್ಟು ತುಂಬ ಆಳವಾಗಿರಬೇಕು ಎಂದು ತಿಳಿಯುವಷ್ಟು ಬುದ್ಧಿ ನನಗಿತ್ತು.

ಮನೆ ಕಟ್ಟಿಯಾಯಿತು. ಅದು ದೃಢವೂ ಸುಭದ್ರವೂ ಆಗಿ ನೆಲದ ಮೇಲೆ ತಲೆಯೆತ್ತಿ ನಿಂತುಕೊಂಡಿತು.

*

ಮನೆ ಪೂರ್ಣವಾದಾಗ ಗಾಳಿ ಬಂದು ಬಾಗಿಲನ್ನು ಬಡಿದು ಸದ್ದು ಮಾಡಿದ.

"ಯಾರದು ನನ್ನ ಕಿಟಕಿ ಬಾಗಿಲನ್ನು ಗುದ್ದುತ್ತಿರುವುದು ?" ನಾನು ಕೇಳಿದೆ.

ಗಾಳಿ ತುಂಟನಗೆ ನಕ್ಕು ಹೇಳಿದ, "ನೆರೆಮನೆಯವ."

"ಇಂಥ ಬಿರುಗಾಳಿ ರಾತ್ರಿಯಲ್ಲಿ ಒಬ್ಬ ನೆರೆಮನೆಯವನಿಗೆ ಮತ್ತೊಬ್ಬನಿಂದ ಏನು ಬೇಕಾಗಿದೆ ?"

"ತನ್ನ ಹೊಸಮನೆಯಲ್ಲಿರುವ ನೆರೆಯವನಿಗೆ ಶುಭ ಕೋರಲು ಬಂದಿದ್ದಾನೆ."

ನಾನು ಕೇಳಿದೆ, "ಹೀಗೆ ಕಳ್ಳನಂತೆ ಕಿಟಿಕಿಯ ಮೂಲಕ ಬರುವುದು ಆ ನೆರೆಯವನ ಅಭ್ಯಾಸವೇ ?"

ಅವನು ಸುತ್ತಿ ಬಂದು ಬಾಗಿಲನ್ನು ಗುದ್ದಿದ.

"ಯಾರದು ನನ್ನ ಬಾಗಿಲನ್ನು ಗುದ್ದುತ್ತಿರುವುದು ?"

"ನಾನು, ನಿನ್ನ ನೆರೆಮನೆಯವನು," ಗಾಳಿ ಹೇಳಿದ.

"ನನ್ನ ನೆರೆಮನೆಯವನೆ ? ದಯಮಾಡಿ ಒಳಗೆ ಬಾ."

"ಬಾಗಿಲಿಗೆ ಬೀಗ ಹಾಕಿದೆಯಲ್ಲ ?"

"ಹೀಗೋ ! ನಾನು ಬೀಗ ಹಾಕಿದ್ದಿರಬೇಕು."

"ಬಾಗಿಲು ತೆರೆ."

"ಚಳಿಯಿಂದ ನಡುಗುತ್ತಿದ್ದೇನೆ. ಸೂರ್ಯ ಮೇಲಕ್ಕೆ ಬರುವ ವರೆಗೆ ಕಾಯುತ್ತಿರು. ನಂತರ ನಿನ್ನನ್ನು ಒಳಗೆ ಕರೆದುಕೊಳ್ಳುತ್ತೇನೆ."

*

ಸೂರ್ಯ ಮೇಲಕ್ಕೆ ಬಂದಾಗ ಅವನನ್ನು ಒಳಗೆ ಬಿಡಲೆಂದು ನಾನು ಹೊರಗೆ ಬಂದೆ. ಆದರೆ ನನಗಾತ ಕಾಣಲಿಲ್ಲ. ನನ್ನ ಮನೆಯ ಮುಂದೆ ನಿಂತುಕೊಂಡು ಸುತ್ತಲೂ ಹಬ್ಬಿದ್ದ ನಿರ್ಜನ ಭೂಮಿಯನ್ನು ನೋಡಿದೆ. ಒಂದೂ ಮರವಿಲ್ಲ. ಒಂದೂ ಹಸಿರೆಲೆ ಇಲ್ಲ. ಬರೀ ಉಸುಬು ಮತ್ತು ಕಲ್ಲುಗಳು.

"ಇಲ್ಲೊಂದು ತೋಟ ಮಾಡುವೆನು" ನನ್ನಷ್ಟಕ್ಕೇ ಅಂದುಕೊಂಡೆ.

ಹಾರೆಯನ್ನು ತೆಗೆದುಕೊಂಡು ನೆಲವನ್ನು ಅಗೆಯಲಾರಂಭಿಸಿದೆ. ಮಣ್ಣು ಹದವಾದ ಬಳಿಕ ಕೆಲವು ಸಸಿಗಳನ್ನು ತಂದೆ. ಮಳೆ ಬಂದು ಸಸಿಗಳಿಗೆ ನೀರನ್ನು ಒದಗಿಸಿ ತೇವ ತುಂಬಿದ ಇಬ್ಬನಿಗಳು ಬಂದವು. ಸಸಿಗಳು ಬೆಳೆದವು. ಸೂರ್ಯ ಅವುಗಳಿಗೆ ಆರೋಗ್ಯಕರ ಆಹಾರದಂಥ ಬಿಸಿಲನ್ನು ಕೊಟ್ಟ. ಸಸಿಗಳು ಬೆಳೆದು ಹೂಗಳನ್ನಿತ್ತವು. ಹೆಚ್ಚು ಸಮಯ ಕಳೆಯದೆ ಆ ಪುಟ್ಟ ಸಸಿಗಳು ಹಲವು ರೆಂಬೆಗಳನ್ನುಳ್ಳ ಮರಗಳಾದವು.

ಒಂದು ಬೆಂಚು ತಯಾರಿಸಿ ಮರಗಳ ಅಡಿ ಇಟ್ಟು, ನೆರಳಲ್ಲಿ ಕುಳಿತುಕೊಂಡೆ.

ಒಂದು ರಾತ್ರಿ ಗಾಳಿ ಮರಳಿ ಬಂದ. ಬಂದವನೇ ಮರಗಳ ಮೇಲೆ ಎರಗಿದ. ಮರಗಳು ಆತನೆಡೆ ತಿರುಗಿ ಎರಗಿದವು. ಗಾಳಿ ಮತ್ತೆ ಎದ್ದು ಮರಗಳನ್ನು ಅಲುಗಾಡಿಸಿದ. ಮರಗಳು ವಿರೋಧಿಸಿ ಪುನಃ ಅವನನ್ನು ಹಿಮ್ಮೆಟ್ಟಿಸಿದವು. ಗಾಳಿಗೆ ಶ್ವಾಸವನ್ನೇ ಕಳೆದುಕೊಂಡಂತಾಗಿ ತಿರುಗಿ ದೂರ ಹೋದನು.

ಆ ಗಳಿಗೆಯಿಂದ ಗಾಳಿ ಬಹಳ ಶಾಂತನಾಗಿದ್ದಾನೆ. ದೈನ್ಯದಿಂದ ಕೂಡಿದ್ದಾನೆ, ಕ್ಷೀಣನಾಗಿದ್ದಾನೆ. ಯಾವಾಗ ಬಂದರೂ ಯೋಗ್ಯ ರೀತಿಯಿಂದ ವರ್ತಿಸುತ್ತಿದ್ದ. ಆದ್ದರಿಂದ ನಾನೂ ಅವನೊಡನೆ ಯೋಗ್ಯ ರೀತಿಯಿಂದ ವರ್ತಿಸತೊಡಗಿದೆ. ಅವನು ಬಂದಾಗ ಅವನನ್ನು ಎದುರುಗೊಳ್ಳಲು ಹೊರಗೆ ಹೋಗುತ್ತಿದ್ದೆ. ಮರಗಳ ಕೆಳಗಿದ್ದ ಬೆಂಚಿನ ಮೇಲೆ ನನ್ನ ಬಳಿಯಲ್ಲಿ ಕೂಡ್ರಲು ಹೇಳುತ್ತಿದ್ದೆ. ಅವನು ಬಂದು ನನ್ನ ಬಳಿ ಕೂಡ್ರುತ್ತಿದ್ದನು. ಬಂದಾಗಲೆಲ್ಲ ಪರ್ವತಗಳಿಂದ, ಬೆಟ್ಟ ಕಣಿವೆಗಳಿಂದ ಹಿತವಾದ ಸುವಾಸನಾಭರಿತ ಗಾಳಿಯನ್ನು ತಂದು ತಂದು. ನನ್ನ ಸುತ್ತಲೂ ಬೀಸಣಿಗೆಯಂತೆ ಮೃದುವಾಗಿ ಬೀಸುತ್ತಿದ್ದನು. ಆತ ಆತ್ಮೀಯತೆಯಿಂದ ವರ್ತಿಸುತ್ತಿದ್ದುದರಿಂದ ನಾನು ಒಮ್ಮೆಯೂ ಅವನ ಹಿಂದಿನ ಕೃತ್ಯಗಳನ್ನು ನೆನೆಯಲಿಲ್ಲ. ಮತ್ತು ಒಳ್ಳೆಯ ನೆರೆಮನೆಯವನಿಗೆ ಹೇಳುವಂತೆ "ಮತ್ತೆ ಬಾ" ಎಂದು ಆಮಂತ್ರಣವೀಯುತ್ತಿದ್ದೆ. ಮತ್ತು ನಾವೀಗ ನಿಜವಾಗಿಯೂ ಆತ್ಮೀಯ ನೆರೆಹೊರೆಯವರಾಗಿದ್ದೇವೆ. ನಾನು ಅವನನ್ನು ತುಂಬ ಮೆಚ್ಚುತ್ತೇನೆ. ಅವನೂ ನನ್ನಲ್ಲಿ ಆತ್ಮೀಯ ಭಾವವನ್ನು ಹೊಂದಿರಬೇಕು.

*



ಒಂದು ಅಪ್ರತಿಮ ಸಾಹಸದ
ಎಂಜನಿಯರಿಂಗ್ ಕಥೆ

# ನ್ಯೂಬಿಯಾದ ನಿಧಿ ಪಾರಾಯಿತು

ಪಾ. ವೆಂ.

ಮ[illegible] ಜಲಪೂ-ರ್ಣವಾಗಿದೆ. ಹಗಲೂ ರಾತ್ರಿ ಜನರು ದುಡಿಯುತ್ತಿದ್ದಾರೆ. ಭಾರಿ ಬಂಡೆಗಳ್ಲ ಬಳಿ ಪ್ರಚಂಡ ದೇಹಿಗಳು ನಿಂತಿವೆ. ಕೆಳಗೆ ಬಂಡೆಗಲ್ಲನ್ನು ಸಿಗಿ

ಸಿಗಿದು ಹೋಳುಗಳಾಗಿ ಮಾಡುತ್ತಿದ್ದಾರೆ. ಅಕೋ, ಕಲ್ಲಿನ ಮುಖವೊಂದನ್ನು ಡಿರಿಕ್ಕು ಮೇಲೆತ್ತುತ್ತಿದೆ. ಅದರ ತೂಕವೇ ೧೯ ಟನ್ ಇದೆ. ಮುಗುವನ್ನು ಎತ್ತುವಷ್ಟೇ ಜೋಕೆಯಿಂದ, ಮೆದುವಾಗಿ ಅದನ್ನೆತ್ತಿ ಮೆಲ್ಲಗೆ ತಿರುಗಿ ಡೆರಿಕ್ಕು ಅದನ್ನು ಹತ್ತಿರವೇ ಇದ್ದ ಪ್ರಚಂಡ ಲಾರಿಯ ಮೇಲೆ ಹೂವನ್ನಿಟ್ಟಂತೆ ಇಡುತ್ತಿದೆ. ಲಾರಿ ಸಾವಕಾಶವಾಗಿ ಸಾಗುತ್ತಿದೆ.

ಅದು ರಾಮ್ಸೆಸ್ಸನ ಶಿಲಾಮೂರ್ತಿಯ ಮುಖ. ಇದು ಪರ್ವತ ಪ್ರಾಯವಾದ [ಅಬು ಸಿಂಬಲ್ ಅಖಂಡ ಶಿಲಾ ದೇವಾಲಯವನ್ನು ರಕ್ಷಿಸುತ್ತಿರುವ ಒಂದು ದೃಶ್ಯ; ೩೨ ಶತಮಾನಗಳಿಂದ ಅದು ಇದ್ದ ಸ್ಥಾನದಿಂದ ಅದನ್ನು ಕತ್ತರಿಸಿ ತೆಗೆದು ನದೀ ತೀರದಿಂದ ದೂರದಲ್ಲಿ ಪುನಃ ಯಥಾವತ್ತಾಗಿ ನಿರ್ಮಿಸುವ ಸಾಹಸದ ಒಂದು ದಿನದ ನೋಟ. ಈ ಸಾಹಸ ಪೂರ್ತಿಯಾಗುವ ಮೊದಲು ಒಟ್ಟು ೩,೬೦,೦೦೦ ಟನ್ ಕಲ್ಲುಬಂಡೆ ಸಿಗಿಯಲ್ಪಡುವುದು. ಎರಡು ದೇವಾಲಯಗಳ ೩೦,೦೦೦ ಟನ್ ಕಲ್ಲನ್ನು ೦೦೦೦ ಕ್ಕೂ ಹೆಚ್ಚು ಹೋಳುಗಳಾಗಿ ಮಾಡಿ ಒಂದು ಫರ್ಲಾಂಗ್ ದೂರ ಒಯ್ದು ಪುನಃ ಜೋಡಿಸಲಾಗುವುದು. ಕೆಲ ಹೋಳುಗಳು ೩೩ ಟನ್ನುಗಳಷ್ಟೂ ಆಗಬಹುದು. ಆದರೆ ಈಗ ಆ ಎಂಜಿನಿಯರಿಂಗ್ ಸಾಹಸ ಪೂರ್ತಿಯಾಗಬಂದಿದೆ. ಈ ಸ್ಥಾನಾಂತರ ಸಾಹಸವು ಈ ದೇವಾಲಯಗಳನ್ನು ಬಂಡೆಯಲ್ಲಿ ಕಡೆದ ಇಜಿಪ್ತಿನ ಎರಡನೇ ರಾಮ್ಸೆಸ್ ಚಕ್ರವರ್ತಿಯ ಶಿಲ್ಪಿಗಳ ಸಾಹಸಕ್ಕಿಂತ ಸ್ವಲ್ಪವೇ ಎಡವಾಗಿದೆ ಅಷ್ಟೇ.

**ದೇವಾಲಯದ ಕಥೆ:** ಪ್ರಾಚೀನ ಇಜಿಪ್ತಿಯನ್ನರು ಆಧುನಿಕ ಅಮೇರಿಕನ್ನರಂತೆ 'ಮಹಾ'ಗಳ ಭಕ್ತರಾಗಿದ್ದರು. ಉತ್ತರ ಇಜಿಪ್ತಿನ ಮಳಲುಗಾಡಿನ ನಡುವೆ ತಲೆಯೆತ್ತಿ ನಿಂತ ಪರ್ವತಸದೃಶ ಪಿರಾಮಿಡ್ಡುಗಳನ್ನು ಎಲ್ಲರೂ ಬಲ್ಲರು. ಇವು ಇಜಿಪ್ತಿನ ಚಕ್ರವರ್ತಿಗಳು ತಮಗಾಗಿ ಕಟ್ಟಿಸಿಟ್ಟುಕೊಂಡ ಗೋರಿಗಳಾಗಿದ್ದವು. ಇಂಥಾ ಮಹಾ [illegible] ಎರಡನೇ ರಾಮ್ಸೆಸ್ ಅದ್ವಿತೀಯನೇ ಆಗಿದ್ದಾನೆ. ಈತ ಕ್ರಿಸ್ತಪೂರ್ವ ೧೨೩೦ ರಿಂದ ೬೭ ವರ್ಷ ಕಾಲ ರಾಜ್ಯವನ್ನಾಳಿ ಹಿಂದಿನ ಯಾವ ಚಕ್ರವರ್ತಿಗೂ ಮೀರಿದ ಸ್ಮಾರಕಗಳನ್ನು ನಿರ್ಮಿಸಿ ಹೋದ. ನೈಲ್ ನದಿಯ ತೀರದಲ್ಲಿ ನ್ಯೂಬಿಯಂದ ಮರಳುಗಾಡಿನ ನಡುವೆ ಅವನು ನಿರ್ಮಿಸಿದ ಅಬು ಸಿಂಬಲ್ ಬಂಡೆಗಲ್ಲಿನ ದೇವಾಲಯಗಳು ಅವುಗಳಲ್ಲೆಲ್ಲ ಅತಿ ಪ್ರಕಾಂಡವಾದವುಗಳು.

ಏಶಿಯದಿಂದ ಇಜಿಪ್ತಿನ ಸಾಮ್ರಾಜ್ಯದ ಅಂಚುಗಳಲ್ಲಿ ಹಾವಳಿ ಎಬ್ಬಿಸುತ್ತಿದ್ದ ಹಿಟ್ಟೈಟ್ ಆರ್ಯದಾಳಿಗಾರರನ್ನು ತಡೆಗಟ್ಟುವುದರಲ್ಲಿ ಜೀವಮಾನವೆಲ್ಲ ಮಗ್ನನಾಗಿದ್ದ ಈ ರಾಜ ತನ್ನನ್ನು ದೇವತೆಯೆಂದೇ ತಿಳಿದುಕೊಂಡಿದ್ದ. ತನ್ನ ಆಳಿಕೆಯ ೩೦ನೇ ವರ್ಧಂತಿ ಕಾಲದಲ್ಲಿ ತನ್ನ ಕೀರ್ತಿಯನ್ನೂ ದೈವತ್ವವನ್ನೂ ಶಾಶ್ವತವಾಗಿ ಮಾಡಲು ಆತ ಏನಾದರೊಂದು ರಚನೆಯ ಯೋಜನೆ ಹಾಕಿದ. ಅವನ ಪುರೋಹಿತರೂ ಪಂಡಿತರೂ ಎಂಜಿನಿಯರರೂ ಇಜಿಪ್ತಿನ ಉದ್ದಗಲವನ್ನೆಲ್ಲ ಅರಸಿ ನ್ಯೂಬಿಯದಲ್ಲಿ ನೈಲ್ ನದೀ ತೀರದಲ್ಲಿ ಬೆಳೆದ ಬಂಡೆಗಲ್ಲುಗಳನ್ನು ಕೊರೆದು ಹಿಂದಿಲ್ಲ ಮುಂದಿಲ್ಲವೆಂಬಂತೆ ವಾಸ್ತುವೊಂದನ್ನು ನಿರ್ಮಿಸುವುದೇ ರಾಮ್ಸೆಸ್ ಕೀರ್ತಿಗೆ ತಕ್ಕ ಸ್ಮಾರಕವೆಂದು ಸೂಚಿಸಿದರು.

ಈಗಿನ ಕಾಲದಲ್ಲಾದರೂ ಈ ಗಾತ್ರದ ದೇವಾಲಯ ನಿರ್ಮಿಸಬೇಕಾದರೆ ಕಾಗದದ ಮೇಲೆ ಅದರ ಹೊಳಹು ಹಾಕಲು ಐದು ವರ್ಷಗಳು ಬೇಕೆಂದು ಬಲ್ಲವರು ಹೇಳುತ್ತಾರೆ. ಅದನ್ನು ಕತ್ತರಿಸಿ ಬೇರೆಡೆಗೆ ಸಾಗಿಸಲು ಆಧುನಿಕ ಯಂತ್ರಸಜ್ಜಿತ ಕುಶಲ ಎಂಜಿನಿಯರರೂ ೩,೦೦೦ ಜನ ಕೆಲಸಗಾರರೂ ಒಂದೂವರೆ ವರ್ಷ ಕಾಲ ದಿನಕ್ಕೆ ೨೦ ಗಂಟೆ ಶ್ರಮಿಸಿದರೆಂದ ಮೇಲೆ ಇದರ ನಿರ್ಮಾಣಕ್ಕೆ ತಗಲಿದ ಜನ-ಧನ-ಕಾಲಗಳ ಪರಿಮಾಣವೇನಿದ್ದೀತು! ಆವರ ಕಾಲದಲ್ಲಿ ಕಬ್ಬಿಣದ ಉಪಯೋಗವೂ ಗೊತ್ತಿರಲಿಲ್ಲ!

ಅಬು ಸಿಂಬಲ್‌ನ ದೊಡ್ಡ ದೇವಾಲಯದ [illegible] ರಾಮ್ಸೆಸ್‌ನ ಏಕರೂಪವಾದ

ನಾಲ್ಕು ಕುಳಿತ ಮೂರ್ತಿಗಳು ಕಾವಲು ಮಾಡು ತ್ತಿವೆ. ಒಂದೊಂದೂ ೬೭ ಅಡಿ ಎತ್ತರವಾದ ಈ ಮೂರ್ತಿಗಳು ಒಂದೊಂದೂ ೧,೨೦೦ ಟನ್ ಭಾರ ವಾಗಿವೆ. ಈ ನಾಲ್ಕರಲ್ಲಿ ಎರಡನೇ ಮೂರ್ತಿಯ ಮೇಲ್ಭಾಗವು, ಬಹುಶಃ ಭೂಕಂಪದಿಂದ, ಮುರಿದು ಕೆಳಗುರುಳಿದೆ — ಶತಮಾನಗಳ ಹಿಂದೆ. ಸ್ವಲ್ಪ ದೂರದಲ್ಲಿರುವ "ಚಿಕ್ಕ ದೇವಾಲಯ"ದ ಮುಂಭಾ ಗದಲ್ಲಿ ರಾಮ್ಸೆಸ್ ಮತ್ತು ಅವನ ಪ್ರಿಯ ರಾಣಿ ನೆಫರ್ತರಿಯ ಮೂರು ಮೂರು ಗೊಮ್ಮಟನ ಗಾತ್ರದ ಮೂರ್ತಿಗಳು ನಿಂತಿವೆ.

ರಾಮ್ಸೆಸ್ ಶಿಲ್ಪಿಗಳು ಈ ಕಗ್ಗಲ್ಲ ಪರ್ವತ ವನ್ನು ತಮ್ಮ ಕಂಚಿನ ಆಯುಧಗಳಿಂದ ಕೊರೆದು ಅದರ ಗರ್ಭದಲ್ಲಿ ದೇಗುಲ ನಿರ್ಮಿಸಿದರು. ಮೇಲಿನ ಶಿಲಾಪರ್ವತ ಕೆಳಗೆ ಕುಸಿಯದಂತೆ ಬಿಟ್ಟ ಕಲ್ಲು ಕಂಬಗಳಲ್ಲಿ ರಾಮ್ಸೆಸ್‌ನ ರೂಪವನ್ನು ಕೆತ್ತಿದರು. ಗೋಡೆಗಳ ಮೇಲೆ ರಾಮ್ಸೆಸನ ಜೀವನದ, ವಿಜಯಯಾತ್ರೆಗಳ ದೃಶ್ಯ ಗಳನ್ನು ಬಾಸ್ ರಿಲೀಫಿನಲ್ಲಿ ಕಡೆದರು. ಅವನ ಮಹಿಮೆಗಳ ಶಾಸನಗಳನ್ನು ಕೊರೆದರು. ಮೂರ್ತಿ ಗಳನ್ನು ಬಣ್ಣಗಳಿಂದ ಅಲಂಕರಿಸಿದರು. ಈ ಗುಡಿ ಯಲ್ಲಿ ಮೃತ್ಯುದೇವ ಓಸಿರಿಸ್ ಮೊದಲಾದ ದೇವತೆಗಳಿಗೆ ಸ್ಥಾನವಿದ್ದರೂ ಅಲ್ಲಿ ಜೀವಂತ ದೇವನಾದ ರಾಮ್ಸೆಸನೇ ಪ್ರಧಾನ ದೇವನಾಗಿದ್ದ ನೆಂಬುದರಲ್ಲಿ ಸಂದೇಹವಿಲ್ಲ. ಇಲ್ಲಿ ಸ್ವರ್ಗದ ದೇವತೆಗಳ ನಡುವೆ ಈ ಪ್ರತ್ಯಕ್ಷ ದೇವತೆ ನಿಂತಿಲ್ಲ— ಕುಳಿತಿದ್ದಾನೆ. ಅವನು ಅವರಿಗಿಂತ ಕೆಳಗಿನವ ನಲ್ಲ. ಪ್ರತಿ ವರ್ಷವೂ ಎರಡು ಬಾರಿ,— ಉತ್ತರಾ ಯಣದಲ್ಲೊಮ್ಮೆ, ದಕ್ಷಿಣಾಯನದಲ್ಲೊಮ್ಮೆ— ಉದಯಿಸುತ್ತಿರುವ ಸೂರ್ಯನು ಈ ಕಗ್ಗಲ್ಲ ಗುಹೆ ಯೊಳಗೆ ೧೮೫ ಅಡಿ ದೂರ ಹಾಯ್ದು ಬಂದು ರಾಮ್ಸೆಸನ ಮುಖವನ್ನು ತನ್ನ ಬಾಲಕಿರಣಗಳಿಂದ ಮುತ್ತಿಡುವ ಹಾಗೆ ರಾಮ್ಸೆಸನ ಪುರೋಹಿತ- ಖಗೋಲಶಾಸ್ತ್ರಿಗಳು ಇವರ ರಚನೆಗೆ ನಕ್ಷೆಹಾಕಿ ಕೊಟ್ಟಿದ್ದರು. ಪ್ರಥಮ ಬಾರಿ ಈ ವಿಗ್ರಹದ ಮೇಲೆ ಪ್ರಭಾತ ಸೂರ್ಯನ ಪ್ರಕಾಶ ಬಿದ್ದದ್ದು ಕ್ರಿ. ಪೂ. ೧೨೭೪ ಅಕ್ಟೋಬರ ೨೦ ರಂದು ಎಂದು ಲೆಕ್ಕಹಾಕಲಾಗಿದೆ. ಅಂದು ರಾಮ್ಸೆಸನ ಆಳಿಕೆಯ ೩೦ ನೇ ವರ್ಧಂತಿಯಾಗಿತ್ತು. ಇಷ್ಟು ಆಳಕ್ಕೆ ತೋಡಿ, ಅಲ್ಲಿ ಶಿಲ್ಪ, ಶಾಸನಗಳನ್ನು ಕೆತ್ತಲು, ಬಣ್ಣ ಬಳಿಯಲು ಆ ವಿದ್ಯುದ್ದೀಪ ರಹಿತ ಯುಗದಲ್ಲಿ ಯಾವ ಬೆಳಕನ್ನು ಪ್ರಯೋಗಿ ಸಿರಬಹುದು ಎಂದು ಸಂಶೋಧಕರು ಇಂದಿಗೂ ಆಶ್ಚರ್ಯಪಡುತ್ತಿದ್ದಾರೆ.

**ಮಳಲಿನ ಗರ್ಭದಲ್ಲಿ :** ದೇವಾಂಶಸಂಭೂತ ನಾದ ಚಕ್ರವರ್ತಿಯೂ ಸಾಯಬೇಕು. ರಾಮ್ಸೆಸ್ ಅಳಿದ. ಶತಮಾನಗಳು ಉರುಳಿದವು. ಇಜಿಪ್ತಿನ ಸಾಮ್ರಾಜ್ಯವೂ ಇಳಿಗಾಲವನ್ನು ಕಂಡಿತು. ಸುತ್ತ ಲಿನ ಮರುಭೂಮಿಯಿಂದ ಗಾಳಿ ಮಳಲನ್ನು ಬೀಸಿತಂದು ರಾಮ್ಸೆಸನ ದೇಗುಲಗಳ ಮುಖದಲ್ಲಿ ರಾಶಿ ಹಾಕಿದವು. ದೈತ್ಯಗಾತ್ರದ ರಾಮ್ಸೆಸ್ ಮೂರ್ತಿಗಳೂ ಮಳಲಿನಲ್ಲಿ ಹುಗಿದುಹೋದವು. ಇಲ್ಲಿ ದೇವಾಲಯವಿತ್ತೆಂಬುದೂ ಶತಮಾನಗಳಲ್ಲಿ ಮರೆತುಹೋಯಿತು. ದೇಶಸಂಚಾರಿಗಳ ವರದಿ ಗಳಲ್ಲಿ ಅವುಗಳ ಉಲ್ಲೇಖ ಕೂಡ ಇಲ್ಲದಾಯಿತು.

ಆಮೇಲೆ ೧೮೧೩ ರಲ್ಲಿ ಜಾನ್ ಬರ್ಕ್‌ಹಾರ್ಟ ನೆಂಬ ಸ್ವಿಜರ್ಲಂಡಿನ ಯಾತ್ರಿಕನು ನ್ಯೂಬಿಯ ಮರುಭೂಮಿಯಲ್ಲಿ ಸಂಚರಿಸುತ್ತಿರುವಾಗ್ಗೆ ಮಳಲು ರಾಶಿಯಿಂದ ನಸುವೆ ಹೊರಗೆ ತೋರಿಸಿ ಕೊಳ್ಳುತ್ತಿದ್ದ ರಾಮ್ಸೆಸ್ ವಿಗ್ರಹದ ತಲೆಯನ್ನು ಕಂಡನು. ಅವನ ಮತ್ತು ಇತರರ ಪ್ರಯತ್ನ ದಿಂದ, ದೇವಾಲಯದ ಮುಂದೆ ಬಿದ್ದಿದ್ದ ಮಳಲು ರಾಶಿಯನ್ನು ವರ್ಷಗಳ ಪ್ರಯತ್ನದಿಂದ ಅಗೆದು ತೆಗೆದಾಗ ಅವರು ಕಂಡದ್ದು ವಿಸ್ಮಯಕಾರಕ ವಾಗಿತ್ತು. ರಾಮ್ಸೆಸ್ ಚಕ್ರವರ್ತಿಯ ಈ ಅಗಾಧ ಕೃತಿಯ ಸುದ್ದಿ ಕೇಳಿ ಪ್ರಪಂಚದ ಮೂಲೆ ಮೂಲೆಗಳಿಂದ ಪಂಡಿತರೂ ಸಂದರ್ಶ ಕರೂ ಪ್ರತಿವರ್ಷ ಇಲ್ಲಿಗೆ ಯಾತ್ರೆ ಬೆಳಸತೊಡ ಗಿದರು. ಪ್ರಾಚೀನ ಇಜಿಪ್ತಿನ ಲಿಪಿಯ ಒಗಟನ್ನು ಒಡೆದ ಮೇಲಂತೂ ನ್ಯೂಬಿಯದ ಈ ದೈತ್ಯ- ಸೃಷ್ಟಿ ಇಜಿಪ್ತಿನ ಇತಿಹಾಸದ ಮೇಲೆ ತುಂಬಾ

ಬೆಳಕು ಚೆಲ್ಲಿತು.

**ಹೊಸ ವಿಪತ್ತು :** ಅಬು ಸಿಂಬಲ್ಲಿನ ಈ ಕಲಾನಿಧಿಯನ್ನು ಮಳಲಿನ ಹೊಟ್ಟೆಯಿಂದ ಪೂರ್ಣವಾಗಿ ಹೊರ ತೆಗೆದದ್ದು ೧೯೧೦ರ ಸುಮಾರಿಗೆ. ಒಂದು ನೂರು ವರ್ಷದ ಪರಿಶ್ರಮದಿಂದ ಪ್ರಪಂಚದ ಮುಂದೆ ತೆರೆದಿಡಲ್ಪಟ್ಟ ಈ ಪ್ರಾಚೀನ ಅವಶೇಷಗಳಿಗೆ ಮುಂದೆ ಅರ್ಧ ಶತಮಾನದೊಳಗೆ ಹಿಂದೆಂದೂ ಬಾರದ ಗಂಡಾಂತರ ಬಂದೀತೆಂದು ಆಗ ಯಾರೂ ಊಹಿಸಿರಲಿಲ್ಲ. ಪ್ರಗತಿಯು ಬೆಂಬತ್ತಿದ ಇಜಿಪ್ತಿನಿಂದಲೇ ಆ ಗಂಡಾಂತರ ಬಂದಿತು.

ಬೆಳೆಯುತ್ತಿರುವ ಇಜಿಪ್ತಿನ ಜನಸಂಖ್ಯೆಗೆ ಅನ್ನವನ್ನೂ ಪ್ರಗತಿಯನ್ನೂ ದೊರಕಿಸಿಕೊಡುವ ಯತ್ನದಲ್ಲಿ ಇಜಿಪ್ತಿನ ಸರಕಾರ ನೈಲ್ ನದಿಗೆ ಆಸ್ವಾನ್‌ನಲ್ಲಿ ಎತ್ತರ ಅಣೆಕಟ್ಟು ಹಾಕಲು ನಿರ್ಧರಿಸಿತು. ಈ ಅಣೆಕಟ್ಟು ನೀರಡಿಸಿದ ಲಕ್ಷಾಂತರ ಎಕರೆಗಳಿಗೆ ನೀರನ್ನೂ ಪ್ರಜೆಗಳಿಗೆ ವಿದ್ಯುತ್ತಿನ ಮೂಲಕ ಸಂಪತ್ತನ್ನೂ ಒದಗಿಸುವ ಸಾಧನವಾಗಲಿತ್ತು. ಆದರ ಹಿಂದೆ ನಿಂತ ನೀರು ಅಣೆಕಟ್ಟಿನಿಂದ ೩೧೦ ಮೈಲು ಮೇಲಿನ ವರೆಗೆ ಸರಾಸರಿ ಆರು ಮೈಲಗಲದ ವಿಶಾಲ ಜಲಾಶಯವನ್ನು ನದಿಗುಂಟ ನಿರ್ಮಿಸಲಿತ್ತು. ಈ ಸರೋವರದಲ್ಲಿ ಆಸ್ವಾನಿನಿಂದ ೧೮೦ ಮೈಲು ಮೇಲಕ್ಕಿರುವ ಅಬು ಸಿಂಬಲ್ ದೇವಾಲಯಗಳು ಸಂಪೂರ್ಣವಾಗಿ ಮುಳುಗಿ ಹೋಗಲಿದ್ದವು.

ಜಗತ್ತಿನ ಪುರಾತತ್ವವೇತ್ತರೂ ಕಲಾಪ್ರಿಯರೂ ಇತಿಹಾಸಜ್ಞರೂ ಸುದ್ದಿ ಕೇಳಿ ಗಾಬರಿಯಾದರು. ಇಜಿಪ್ತಿಗೆ ಮಾತ್ರವೇ ಅಲ್ಲ, ಜಗತ್ತಿಗೇ ಅಮೂಲ್ಯ ಸಂಪತ್ತಾಗಿದ್ದ ಈ ಅವಶೇಷಗಳನ್ನು ವರುಣದೇವನಿಗೆ ಬಲಿ ಕೊಡುವುದೇ? ಆದರೆ ಭೂತ ಮತ್ತು ಭವಿಷ್ಯತ್ ಇವುಗಳಲ್ಲಿ ಒಂದನ್ನು ಆರಿಸಿಕೊಳ್ಳಬೇಕಾದ ಈ ಪ್ರಸಂಗದಲ್ಲಿ ಭವಿಷ್ಯತ್ತಿನ ಹಕ್ಕುಗಳನ್ನು ನಿರಾಕರಿಸಲಾದೀತೆ? ಅಣೆಕಟ್ಟನ್ನು ನಿರ್ಮಿಸಲೇ ಬೇಕಾಗಿತ್ತು. ಆದರೆ ಈ ಅವಶೇಷಗಳನ್ನು ರಕ್ಷಿಸುವುದೂ ಅಷ್ಟೇ ಮಹತ್ವದ್ದಾಗಿತ್ತು.

ತ್ರಾಯಿತ್ರಾಯಿ ಕೂಗು ಜಗತ್ತಿನೆಲ್ಲೆಲ್ಲ ಮೊಳಗಿತು. ೧೯೬೫ರೊಳಗೆ ಅಸ್ವಾನ್ ಅಣೆಕಟ್ಟಿನ ನೀರು ಅಬು ಸಿಂಬಲ್ ಅವಶೇಷಗಳನ್ನು ಮುಳುಗಿಸುವುದೆಂದು ಲೆಕ್ಕ ಹಾಕಲ್ಪಟ್ಟಿತ್ತು. ಅಷ್ಟರೊಳಗೆ ಈ ದೇವಾಲಯಗಳನ್ನು ಉಳಿಸಿಕೊಳ್ಳಬೇಕಾಗಿತ್ತು. ಸಂಯುಕ್ತರಾಷ್ಟ್ರ ಸಂಘ ಇದರಲ್ಲಿ ಆಸಕ್ತಿ ವಹಿಸಿತು. ಯುನೆಸ್ಕೋ ಬಿನ್ನಹವನ್ನು ಬಿತ್ತರಿಸಿತು. ರಾಷ್ಟ್ರಗಳು ಸಹಾಯ ಮಾಡಲು ಮುಂದೆ ಬಂದವು. ಎಂಜಿನಿಯರರು ಹಂಚಿಕೆಗಳನ್ನು ತಯಾರಿಸಿದರು.

**ಹಂಚಿಕೆಗಳು:** ಹಂಚಿಕೆಗಳೂ ಅಗಾಧವಾಗಿದ್ದವು. ಒಬ್ಬ ಅಮೇರಿಕನ್ ತಜ್ಞನ ಯೋಜನೆ ಹೀಗಿತ್ತು. ಅಬು ಸಿಂಬಲ್ ದೇವಾಲಯಗಳ ತಳದ ಬಂಡೆಯನ್ನು ಕೊರೆದು ಅದರಲ್ಲಿ ಕಾಂಕ್ರೀಟಿನ ಹಲಗೆಗಳನ್ನು ನಿರ್ಮಿಸಬೇಕು ಮತ್ತು ಅದೇ ಪ್ರಕಾರ ದೇಗುಲಗಳ ಸುತ್ತಲು ಕೆಳ ಹಲಗೆಗಳಿಗೆ ತಗಲಿಸಿ ಕಾಂಕ್ರೀಟಿನ ಗೋಡೆಗಳನ್ನು ನಿರ್ಮಿಸಬೇಕು; ಆಗ ಇದು ಅವಶೇಷಗಳು ಎರಡು ಭಾರೀ ನಾವೆಗಳಂತಾಗುವವು. ಜಲಾಶಯದಲ್ಲಿ ನೀರು ತುಂಬಿದಂತೆ ನಾವೆಗಳು ತಂತಾನೇ ತೇಲಿ ಮೇಲೇರತೊಡಗುತ್ತವೆ. ಒಬ್ಬ ಬ್ರಿಟಿಶ್ ಉತ್ಸಾಹಿಯು ದೇಗುಲಗಳನ್ನು ನೀರಲ್ಲಿ ಮುಳುಗಗೊಟ್ಟು ಸಂದರ್ಶಕರಿಗೆ ಅವುಗಳನ್ನು ಅವಲೋಕಿಸಲು ಅನುಕೂಲವಾಗುವಂತೆ ಗಾಜಿನ ಆವರಣದೊಳಗಿನ ಜಲಾಂತರ್ಗತ ನಿರೀಕ್ಷಣ ಕೇಂದ್ರವನ್ನು ನಿರ್ಮಿಸಿದರಾಯಿತೆಂದು ಸೂಚಿಸಿದನು.

ಅನೇಕ ಯೋಜನೆಗಳಲ್ಲಿ ಒಂದು ಫ್ರೆಂಚ್ ಮತ್ತು ಒಂದು ಇಟಾಲಿಯನ್ ಯೋಜನೆಗಳು ಸಾಧ್ಯತೆಯೊಳಗೆ ಇದ್ದವು. ಫ್ರೆಂಚ್ ಯೋಜನೆಯ ಪ್ರಕಾರ ದೇಗುಲಗಳ ಸುತ್ತಲೂ ಜಲಾಶಯದ ನೀರಿನ ಪರಮಾವಧಿ ಮಟ್ಟಕ್ಕಿಂತಲೂ ಎತ್ತರದ ಕಲ್ಲು ಉಸುಬುಗಳಿಂದ ಪ್ರಾಕಾರವನ್ನು ನಿರ್ಮಿಸಬೇಕಾಗಿತ್ತು. ಒಳಗೆ ಒಸರುವ ನೀರನ್ನು ಪಂಪುಗಳಿಂದ ನಿರಂತರವಾಗಿ ಹೊರಚೆಲ್ಲಬೇಕಾಗಿ

ಆದರೆ ಈ ಪಂಪಿಂಗ್ ವ್ಯವಸ್ಥೆ ಅತಿ ವೆಚ್ಚದ್ದೆಂದು ಅದನ್ನು ಕೈಬಿಡಬೇಕಾಯಿತು.

ಇಟಾಲಿಯನ್ ಯೋಜನೆಯ ಪ್ರಕಾರ ಎರಡೂ ದೇವಾಲಯಗಳ ಬುಡವನ್ನು ಕೊಯ್ದು ರಾಕ್ಷಸ ಜಾಕುಗಳ ಸಹಾಯದಿಂದ ಅವುಗಳನ್ನು ಅಖಂಡ ವಾಗಿ ಮೇಲೆತ್ತಬೇಕಾಗಿತ್ತು. ಹೀಗೆ ಎರಡು 'ಕಲ್ಲಿನ ಪರ್ವತ'ಗಳನ್ನು ಜಾಕಿನಿಂದ ಮೋಟಾರಿನ ತಳವನ್ನು ಮೇಲೆರಿಸಿದ ಹಾಗೆ ಏರಿಸುವ ಯೋಜನೆ ನಮಗೆ ಹುಚ್ಚಾಗಿ ಕಾಣಿಸಿದರೂ ಆಧುನಿಕ ಎಂಜಿನಿ ಯರರ ದೃಷ್ಟಿಯಲ್ಲಿ ಇದು ಸಾಧ್ಯಕೋಟಿಯ ಹೊರಗಿನ ಮಾತಾಗಿರಲಿಲ್ಲ. ಯುನೆಸ್ಕೋ ಸಂಸ್ಥೆಯೂ ಪುರಾತತ್ವವೇತ್ತರೂ ಈ ಯೋಜ ನೆಗೇ ಅನುಕೂಲವಾಗಿದ್ದರು. ೧೯೬೦ರಲ್ಲಿ ಈ ಯೋಜನೆಯೇ ಕಾರ್ಯ ರಂಗಕ್ಕೆ ಬರುವುದೆಂದೂ ಅನಿಸಿತ್ತು.

ಆದರೆ ವೆಚ್ಚದ ಲೆಕ್ಕ ಕೇಳಿ ಯುನೆಸ್ಕೋ ಸದ ಸ್ಯರು ಎದೆಗೆಟ್ಟರು. ಈ ಯೋಜನೆಗೆ ಒಂಭತ್ತು ಕೋಟಿ ಡಾಲರುಗಳು (ಆಗಿನ ವಿನಿಮಯ ದರ ದಂತೆ ೪೫ ಕೋಟಿ ರೂಪಾಯಿಗಳಿಗೆ ಹತ್ತಿರ) ಬೇಕಾಗುತ್ತಿದ್ದವು.

ಚರ್ಚೆಯಲ್ಲೇ ಸಾಕಷ್ಟು ಕಾಲ ಕಳೆಯಿತು. ಜಲಾಶಯದಲ್ಲಿ ನೀರೇರಿ ಬರುವ ಕಾಲ ಸಮೀಪಿಸು ತ್ತಿತ್ತು. ಕೊನೆಗೆ ಎರಡೂ ದೇಗುಲಗಳನ್ನು ತುಂಡು ತುಂಡಾಗಿ ಕಡಿದು ಬೇರೆಡೆಗೆ ಸಾಗಿಸಿ ಪುನಃ ಜೋಡಿಸುವ ಯೋಜನೆಯೊಂದು ಮುಂದೆ ಬಂತು. ಅದಕ್ಕೆ ಕೇವಲ ೩ ಕೋಟಿ ೬೦ ಲಕ್ಷ ಡಾಲರುಗಳು ಸಾಲಬಹುದಾಗಿತ್ತು. ಇದಕ್ಕೆ ಮನ್ನಣೆ ದೊರೆತು ಪ್ರಸಿದ್ಧ ಸ್ವೀಡಿಶ್ ಎಂಜಿನಿಯ ರಿಂಗ್ ಕಂಪನಿಯಾದ ವ್ಯಾಟನ್‌ಬಿಗ್‌ನಾಡ್ಸ್ ಬಿರನ್ ವಿವರಗಳನ್ನು ಅಣಿಗೊಳಿಸಿತು. ಅಂತಾ- ರಾಷ್ಟ್ರೀಯ ತಂಡವೊಂದು ಕಂಟ್ರಾಕ್ಟನ್ನು ವಹಿಸಿ ಕೊಂಡಿತು. (೧೯೬೩).

**ನವೀನ ಪಟ್ಟಣ:** ಇತಿಹಾಸದಲ್ಲೇ ಹಿಂದಿಲ್ಲದ ಈ ಕಾರ್ಯಕ್ಕಾಗಿ ಮರಳುಗಾಡಿನಲ್ಲಿ ಒಂದು ಪಟ್ಟಣವನ್ನೇ ನಿರ್ಮಿಸಬೇಕಾಯಿತು. ದೇಶ ವಿದೇಶ ಗಳಿಂದ ಬಂದ ಎಂಜಿನಿಯರು, ತಜ್ಞ ಕಲ್ಲುಕುಟಿ ಗರು, ಯಾಂತ್ರಿಕರು, ವಾಹಕರು, ಕಾರಕೂನರು, ಕೂಲಿಗಳು ಸೇರಿ ದೇವಾಲಯವನ್ನು ಕೊಯ್ಯ ತೊಡಗಿದಾಗ ೩,೦೦೦ ಜನ ಇಲ್ಲಿ ದುಡಿಯುತ್ತಿ ದ್ದರು. ಇವರಿಗಾಗಿ ಮನೆಗಳು, ಎಂಟು ಮೈಲು ಉದ್ದದ ರಸ್ತೆಗಳು, ಆಸ್ಪತ್ರೆ, ನೀರನ್ನು ಶುದ್ಧೀ- ಕರಿಸುವ ಯಂತ್ರ, ಪೋಲೀಸ್ ಠಾಣೆ, ಎಲ್ಲವೂ ನಿರ್ಮಾಣವಾಯಿತು. ಬೇಗನೇ ಅರಬಿ, ಇಂಗ್ಲಿಷ್, ಸ್ವೀಡಿಶ್, ಜರ್ಮನ್, ಇಟಾಲಿಯನ್, ಫ್ರೆಂಚ್, ಡೇನಿಶ್ ಭಾಷೆಗಳ ಕಲ ಕಲ ಕೇಳಿಸತೊಡಗಿತು. ಕೆಲವರು ಎರಡೆರಡು ವರ್ಷ ಇಲ್ಲಿ ಕಳೆಯಬೇಕಾ- ದುದರಿಂದ ಸಪರಿವಾರವಾಗಿ ಬಂದಿದ್ದರು. ೪೬ ಮಕ್ಕಳೂ ಪರಿವಾರದಲ್ಲಿ ಸೇರಿದ್ದವು. ತರುಣ ದಂಪತಿಗಳಿಗೆ ಸಂಜೆ ಕೈ ಕೈಹಿಡಿದು ನಡೆಯಲು ಒಂದು "ಮಧುಚಂದ್ರ ಮಾರ್ಗವೂ" ಇತ್ತು.

ಹೆಚ್ಚಿನ ಯಂತ್ರ ಸಾಮಗ್ರಿಗಳೆಲ್ಲ ಯುರೋಪಿ ನಿಂದ ಬರಬೇಕಾಗಿತ್ತು. ಅಲೆಗ್ಜಾಂಡ್ರಿಯಾ ಬಂದರ ದಲ್ಲಿ ಬಂದ ಸಾಮಗ್ರಿಗಳನ್ನು ನದೀ ಮೂಲಕ ಸಾಗಿಸಲು ನಾವೆಗಳ ಪಡೆಯನ್ನೇ ಹಿಡಿಯಬೇಕಾ ಯಿತು. ದುರಸ್ತಿಗಾದಿ ವರ್ಕ್‌ಶಾಪುಗಳೂ ಆದವು.

ಕಾಲ ವೇಗವಾಗಿ ಸರಿಯುತ್ತಿತ್ತು. ನೀರೇರಿ ಬರುವ ಮೊದಲೇ ದೇವಾಲಯಗಳನ್ನು ಸಾಗಿಸು ವುದು ಅಸಾಧ್ಯವೇ ಆಗಿತ್ತು. ಆದ್ದರಿಂದ ಕೆಲಸ ಮುಗಿಯುವ ವರೆಗೆ ವರುಣ ದೇವನನ್ನು ದೂರ ವಿಡಲು ಒಂದು ಅಣೆಕಟ್ಟೇ ಬೇಕಾಯಿತು. ನದೀ ಪಾತ್ರವನ್ನು ಕೆಳಗೆ ಬಂಡೆಗಲ್ಲು ಸಿಗುವ ವರೆಗೂ ಅಗೆದರು. ಉಕ್ಕಿನ ಸ್ತಂಭಗಳನ್ನು ಸಾಲುದ್ದಕ್ಕೆ ನೆಟ್ಟರು. ಕಾಂಕ್ರೀಟಿನ ತಳ ಹಾಕಿ ಕಾಂಕ್ರೀಟಿನ ಗೋಡೆ ಏರಿಸಿದರು. ಗೋಡೆಯ ಇಕ್ಕಡೆಗೂ ನೀರಿನ ಒತ್ತಡ ಸಹಿಸಲು ಜಲ್ಲಿಕಲ್ಲು-ಉಸುಬಿನ ರಾಶಿ ಹಾಕಿದರು. ಈ ತಾತ್ಕಾಲಿಕ ಅಣೆಕಟ್ಟಿಗೇ ೫,೦೪,೦೦೦ ಘನ ಗಜ ಕಲ್ಲು – ಉಸುಬು ಬೇಕಾ ಯಿತು. ದಕ್ಷಿಣದಿಂದ ಉತ್ತರಕ್ಕೆ ಎರಡೂ ದೇವಾಲ ಯಗಳನ್ನು ಅರ್ಧಚಂದ್ರಾಕೃತಿಯಲ್ಲಿ ಬಳಸಿದ ಈ ಅಣೆಕಟ್ಟು ೪೫೦ ಅಡಿ ಉದ್ದ, ೮೦ ಅಡಿ ಎತ್ತ

ರವಾಗಿತ್ತು.

ಈ ಆಣೆಕಟ್ಟು ಸಹಿತ ಅಬು ಸಿಂಬಲ್ ದೇಗುಲಗಳನ್ನು ಬಹಳ ಕಾಲ ಕಾಪಾಡುವಂತಿರಲಿಲ್ಲ. ೧೯೬೬ರ ಚಳಿಗಾಲದೊಳಗೆ ಈ ಅಣೆಕಟ್ಟಿನ ಮೇಲಿಂದಲೂ ನೀರು ತುಳುಕಿ ಒಳಗೆ ಚೆಲ್ಲುವುದು ಖಂಡಿತವಾಗಿತ್ತು.

ಆದ್ದರಿಂದ ದೇವಾಲಯಗಳನ್ನು ಕೊಯ್ಯುವುದು, ಸ್ಥಾಪಿಸತಕ್ಕ ಹೊಸ ಸ್ಥಳದ ಹತ್ತಿರ ಕೊರಕಲು ಹೋಳುಗಳನ್ನು ಒಯ್ದಿಡಲು ನೆಲ ಅಣಿ ಮಾಡುವುದು, ಅಣೆಕಟ್ಟು ಕಟ್ಟುವುದು ಎಲ್ಲವೂ ಏಕಕಾಲದಲ್ಲಿ ನಡೆಯಬೇಕಾಗಿತ್ತು. ದೇವಾಲಯಗಳನ್ನು ಕೊಯ್ಯುವ ಮೊದಲು ಅವುಗಳ ಮೇಲ್ಭಾಗದಲ್ಲಿ ೧೦೦ ಅಡಿ ಎತ್ತರದ ವರೆಗೂ ಇರುವ ಬಂಡೆಯನ್ನೂ ಎರಡು ದೇವಾಲಯಗಳ ಮಧ್ಯದ ಬಂಡೆಗಳನ್ನೂ ಕಿತ್ತು ತೆಗೆಯಬೇಕಾಗಿತ್ತು. ಇದೇ ೧,೮೦,೦೦೦ ಘನ ಗಜ ಪರಿಮಾಣದ ೩,೦೦,೦೦೦ ಟನ್ನಿನಷ್ಟಾಗುತ್ತಿತ್ತು. ಇದೆಲ್ಲವನ್ನೂ ಕೀಳಲು ಕರಗಸ, ಬೈರಿಗೆಗಳಂಥ ಉಪಕರಣಗಳನ್ನೇ ಉಪಯೋಗಿಸಬೇಕು. ಕದನಿ ಹಾರಿಸಿ ಒಡೆಯುವಂತಿಲ್ಲ. ಹಾಗೆ ಮಾಡಿದರೆ ಕೆಳಗಿನ ದೇಗುಲಗಳಲ್ಲಿರುವ ಅಮೌಲ್ಯ ಕೃತಿಗಳಿಗೆ ಧಕ್ಕೆಯಾಗಬಹುದಿತ್ತು.

ಮೇಲಿನ ಕಲ್ಲು ಗುಡ್ಡಗಳನ್ನು ಕಡಿಯುವಾಗ ಕಲ್ಲುಗಳು ಕೆಳಗೆ ಉರುಳಿ ದೇವಾಲಯದ ಮುಖದಲ್ಲಿ ಕುಳಿತ ರಾಮ್ಸಸ್ ವಿಗ್ರಹಗಳಿಗೂ ಅವುಗಳ ಮೇಲ್ಭಾಗದಲ್ಲಿದ್ದ ಕಪಿ ವಿಗ್ರಹಗಳಿಗೂ ಧಕ್ಕೆಯಾಗಬಹುದು. ಆದ್ದರಿಂದ ಲಾರಿಗಳಲ್ಲಿ ಉಸುಬನ್ನು ತಂದು ಸುರುವಲಾಯಿತು. ೫,೦೦೦ ಟನ್ ಉಸುಬು ತುಂಬಿದ ಮೇಲೆಯೇ ಈ ವಿಗ್ರಹಗಳು ಮುಚ್ಚಿದವು. ಹೀಗೆ ದೇವಾಲಯದ ಮುಖ ಮುಚ್ಚಿದ ಮೇಲೂ ಒಳಗೆ ಹೋಗಿ ಕೆಲಸಮಾಡುವುದಕ್ಕಾಗಿ ಭಾರೀ ಲೋಹದ ಕೊಳವೆ ಮಾರ್ಗಗಳನ್ನು ಇಡಬೇಕಾಯಿತು.

ಹಿಂಭಾಗದ ಶಿಲಾ ಪರ್ವತದ ತುದಿಯಿಂದ ದೇವಾಲಯದ ಹಿಂಬಾಗದಲ್ಲಿ ತಳದವರೆಗೆ ತಲು ಪಲು ೧೯೫ ಅಡಿಗಳಷ್ಟು ಕೆಳಗೆ ಬಂಡೆಯನ್ನು ಕೊಯ್ಯಬೇಕಾಯಿತು. ಮೇಲಿಂದಲೂ ಹಿಂದಿಂದಲೂ ಪಕ್ಕಗಳಿಂದಲೂ ಹೀಗೆ ಬಂಡೆಗಳನ್ನು ಕೊರೆಯುವಾಗ ದೇವಾಲಯದ ಛಾವಣಿ ಕುಸಿದು ಬೀಳಬಾರದೆಂದು ಒಳಗೆ ನಿಲ್ಲಿಸಿದ ಊರುಗಂಬಗಳ ತೂಕವೇ ೧೫೦ ಟನ್ ಆಯಿತು.

ಮೇಲ್ಭಾಗದಿಂದಲೂ ಪಕ್ಕಗಳಿಂದಲೂ ಕಡಿದ ಕಲ್ಲುಗಳಲ್ಲಿ ದೊಡ್ಡ ಅಂಶವನ್ನು ತಾತ್ಕಾಲಿಕ ಅಣೆಕಟ್ಟಿನ ನಿರ್ಮಾಣಕ್ಕಾಗಿ ತಂದು ಸುರಿದರು. ಈಗ ದೇವಾಲಯದ ಮೇಲ್ಛಾವಣಿಯ ಕಲ್ಲುಬಂಡೆ ಕೇವಲ ಎರಡೂವರೆ ಅಡಿ ದಪ್ಪವಾಗಿತ್ತು. ಇಷ್ಟಾದ ಮೇಲೆ ಪ್ರತ್ಯಕ್ಷ ದೇವಾಲಯಗಳನ್ನೇ ಕೊಯ್ಯುವ ಸೂಕ್ಷ್ಮ ಕೆಲಸ ಆರಂಭವಾಯಿತು. ಇದೇನೂ ಸುಲಭವಾಗಿರಲಿಲ್ಲ. ಈ ದೇವಾಲಯಗಳನ್ನು ನಿರ್ಮಿಸಿದ್ದು ಉಸುಬಿನ ಕಲ್ಲಿನಲ್ಲಿ. ಇದು ಬಲು ಮೃದುವಾದ ಕಲ್ಲು. ಸ್ವಲ್ಪ ತಾಗಿದರೂ ಕಿತ್ತು ಕೊಳ್ಳುವಂಥದು. ಆದಷ್ಟು ಕಡಿಮೆ ಧಕ್ಕೆಯಾಗುವಂತೆ ಆದಷ್ಟು ದೊಡ್ಡದಾಗಿ ಶಿಲಾಖಂಡಗಳನ್ನು ಕೊಯ್ಯಬೇಕಾಗಿತ್ತು. ಕಾಗದದ ಮೇಲೆ ರವಷ್ಟೂ ಹೆಚ್ಚು ಕಡಿಮೆಯಾಗದಂತೆ ಇಡೀ ಕೊಯ್ಯುವ ಯೋಜನೆಯನ್ನು ರೇಖಿಸಿಕೊಂಡು ಕಲ್ಲುಗಳ ಮೇಲೆ ರೇಖೆಗಳನ್ನು ಎಳೆಯಲಾಯಿತು. ಪ್ರತಿಯೊಂದಕ್ಕೂ ನಂಬರು ಕೊಡಲಾಯಿತು. ಎರಡೂ ದೇಗುಲಗಳ ಒಟ್ಟು ನಿಕ್ಕಿ ತೂಕ ೧೫,೦೦೦ ಟನ್. ಇಷ್ಟನ್ನು ಕೇವಲ ೧,೦೪೧ ಖಂಡಗಳಾಗಿ ಕತ್ತರಿಸುವುದೆಂದಾಯಿತು. ದೇವಾಲಯದ ಮುಖದಲ್ಲಿದ್ದ ರಾಮ್ಸಸ್ ಪ್ರತಿಮೆಯ ಮುಖವನ್ನು — ಕಿವಿ ಬಿಟ್ಟು ಕತ್ತರಿಸಿದರೂ ೧೯ ಟನ್ ಆಗಲಿತ್ತು. ಕೆಲವು ಖಂಡಗಳು ಮೊದಲೇ ಹೇಳಿದಂತೆ ೩೩ ಟನ್ನುಗಳಷ್ಟು ಭಾರವಾಗಲಿದ್ದವು. ಕೊಯ್ದ ಮೇಲೆ ಇವುಗಳನ್ನೆತ್ತಲು ಅಷ್ಟು ಶಕ್ತಿಯುಳ್ಳ ಡೆರಿಕ್ಕುಗಳೆರಡನ್ನು ಎರಡೂ ದೇವಾಲಯಗಳ ಬಳಿ ಸ್ಥಾಪಿಸಲಾಯಿತು.

ಶಿಲೆ ಕೋಮಲವಾದುದರಿಂದ ಕೊಯ್ಯುವಾಗ ಮೂಲೆಗಳಲ್ಲಿ ಮುಕ್ಕು ಹೋದೀತು, ಎತ್ತುವಾಗ ಒಡೆದು ಹೋದೀತು, ಇದಕ್ಕಾಗಿ ಕಲ್ಲುಗಳಿಗೆ

ಶಕ್ತಿ ಕೊಡಲು ಮತ್ತು ಎತ್ತುವುದಕ್ಕೆ ಬೇಕಾದ ಕೊಂಡಿಗಳನ್ನು ನೆಡುವಾಗ ಬೆಸೆಯಲು ವಿಶೇಷ ಶಕ್ತಿದಾಯಕ ಪದಾರ್ಥವನ್ನು ಇಂಜಕ್ಟ್ ಮಾಡಬೇಕಾಗಿತ್ತು. ಇದಕ್ಕೆ ಕಾಂಕ್ರೀಟು ಸಲ್ಲದು. ಕಾಂಕ್ರೀಟಿನಲ್ಲಿ ನೀರಿದೆ, ನೀರು ಈ ಉಸುಬಿನ ಶಿಲೆಯ ಪರಮ ಶತ್ರು. ಆದ್ದರಿಂದ ಇದಕ್ಕಾಗಿಯೆ ವಿಶಿಷ್ಟ ಅರಗನ್ನು ತಯಾರಿಸಬೇಕಾಯಿತು. ಶಿಲ್ಪಕಾರ್ಯವುಳ್ಳ ಖಂಡಗಳ ಮುಕ್ಕೂ ಹೋಗದಂತೆ ವಿಶಿಷ್ಟ ಅರಗಿನ ಲೇಪ ಕೊಡಬೇಕಾಯಿತು. ಆದರೆ ಈ ಲೇಪವನ್ನು ಕತ್ತರಿಸುವ ರೇಖೆಗೆ ನೆಸುವೂ ತಗಲದಂತೆ ಹಚ್ಚಬೇಕು ಇಲ್ಲದಿದ್ದರೆ ಮೂಲೆ ಮುಕ್ಕಾದೀತು.

ಅಕ್ಟೋಬರ್ ೧೦, ೧೯೬೫ರಂದು ಮುಖದ್ವಾರದಲ್ಲಿ ಕುಳಿತ ಎಡದಿಂದ ಒಂದನೇ ರಾಮ್ಸಸನ ಮುಖವನ್ನು ಡೆರಿಕ್ಕು ಅವನ ಕೊರಳಿನಿಂದ ತಪ್ಪಿಸಿ ಮೇಲೆತ್ತಿತು. ಮೇಲಿನಿಂದ ಅದನ್ನು ಉಕ್ಕಿನ ಕಂಬಿಗೆ ಜೋಡಿಸಿ ಬೆಸೆಯಲಾಗಿತ್ತು. ರಾಮ್ಸಸ್‌ನ ಕೊರಳನ್ನು—ಮತ್ತು ಅಂಥದೇ ಸೂಕ್ಷ್ಮ ರಚನೆಗಳನ್ನು—ಕೊಯ್ಯಲು ಉಪಯೋಗಿಸಿದ ಕರಗಸಗಳು ಇದಕ್ಕಾಗಿಯೇ ನಿರ್ಮಿಸಿದ ವಿಶೇಷ ವಿದ್ಯುದುಪಕರಣಗಳಾಗಿದ್ದವು. ಅವು ಕಡಿದ ಗುರುತುಗಳ ಹತ್ತಿರದಿಂದ ಹೊರತು ಕಾಣುವಂತೇ ಇರಲಿಲ್ಲ. ಕೆಲವು ಕೊಯ್ತಗಳು ಕೂದಲೆಳೆಯಷ್ಟೇ ಭೇದ ತೋರಿಸುತ್ತಿದ್ದರೆ, ಕೆಲವು ಒಂದು ಮಿಲಿಮಿಟರ್ (ಒಂದಂಗುಲದ ೦.೦೪ ಅಂಶ) ಬಿರುಕು ತೋರಿಸುತ್ತಿದ್ದವು. ಪರಮಾವಧಿ ಬಿರುಕು ೬ ಮಿಲಿಮಿಟರ್ ಇರಬಹುದೆಂದು ವಿಧಿಯಿತ್ತು.

ಇದಕ್ಕಿಂತ ಅಗಲದ ಕೊಯ್ದ ಗುರುತುಗಳಾದರೆ ಖಂಡಗಳನ್ನು ತಿರುಗಿ ಜೋಡಿಸುವಾಗ ಮೊದಲಿನಂತೆ ಕೂಡಲಾರವು.

ಈ ಕೊಯ್ಯುವ ಕೆಲಸಕ್ಕೆ ಕರೆಸಿದ ಕಲ್ಲುಕುಟಿಗರಲ್ಲಿ ಅತಿ ಕುಶಲರು ಇಟಲಿಯವರು. "ಕಲ್ಲುಗಳ ಹೃದಯವನ್ನು ಬಲ್ಲೆವು" ಎಂದು ಹೇಳಿಕೊಳ್ಳುತ್ತಾರೆ ಈ ಜನ. ಅವರ ಕೆಲಸ ಅತಿ ಕೌಶಲದ್ದಷ್ಟೇ ಅಲ್ಲ, ಪ್ರಯಾಸದ್ದೂ ಹೌದು. ದೇವಾಲಯಗಳ ಮೇಲ್ಭಾವಣಿಗಳನ್ನು ಕೊಯ್ಯುವಾಗ ಅವರು ಭಾವಣಿಗೆ ಅತಿ ಹತ್ತಿರವಾಗಿ ಅಟ್ಟಳಿಗೆಗಳ ಮೇಲೆ ಅಂಗಾತ ಮಲಗಿ ತಮ್ಮ ಸೂಕ್ಷ್ಮ ಗರಗಸಗಳನ್ನು ಉಪಯೋಗಿಸಬೇಕಾಗುತ್ತಿತ್ತು. ಅದರಿಂದ ಹೊರಬೀಳುವ ಸೂಕ್ಷ್ಮ ಧೂಳಿನ ಉಪಟಳವನ್ನು ತಪ್ಪಿಸಿಕೊಳ್ಳಲು ಮುಖವಾಡಗಳನ್ನು ಧರಿಸಬೇಕಾಗಿತ್ತು.

ಕೊಯ್ದ ಪ್ರತಿ ಖಂಡವನ್ನೂ ಸರ್ವೇಯರರು ಅಳೆದು ಅದರ ಗುರುತ್ವ ಮಧ್ಯವನ್ನು ಕಂಡುಹಿಡಿಯಬೇಕಾಗಿತ್ತು. ಅವರ ಸೂಚನೆಗನುಗುಣವಾಗಿ ತೂತು ಕೊರೆದು ಕೊಂಡಿಗಳನ್ನು ಹಾಕಿ ಡೆರಿಕ್ಕಿನಿಂದ ನೆಸುವೆ ಎತ್ತಬೇಕು. ಅದರ ಮೇಲೆ ಸ್ವಲ್ಪ ಒತ್ತಡ ಕೊಟ್ಟು ಒಡೆಯುವ ಲಕ್ಷಣ ಕಂಡರೆ ಅದಕ್ಕೆ ಶಕ್ತಿದಾಯಕ ಇಂಜಕ್ಶನ್ ಆದರೂ ಕೊಡಬೇಕು, ಇಲ್ಲವೇ ಶಿಲಾಖಂಡವನ್ನು ಮತ್ತೆ ಕೊಯ್ದು ಚಿಕ್ಕ ತುಂಡುಗಳಾದರೂ ಮಾಡಬೇಕು.

ಹೀಗೆ ಡೆರಿಕ್ಕುಗಳಿಂದ ಎತ್ತಿದ ಖಂಡಗಳನ್ನು ಅಣಿಯಾಗಿ ನಿಂತ ಲಾರಿಗಳಿಗೆ ಮೃದುವಾಗಿ ಇಳಿಸಬೇಕು. ಅಲ್ಲಿ ಉಸುಬು ಮತ್ತು ಇತರ ಪದಾರ್ಥಗಳಿಂದ 'ಸುಪ್ಪತ್ತಿಗೆ' ತಯಾರಿಸಿರಬೇಕು. ಲಾರಿ ಚಲಿಸುವಾಗ ಕಲ್ಲಿಗೆ ಧಕ್ಕೆ ತಗಲಬಾರದಲ್ಲ. ಲಾರಿ ಅದನ್ನು ಪುನರ್ನಿರ್ಮಾಣದ ಸ್ಥಳಕ್ಕೆ ಒಯ್ದ ಮೇಲೆ ಕ್ರೇನುಗಳು ಅವುಗಳನ್ನೆತ್ತಿ ನೆಲದ ಮೇಲಿಳಿಸಬೇಕು.

ಹೀಗೆ ಸಾಗಿತು ಕೆಲಸ. ಒಂದೂವರೆ ವರ್ಷ ಕಾಲ, ದಿನವೂ ಇಪ್ಪತ್ತು ತಾಸು. ಕಳೆದ ವರ್ಷದ ಅಂತ್ಯದಲ್ಲಿ ಕೊನೆಯ ಶಿಲಾಖಂಡ ಮೂಲಸ್ಥಾನದಿಂದ ಹೊರಟು ಮೇಲೆ ಹೋದಾಗ ಸಂಬಂಧಪಟ್ಟವರೆಲ್ಲರೂ ಸಮಾಧಾನದ ನಿಟ್ಟುಸಿರುಬಿಟ್ಟರು. ವರುಣದೇವ ಆಕ್ರಮಿಸುವ ಮೊದಲೇ ರಾಮ್ಸಸನ ನಿಧಿಯನ್ನು ಪಾರುಮಾಡಲಾಗಿತ್ತು.

ಈಗ ಹೊಸ ಸ್ಥಳದಲ್ಲಿ ರಾಮ್ಸಸನ ದೇಗುಲಗಳ ಪ್ರತಿಷ್ಠೆ ಪ್ರಾರಂಭವಾಗಿದೆ. ಅದು ಜಲಾಶಯ ಪೂರ್ತಿ ತುಂಬಿದಾಗಲೂ ರಾಮ್ಸಸನ ಪಾದವನ್ನು

ಮುಟ್ಟಲಾರದಷ್ಟು ಎತ್ತರದಲ್ಲಿ—ಮೊದಲ ಸ್ಥಾನದಿಂದ ೨೧೨ ಅಡಿ ಎತ್ತರಕ್ಕೆ, ೬೯೦ ಅಡಿ ಪಶ್ಚಿಮಕ್ಕೆ ಇದೆ. ಅಂಕೆ ಹಾಕಿದ ಶಿಲಾಖಂಡಗಳನ್ನು ಒಂದೊಂದಾಗಿ ಜೋಡಿಸಲಾಗುತ್ತಿದೆ. ದೊಡ್ಡ ದೇವಾಲಯದ ಮುಖದಲ್ಲಿದ್ದ ನಾಲ್ಕು ಮಹಾ ಉಪವಿಷ್ಟ ರಾಮ್ಸಸ್ ವಿಗ್ರಹಗಳು ಮೊದಲು ಅವು ಯಾವೆಡೆಗೆ ಮುಖ ಮಾಡಿದ್ದವೋ ಅದೇ ದಿಕ್ಕಿಗೆ ನಸುವೂ ತಪ್ಪದಂತೆ ಮುಖಮಾಡಿ ಈಗಾಗಲೇ ಕುಳಿತಿವೆ. ಗರ್ಭಗುಡಿಯಲ್ಲಿದ್ದ ಮೂರ್ತಿಗಳು ತತ್ಪ್ರತಿ ಅದೇ ದೂರದಲ್ಲಿ ಕುಳಿತು ಮೊನ್ನೆ ಅಕ್ಟೋಬರದ ಉದಯ ಕಿರಣಗಳನ್ನು ಸ್ವಾಗತಿಸಿವೆ. ಇಡೀ ಪುನಃ ಪ್ರತಿಷ್ಠೆಗೆ ಇನ್ನೂ ಮೂರು ವರ್ಷ ಹಿಡಿಯಬಹುದು.

ರಾಮ್ಸಸ್ ದೇವಾಲಯಗಳು ಮೊದಲಿದ್ದ ಆವರಣದಲ್ಲೇ ಪುನಃ ಕಾಣಿಸಿಕೊಳ್ಳುವವೆ? ಸಾಧ್ಯವಾದಷ್ಟೂ ಹೌದು. ಮೊದಲಸ್ಥಾನದಲ್ಲಿ ದೇವಾಲಯದ ಮೇಲ್ಭಾಗದಲ್ಲಿದ್ದ ಶಿಲಾಗಿರಿಯಂತೆ ಹೊಸ ಸ್ಥಾನದಲ್ಲಿಯೂ ಕೃತಕ ಗಿರಿಯನ್ನು ನಿರ್ಮಿಸಲಾಗುವುದು, ಪಕ್ಕಗಳಲ್ಲಿಯೂ ಕಲ್ಲುಗಳನ್ನು ಜೋಡಿಸಿ ಮೊದಲಿನ ದೃಶ್ಯವನ್ನು ಪುನರ್ನಿರ್ಮಿಸಲು ಹವಣಿಸಲಾಗುವುದು.

ಆದರೆ ಮೂಲ ಸ್ವರೂಪವೇ ಇದ್ದಕ್ಕಿದ್ದಂತೆ ಉಳಿಯುವುದೆಂದು ಹದಿನಾರಾಣೆ ಭರವಸೆ ಇಲ್ಲ. ಪುರಾತತ್ವವೇತ್ತರು ಪೂರ್ತಿ ಸಂತುಷ್ಟರಾಗಿಲ್ಲ. ಇಡೀ ದೇವಾಲಯವನ್ನು ಅಖಂಡವಾಗಿಯೆ ಎತ್ತಿ ಮೇಲೆ ತಂದಿದ್ದರೆ- ಇಟಾಲಿಯನ್ನರ ಸೂಚನೆ ಅದೇ ಇತ್ತು -ಅವರಿಗೆ ಸಂತೋಷವಾಗುತ್ತಿತ್ತು.

ಆದರೆ ವ್ಯವಹಾರ ದೃಷ್ಟಿಯಿಂದ ನೋಡಿದರೆ ಇಷ್ಟಾದುದೇ ದೊಡ್ಡದು. ಐದು ವರ್ಷಗಳ ಹಿಂದೆ ಈ ಸ್ಮಾರಕಗಳು ನೀರುಪಾಲಾಗುವುದು ಅನಿವಾರ್ಯವೆಂದೇ ಅನಿಸಿತ್ತು. ಆದರೆ ಇತಿಹಾಸದಲ್ಲೇ ಅಪೂರ್ವವಾದ ಅಂತಾರಾಷ್ಟ್ರೀಯ ಸಹಕಾರದಿಂದ ಇತಿಹಾಸದಲ್ಲಿಯೇ ಅಪೂರ್ವವಾದ ಎಂಜನಿಯರಿಂಗ್ ಸಾಹಸವು ರಾಮ್ಸಸನ ನಿಧಿಯನ್ನು ಪಾರು ಮಾಡಿ ಪುನರ್ನಿರ್ಮಿಸಿದೆ. ಭಾರತವನ್ನೊಳಗೊಂಡು ೫೨ ರಾಷ್ಟ್ರಗಳು ಇದಕ್ಕೆ ತೆತ್ತ ಧನಸಹಾಯ ಸಾರ್ಥಕವಾಯಿತು. (ಭಾರತದ ಪಾಲು ೫,೮೮,೦೦೦ ಡಾಲರು). ಸಾವಿರ ಮೇಲ್ಪಟ್ಟ ಕೋಮಲ ಭಂಗುರ ಶಿಲಾಖಂಡಗಳಲ್ಲಿ ಕೇವಲ ೫೭ ಮಾತ್ರ ಸ್ವಲ್ಪ ಧಕ್ಕೆಗೊಂಡವು, ಎರಡು ಮಾತ್ರ ಪುಡಿಯಾದವು. ಪೂರ್ವಾನುಭವದ ಲೇಶವೂ ಇಲ್ಲದೆ ಸಕಲ ಮೂರ್ತಿ, ಸಕಲ ವರ್ಣಚಿತ್ರ, ಸಕಲ ಶಾಸನಗಳ ಸಮೇತವಾಗಿ ಅದೇ ಭಂಗಿಯಲ್ಲಿ ನ್ಯೂಬಿಯದ ಈ ವಾಸ್ತು ಪುನರ್ಜನ್ಮಹೊಂದುತ್ತಿದೆ.

*



ಎದ್ದು ನಿಲ್ಲಿ! ಧೀರರಾಗಿ! ಬಲಾಢ್ಯರಾಗಿ! ಜವಾಬ್ದಾರಿಯನ್ನೆಲ್ಲ ನೀವೇ ವಹಿಸಿಕೊಳ್ಳಿ. ನಿಮ್ಮ ಭವಿಷ್ಯದ ನಿರ್ಮಾಪಕರು ನೀವು ಎಂಬುದನ್ನು ಅರಿಯಿರಿ. ನಿಮಗೆ ಬೇಕಾದ ಸಹಾಯ ಆಗಲೇ ನಿಮ್ಮಲ್ಲಿದೆ. ಅದ ಕಾರಣ ನಿಮ್ಮ ಭವಿಷ್ಯವನ್ನು ನೀವೇ ನಿರ್ಧರಿಸಿ.

* * *

ಸಂಸಾರವೆಂಬುದು ಕಣಬಿಸಿಲು ನಿಜ; ಆದರೆ ದೇವರು ನೀಡುವ ನೆಳಲು ಅಷ್ಟೇ ತಂಪು.

—ವಿವೇಕಾನಂದ



# ಹಿಮಾಲಯದ ಕುವರಿ

ವಿಷ್ಣು ಪ್ರಭಾಕರ

ಶಸ್ತ್ರಚಿಕಿತ್ಸೆಯ ನಂತರವೂ ಸುಮಾರು ಒಂದು ತಿಂಗಳ ಕಾಲ ಆಸ್ಪತ್ರೆಯಲ್ಲಿರಬೇಕಾಯಿತು. ಒಂದು ದಿನ ಸಂಜೆ ಮಲಗಿ ಎಚ್ಚತ್ತಾಗ ನೋಡುತ್ತೇನೆ– ಹೊಸ ನರ್ಸ್ ಕುಳಿತು ನನ್ನ ಕಥೆ ಓದುತ್ತಿದ್ದಾಳೆ. ಓದುವುದರಲ್ಲಿ ಅವಳೆಷ್ಟು ತನ್ಮಯಳಾಗಿದ್ದಳೆಂದರೆ ನಾನು ಎಚ್ಚತ್ತದ್ದು ಅವಳಿಗೆ ಗೊತ್ತಾಗಲೇ ಇಲ್ಲ. ಅವಳ ಸೌಮ್ಯ ಮುಖಮುದ್ರೆ ನನಗೆ ತುಂಬಾ ಪ್ರಿಯವೆನಿಸಿತಾದ್ದರಿಂದ ನಾನು ಬೇಕಂತಲೆ ನಿದ್ರೆಯ ಸೋಗು ಹಾಕಿಕೊಂಡು ಮಲಗಿಯೆ ಉಳಿದೆ. ಸದಾ ಒಂದು ಬಗೆಯ ಆತ್ಮೀಯಭಾವವನ್ನು ಬೆಳಗುತ್ತಿದ್ದ ಅವಳ ಸುಂದರ ಕಣ್ಣುಗಳು ಹಠಾತ್ತಾಗಿ ತೇವಗೊಂಡು ಅವುಗಳಲ್ಲಿ ನೀರು ತುಂಬತೊಡಗಿತು. ಅಷ್ಟರಲ್ಲಿ ಅದೇನು ಸಪ್ಪಳವಾಯಿತೊ, ಅವಳು ಬೆಚ್ಚಿ ನನ್ನತ್ತ ನೋಡಿದಳು. ಕದಿಯುತ್ತಿರುವಾಗಲೇ ಕಳ್ಳ ಸಿಕ್ಕಿಬಿದ್ದಂತಿತ್ತು ಅವಳ ಸ್ಥಿತಿ. ಗಡಬಡಿಸಿ ಕೇಳಿದಳು, "ನಿಮಗೆ ಎಚ್ಚರಾಯಿತೇ?"

"ಹುಂ. ನೀವು ಅಳುತ್ತಿದ್ದೀರಲ್ಲ!"

"ಇಲ್ಲವಲ್ಲ. ಇಲ್ಲ. ಹೀಗೆಯೇ ಈ ಕಥೆ ಓದಿ—"

"ಕಥೆ ಹೇಗನಿಸಿತು?"

"ಇದರಲ್ಲಿ ತುಂಬ ವೇದನೆಯಿದೆ. ಕಥೆ ನಿಜವಾದದ್ದೇ?"

"ಬಹಳಷ್ಟು ನಿಜವಿದೆ. ಕಥೆಯ ಭಾಷೆಯಷ್ಟೇ ನನ್ನದು."

"ಅಂತೇ ಅದರಲ್ಲಿ ಇಷ್ಟೊಂದು ವೇದನೆಯಿದೆ."

ಅಷ್ಟೆಂದು ಅವಳು ಗಂಭೀರಳಾದಳು. ಅವಳ ಅಂತರಂಗದಲ್ಲಿ ವೇದನೆಯಿದೆ ಎಂದು ನನಗನಿಸಿತು. ಅವಳು ಅಂದಾಗಿನಿಂದಲೂ ಅವಳ ಆತ್ಮವಿಶ್ವಾಸ ಮತ್ತು ಆತ್ಮೀಯತೆ ನನ್ನ ಮೇಲೆ ಪ್ರಭಾವ ಬೀರಿದ್ದವು. ಈಗ ನಾನು ಇನ್ನಷ್ಟು ಅವಳ ನಿಕಟ ಪರಿಚಯಕ್ಕಾಗಿ ಪ್ರಯತ್ನಿಸಿದೆ. ಒಂದು ದಿನ ಅವಳ ಕಥೆಯನ್ನು ತಿಳಿದುಕೊಳ್ಳುವಲ್ಲಿ ಯಶಸ್ವಿಯಾದೆ. ಆ ಕಥೆಯನ್ನು ನನ್ನ ಶಬ್ದಗಳಲ್ಲಿ ಈ ಮುಂದೆ ಹೇಳುತ್ತಿದ್ದೇನೆ. ಅವಳ ಶಬ್ದಗಳಲ್ಲೇ ಹೇಳಬಲ್ಲೆನಾಗಿದ್ದರೆ—?

ಕಥೆ

ಎಲ್ಲಿ ಪರ್ವತ ಶಿಖರಗಳು ಸದಾ ಬರ್ಫಾಚ್ಛಾದಿತವಾಗಿರುವವೋ, ಎಲ್ಲಿ ಪಾರ್ವತಿ ದೇವಿ ತನ್ನ ಪಾವನ ಸೆರಗಿನಲ್ಲಿ ಹೂಗಳನ್ನು ತುಂಬಿ ತಂದು ಶಂಕರನ ಚರಣಗಳಿಗೆ ಅರ್ಪಿಸುತ್ತಾಳೆ ಎಂದು ಜನ ಇನ್ನೂ ನಂಬುತ್ತಿದ್ದಾರೋ ಅಂಥ ಪ್ರದೇಶದಲ್ಲಿ ರೇವತಿಯು ಜನ್ಮವಾಯಿತು. ಈ ಪ್ರದೇಶಕ್ಕೆ ತಕ್ಕಂತೆಯೇ ಅವಳ ರೂಪವಿತ್ತು. ಹಿಮದ ಕಠೋರ ಭಾವದ ಚಹರೆ, ಸೂರ್ಯ ಕಿರಣಗಳನ್ನು ಆಲಿಂಗಿಸುವ ಸಜಲ ಮೋಡಗಳಂತೆ ಆರಕ್ತಮುಖ. ಶ್ರಮಜೀವಿಯಾದ ಅವಳು ತಲೆಗೆ ರುಮಾಲು ಸುತ್ತಿಕೊಂಡು ಎಮ್ಮೆಗಳನ್ನು ಮೇಯಿಸಲು ಹೋಗುತ್ತಿದ್ದಳು. ಹೊಲದಲ್ಲಿ ದುಡಿಯುತ್ತಿದ್ದಳು. ತಲೆಯ ಮೇಲೆ ಒಜ್ಜೆ ಹೊತ್ತುಕೊಂಡು ಜೀವನದ ಏರಿಳಿತಗಳಂತಿದ್ದ ಕಲ್ಲು ಹಾದಿಗಳಲ್ಲಿ ನಡೆಯುತ್ತಿದ್ದಳು. ಇಂಥ ಜೀವನ ಸಾಗುತ್ತಿದ್ದಾಗ ಅದು ಹೇಗೋ ಹಳ್ಳದ ನೀರಿನ ಮಂಜುಳ ನಿನಾದ ಪ್ರೇಮದ ಮತ್ತು ಸಂಗೀತದಲ್ಲಿ ಪರಿವರ್ತಿತವಾಯಿತು. ಅವಳು ಒಮ್ಮೆ ಶ್ರೀಧರನ ಜೊತೆ ಕುಳಿತು ಪ್ರೇಮಾಲಾಪಗೈಯುತ್ತಿದ್ದಳು. ಇನ್ನೊಮ್ಮೆ ಕುಶಲಾನಂದ ಅವಳಿಗೆ ಪ್ರೇಮ ಸಂಗೀತವನ್ನು ಕೇಳಿಸುತ್ತಿದ್ದ.

ಶ್ರೀಧರನ ಬಿಳಿ ಕೆಂಪು ಬಣ್ಣ ಮತ್ತು ಉದ್ದ ನೆಯ ಮುಖ ಅವಳ ಕಣ್ಣುಗಳಿಗೆ ತುಂಬ ಪ್ರಿಯವಾಗಿ ಕಾಣಿಸುತ್ತಿದ್ದವು. ಆದರೆ ಅವನಲ್ಲಿ ಒಂದು ದೋಷವಿತ್ತು. ಅತ ಪೋ ಸ್ವಭಾವದ ಹುದುಗಿಕೊಂಡು ಮಾತನಾಡುವ ತರುಣ. ಅತ ಎಷ್ಟು ಮೆಲ್ಲಗೆ ಮಾತನಾಡು ತ್ತಿದ್ದನೆಂದರೆ ಗಾಳಿಯೇ ಸರಸರ ಸಪ್ಪಳ ಮಾಡುವಂತೆ ಅನಿಸುತ್ತಿತ್ತು. ಅವನ ಮಾತ ಕೇಳಿದಾಗ ರೇವತಿ ಸದಾ ಬಾಯಲ್ಲಿ ಬಟ್ಟೆ ತುರುಕಿಕೊಂಡು ನಗುತ್ತಿದ್ದಳು.

ಕುಶಲಾನಂದನೋ ಸುದೃಢ, ಗೋ ಬಣ್ಣದ ಆಳು. ಅವನ ಕಣ್ಣುಗಳಲ್ಲಿ ಆತ್ಮ ವಿಶ್ವಾಸ ಮಿಂಚು ಕಾಣುತ್ತಿತ್ತು. ರೇವತಿಗೆ ಅವನ ಮಾತುಗಳು ಇಷ್ಟವೆನಿಸಿದರೂ ಅವನ ಅಭಿಮಾನ ಕಂಡು ಒಮ್ಮೊಮ್ಮೆ ಬ್ಯಾ ಗುತ್ತಿದ್ದಳು. ಅವಳು ಅವನನ್ನು ಭೆಟ್ಟಿಯಾ ಗಲು ಪರ್ವತ ದಾಟಿ ಹೊಲಗಳ ಕೆಳಗಡೆ ಇ ಕಾಲು ಹಾದಿಗೆ ಹೋಗುತ್ತಿದ್ದಳು. ಬಳಿಯ ಹಳ್ಳವೊಂದು ಹರಿಯುತ್ತಿತ್ತು. ಹಳ್ಳದ ದಂ ಯಲ್ಲಿ ಕುಳಿತು ರೇವತಿ ಆಗಾಗ ಗಂಟೆಗಟ್ಟ ಕುಶಲಾನಂದನ ಮಾತುಗಳನ್ನು ಕೇಳುತ್ತಿದ್ದಳು. ಅತ ಹೇಳುತ್ತಿದ್ದ, "ನಾನು ಸೈನ್ಯದಲ್ಲಿ ದೊಡ್ಡ ಅಧಿಕಾರಿಯಾಗುತ್ತೇನೆ."

"ನನ್ನನ್ನು ಪಟ್ಟಣಕ್ಕೆ ಕರೆದೊಯ್ಯುವಿಯಾ?" ರೇವತಿ ಕೇಳುತ್ತಿದ್ದಳು.

"ಹುಂ. ನಿನ್ನನ್ನು ದಿಲ್ಲಿಗೆ ಕರೆದೊಯ್ಯುತ್ತೇನೆ."

"ದಿಲ್ಲಿ!" ರೇವತಿ ಹರುಷದಿಂದ ನಗುತ್ತಿದ್ದಳು. "ಅಲ್ಲಿ ಮೋಟರುಗಳಿವೆಯಂತೆ. ಅಲ್ಲಿಯ ಮಾರ್ಗಗಳಲ್ಲಿ ಏರಿಳಿತಗಳಿಲ್ಲವಂತೆ."

"ಏರಿಳಿತ? ಹುಚ್ಚಿ, ಅಲ್ಲಿ ಮಾರ್ಗಗ

ಸರಳವಾಗಿದೆ."

"ಅಯ್ಯೋ ದೇವರೆ! ಹಾಗಾದರೆ ಅಲ್ಲಿ ಜನ ಹೇಗೆ ನಡೆಯುತ್ತಾರೆ?"

ಹೊಲಕ್ಕೆ ಹೋಗುವ ಮಾರ್ಗದಲ್ಲಿ ಶ್ರೀಧರ ಅವಳಿಗೆ ಭೆಟ್ಟಿಯಾಗುತ್ತಿದ್ದ. ಅವಳೊಡನೆ ಮಾತಾಡುತ್ತ ದೂರದ ವರೆಗೆ ಹೋಗುತ್ತಿದ್ದ. ಅತ ಹೇಳುತ್ತಿದ್ದ, "ನಾನು ಜನ ಪ್ರಯಾಣ ಮಾಡುವ ರಸ್ತೆಯಲ್ಲಿ ದೊಡ್ಡ ಅಂಗಡಿ ತೆಗೆದು ತುಂಬ ಹಣ ಸಂಪಾದಿಸುತ್ತೇನೆ."

ಅರಿಯದವಳಂತೆ ನಕ್ಕು ರೇವತಿ, "ಹಣ! ಅದರಿಂದೇನಾಗುವುದು?" ಎನ್ನುತ್ತಿದ್ದಳು.

"ಹಣದಿಂದೇನಾಗುವುದು? ಹಣದಿಂದ ನಿನಗಾಗಿ ಬಂಗಾರದ ಆಭರಣಗಳು, ರೇಶಿಮೆಯ ಬಟ್ಟೆಗಳು ಬರುವವು. ಹೊಸ ಮನೆ ತಯಾರಾಗುವುದು. ಹಣದಲ್ಲಿ ತುಂಬ ಶಕ್ತಿಯಿದೆ ಹುಚ್ಚಿ."

ಶ್ರೀಧರ ಹಣದ ಹಿರಿಮೆಯನ್ನು ಹಾಡಿದಾಗೆಲ್ಲ ರೇವತಿ ಪ್ರಭಾವಿತಳಾಗುತ್ತಿದ್ದಳು. ಅದ್ದರಿಂದ ಅವಳ ಒಲವು ಕುಶಲಾನಂದನತ್ತ ಇದ್ದರೂ ಅವಳು ಶ್ರೀಧರನನ್ನು ತನ್ನ ಮನದಿಂದ ದೂರಮಾಡಲಾರದವಳಾಗಿದ್ದಳು. ಈ ಸಂದಿಗ್ಧದಲ್ಲಿದ್ದಾಗಲೇ ತಾನು ತಾಯಿಯಾಗಲಿರುವೆನೆಂಬ ಮಾತು ಅವಳ ಗಮನಕ್ಕೆ ಬಂತು. ಅವಳು ಹೆದರಿದಳು. ಆದರೆ ಆ ಭಯ ಭೂ-ಕಂಪದಂತಿತ್ತು. ಮರುಕ್ಷಣವೇ ಅದು ಕರಗಿ ಹೋಯಿತು. ಆದರೂ ಅದರ ಕಂಪನ ಮಾತ್ರ ಉಳಿದುಕೊಂಡಿತು. ಅವಳು ಓಡುತ್ತಲೆ ಕುಶಲಾನಂದನ ಬಳಿಗೆ ಬಂದಳು. ಅವಳ ಕೆಂಪು ಮುಖ ನಾಚಿಕೆಯಿಂದ ಇನ್ನಷ್ಟು ಕೆಂಪಗಾಗಿಬಿಟ್ಟಿತ್ತು. ಅವಳು ಪುನಃ ಪುನಃ ನಗುತ್ತ ತಟ್ಟನೆ ಅದನ್ನು ನಿಲ್ಲಿಸುತ್ತಿದ್ದಳು.

"ನಿನಗೇನಾಗಿದೆ?" ಕುಶಲಾನಂದ ಆಶ್ಚರ್ಯದಿಂದ ಕೇಳಿದ.

"ಊಂಹುಂ. ಹೇಳುವುದಿಲ್ಲ ಹೋಗು."

"ಸರಿ. ಹಾಗಾದರೆ ನಾನು ಹೋಗುತ್ತೇನೆ."

"ಇಲ್ಲ ಇಲ್ಲ, ಹೇಳುತ್ತೇನೆ ತಡಿ."

ಅತ ನಿಂತ. ರೇವತಿ ಕರವಸ್ತ್ರವನ್ನು ಬೆರಳಿಗೆ ಸುತ್ತಿಕೊಳ್ಳುತ್ತ ಒಂದು ಕ್ಷಣ ತಡೆದು "ಹತ್ತಿರ ಬಾ" ಎಂದಳು. ಅತ ಹತ್ತಿರಕ್ಕೆ ಬಂದ.

"ಇನ್ನೂ ಸಮೀಪ."

ಅತ ಇನ್ನಷ್ಟು ಹತ್ತಿರಕ್ಕೆ ಬಂದ. ಮಾತನಾಡಲೆಂದು ಬಾಯಿತೆರೆದ. ಅವಳು ಅವನನ್ನು ಸುಮ್ಮನೆ ನೋಡುತ್ತ ನಿಂತುಬಿಟ್ಟಳು. ಆತನೂ ಬೆಪ್ಪಾಗಿ "ಏನು ಸಮಾಚಾರ? ಯಾಕೆ ಮಾತಾಡುವುದಿಲ್ಲ?" ಎಂದ.

ರೇವತಿ ಆಗ ನಾಚಿಕೆಯಿಂದ "ಏನು ಮಾತು? ಇಷ್ಟೂ ತಿಳಿಯುವುದಿಲ್ಲವೇ?" ಎಂದಳು.

ಸಹಸಾ ಅವರಿಬ್ಬರ ದೃಷ್ಟಿ ಕೂಡಿತು. ಕುಶಲಾನಂದ ಅವಾಕ್ಕಾದ. ರೇವತಿಯ ಕಣ್ಣುಗಳಲ್ಲಿ ಮಿನುಗುತ್ತಿದ್ದ ಭಾವ ಅವನ ಇಡೀ ಶರೀರವನ್ನು ರೋಮಾಂಚಗೊಳಿಸಿತು. ಈಗ ತಿಳಿಯಬೇಕಾದ್ದು ಏನೂ ಉಳಿಯಲಿಲ್ಲ. ಅತ ಕೆಲ ನಿಮಿಷ ಭಾವಾವೇಶದಿಂದ ರೇವತಿಯೊಡನೆ ಮಾತನಾಡುತ್ತ ನಿಂತ. ಹೊರಡುವಾಗ ತಾನು ಅವಳನ್ನು ಬಹು ಬೇಗನೆ ಲಗ್ನವಾಗುವುದಾಗಿ ನಂಬಿಕೆಯಿತ್ತ.

ಕುಶಲಾನಂದನ ಹೆಂಡತಿಯಾಗುವೆನೆಂಬ ಅಭಿಮಾನದಿಂದ ರೇವತಿ ಪುಲಕಿತಳಾದಳು. ಆದರೆ ಮೂರು ದಿನದ ನಂತರ ಕುಶಲಾನಂದ ಕೆಳ ಪ್ರದೇಶಕ್ಕೆ ಹೋಗಿದ್ದಾನೆಂಬ ಸುದ್ದಿ ಕೇಳಿದೊಡನೆ ಅವಳ ಮನದಲ್ಲಿ ತಿಲಮಾತ್ರ ಸಂದೇಹವೂ ಉಳಿಯಲಿಲ್ಲ. ನಿಶ್ಚಯವಾಗಿಯೂ ಅತ ಅವಳಿಗಾಗಿ ಬಟ್ಟೆಬರೆ ಮತ್ತು ಅಭರಣಗಳನ್ನು ತರಲು ಹೋಗಿದ್ದಾನೆ.

ಅವಳು ಆತುರದಿಂದ ಅವನು ಬರುವ ಹಾದಿಯನ್ನು ನೋಡುತ್ತ ಕುಳಿತಳು. ಆದರೆ ಒಂದೊಂದರಂತೆ ಹಲವಾರು ದಿನಗಳು ಕಳೆದರೂ ಕುಶಲಾನಂದ ತಿರುಗಿ ಬರಲಿಲ್ಲ. ಅತ ಸೈನ್ಯವನ್ನು ಸೇರಿ ರಣರಂಗಕ್ಕೆ ಹೋಗಿಬಿಟ್ಟಿದ್ದನೆಂದು ಒಂದು ದಿನ ಸಮಾಚಾರ ಸಿಕ್ಕಿತು. ಆ ಒಂದು ದಿನದಲ್ಲಿ ರೇವತಿ ಕಲಂಕಿನಿಯಾಗಿಬಿಟ್ಟಳು. ಕುಶಲಾನಂದನ ಕಪಟ ಆಚರಣೆ ಮತ್ತು ಹೇಡಿಯಂತೆ ಅತ ಮಾಡಿದ ಪಲಾಯನ ರೇವತಿಯ ಧವಲ ಸೌಂದರ್ಯಕ್ಕೆ ಮಸಿ ಬಳಿದಿದ್ದವು. ಸಾವಕಾಶವಾಗಿ ರೇವ

ತಿಸು ಸಮಾಚಾರ ಮಹಾಪೂರದ ನೀರಿನಂತೆ ಹರಡಿ ಅದೊಂದು ನಿತ್ಯ ಚರ್ಚೆಯ ಮಾತಾಯಿತು. ಸಮಾಜದ ಕಟೂಕ್ತಿಗಳ ಬಾಣಗಳು ಅವಳನ್ನು ಇರಿಯತೊಡಗಿದವು. ಆದರೆ ಅವಳ ಕಣ್ಣೀರು ಹಿಮದಂತೆ ಗಟ್ಟಿಯಾಗಿ ಹೋಗಿತ್ತು. ಅವಳು ಸ್ವತಃ ಕಲ್ಲಾಗಿಬಿಟ್ಟಿದ್ದಳು. ನಗುತ್ತಿರಲಿಲ್ಲ, ಅಳುತ್ತಿರಲೂ ಇಲ್ಲ. ಶ್ರೀಧರನಿಗೆ ಎಲ್ಲ ಸಂಗತಿ ತಿಳಿಯಿತು. ತಿಳಿದ ದಿನವೇ ಆತ ಕಳ್ಳನಂತೆ ಅವಳನ್ನು ಕಾಣಲು ಬಂದ. ಆದರೆ ತಿರಸ್ಕೃತ ರೇವತಿ ಅವನತ್ತ ಕಣ್ಣೆತ್ತಿ ನೋಡಲೇ ಇಲ್ಲ. ಶ್ರೀಧರ ಅಂದು ಮರಳಿಹೋದನಾದರೂ ಮತ್ತೊಮ್ಮೆ ಬಂದ. ಬಂದವನೇ ಸ್ಪಷ್ಟವಾಗಿ "ನಾನು ಇಂದೇ ಬೇಕಾದರೂ ನಿನ್ನನ್ನು ಲಗ್ನವಾಗುವೆ" ಎಂದ.

ಹಠಾತ್ತಾಗಿ ಬಂದ ಈ ಮಾತಿಗೆ ರೇವತಿ ತಕ್ಷಣ ಉತ್ತರ ಕೊಡಲಾರದೆ ಹೋದಳು. ಅವಳು ಆ ಸಮಯದಲ್ಲಿ ಹೊಲದಿಂದ ವಾಪಸು ಬರುತ್ತಿದ್ದಳು. ಅವಳ ತಲೆಯ ಮೇಲೆ ದೊಡ್ಡದೊಂದು ಹುಲ್ಲಿನ ಹೊರೆ ಇತ್ತು. ಅವಳಿಗೆ ಶ್ರೀಧರನ ಮುಖ ಕಾಣಿಸುತ್ತಿರಲಿಲ್ಲ. ಅವನನ್ನು ನೋಡಬೇಕೆಂಬ ಆಕಾಂಕ್ಷೆ ಅವಳಿಗೆ ತಲೆಯ ಮೇಲಿನ ಹೊರೆಯನ್ನು ಕೆಳಗೆ ಚೆಲ್ಲು ಎನ್ನುತ್ತಿತ್ತು. ಬಹಳ ದೂರದವರೆಗೆ ಅವಳು ಮೌನವಾಗಿದ್ದೇ ಅವನ ಮಾತನ್ನು ಕೇಳುತ್ತ ನಡೆದಳು. ಕಡೆಗೊಮ್ಮೆ "ಇಲ್ಲ. ಇದು ಸಾಧ್ಯವಾಗದು" ಎಂದಳು.

"ಯಾಕೆ?"

"ಆಗದು. ಇದೆಂದೂ ಆಗದು" ಎಂದು ಭಾವಾವೇಶದಿಂದ ಹೇಳಿದ ರೇವತಿ ಎದುರಿನ ಬಿರನ್ನು ಶ್ರೀಧರನಿಂದ ದೂರ ಓಡಿ ಹೋಗಬಯಸುವವಳಂತೆ ಏರತೊಡಗಿದಳು. ಅವಳು ಬೀಳುವಂತಾದಾಗ ಶ್ರೀಧರ ಮುಂದೆ ಬಂದು ಒಂದು ಪ್ರಿಯ ವಸ್ತುವಿನಂತೆ ಆಕೆಯನ್ನು ಹಿಡಿದುಕೊಂಡು ಸಹಜ ಭಾವದಿಂದ ಹೇಳಿದ: "ನೀನೀಗ ನಿನ್ನ ದೇಹದ ಬಗ್ಗೆ ಕಾಳಜಿಯಿಂದಿರಬೇಕು."

ಆ ನಿಮಿಷದಲ್ಲಿ ರೇವತಿಯ ಕಣ್ಣು ಶ್ರೀಧರನ ಮುಖದ ಮೇಲೆ ನಟ್ಟಿತು. ಅಲ್ಲಿದ್ದ ಶಾಂತಿ ಗಾಂಭೀರ್ಯ, ದೊಡ್ಡತನಗಳನ್ನು ಕಂಡು ಅವಳು ಸ್ತಬ್ಧಳಾದಳು.

"ಏನನ್ನುತ್ತಿ?" ಮೊದಲಿನಂತೆಯೆ ಸಹಜ ಭಾವದಿಂದ ಶ್ರೀಧರ ಕೇಳಿದ.

ಕ್ಷಣ ಕಾಲ ಸಂದೇಹಿಸಿ ರೇವತಿ ಹೇಳಿದಳು, "ನನ್ನನ್ನಿಲ್ಲಿಂದ ಕರೆದುಕೊಂಡು ಹೋಗು".

"ಎಲ್ಲಿಗೆ?"

"ಎಲ್ಲಿಯಾದರೂ."

"ಒಳ್ಳೇದು."

ಶ್ರೀಧರ ಮತ್ತು ರೇವತಿಯ ಲಗ್ನವಾಯಿತು. ಗಂಡ ಹೆಂಡರು ಕೆಳಗೆ ಹರಿದ್ವಾರಕ್ಕೆ ಬಂದು ಇರತೊಡಗಿದರು. ಇಲ್ಲಿಯೇ ರೇವತಿಯ ಮಗ ಕಿಶನ್ ಹುಟ್ಟಿದ. ತನ್ನ ಶಿಶು ಸುಲಭ ಕ್ರೀಡೆಗಳಿಂದ ಆ ಮಗು ಆ ದಂಪತಿಗಳ ಜೀವನವನ್ನು ರಸಮಯಗೊಳಿಸಲು ತುಂಬ ಪ್ರಯತ್ನ ಮಾಡಿದ. ಹೀಗೆ ಐದು ವರ್ಷಗಳು ಕಳೆದು ಹೋದವು.

ಆದರೆ ಈ ಐದು ವರ್ಷಗಳಲ್ಲಿ ಶ್ರೀಧರ ಮತ್ತು ರೇವತಿ ಸಮರಸರಾಗಲಿಲ್ಲ. ರೇವತಿ ಆಗಾಗ ಏಕಾಂತದಲ್ಲಿ ವೇದನಾಮಯ ಗೀತಗಳನ್ನು ಹಾಡುತ್ತಿದ್ದಳು. ಸುಂದರ ಶ್ರೀಧರ ಹೆಂಡ ಕುಡಿಯುತ್ತಿದ್ದ; ಜುಗಾರಿ ಆಡುತ್ತಿದ್ದ. ಹಾಗಿದ್ದರೂ ಅವರು ಪರಸ್ಪರ ಜಗಳಾಡುತ್ತಿರಲಿಲ್ಲ. ಅದರ ಬದಲು ಒಬ್ಬರನ್ನೊಬ್ಬರು ಪ್ರೀತಿಸಲು ತಮ್ಮಿಂದಾದದ್ದೆಲ್ಲ ಪ್ರಯತ್ನ ಮಾಡುತ್ತಿದ್ದರು. ಅವರು ಕಿಶನನನ್ನು ಪ್ರೀತಿಸುತ್ತಿದ್ದರು. ಅವರಿಬ್ಬರೂ ನದಿಯ ಎರಡು ದಂಡೆಗಳಾದರೆ ಕಿಶನ ನದೀ ಪ್ರವಾಹದಂತಿದ್ದ. ದಂಡೆಗಳ ಸೀಮೆಯಲ್ಲಿದ್ದರೂ ಪ್ರವಾಹ ಅವೆರಡನ್ನೂ ಪರಸ್ಪರ ಸ್ಪರ್ಶಿಸಲು ಬಿಡದಿರುವಂತೆ ಕಿಶನನ ಸ್ಥಿತಿಯಿತ್ತು. ಕಿಶನನನ್ನು ಕಂಡು ಇಬ್ಬರಿಗೂ ಕುಶಲಾನಂದನ ನೆನಪು ಬರುತ್ತಿತ್ತು. ಕುಶಲಾನಂದನದೇ ರೂಪ—ಬಣ್ಣ, ಅವನದೇ ಹಾವ-ಭಾವ. ರೇವತಿಯ ಹೃದಯ ವೇದನೆಯಿಂದ ನರಳುತ್ತಿತ್ತು. ತಾನು ಪರಕೀಯ ಎಂಬ ಭಾವನೆ ಶ್ರೀಧರನಲ್ಲಿ ಮೂಡುತ್ತಿತ್ತು.

ಈ ಪರಿಸ್ಥಿತಿಗಾಗಿ ರೇವತಿ ಶ್ರೀಧರನನ್ನೆಂದೂ ದೂಷಿಸುತ್ತಿರಲಿಲ್ಲ. ಅವಳು ಮತ್ತೆ ಮತ್ತೆ ತನ್ನನ್ನು ಧಿಕ್ಕರಿಸಿಕೊಂಡು, "ಆದದ್ದು ಒಳ್ಳೆಯದೇ. ನನ್ನಂಥ ಪಾಪಿಷ್ಠೆಗೆ ಈ ವೇದನೆ ಅಗತ್ಯವಾಗಿತ್ತು" ಎಂದುಕೊಳ್ಳುತ್ತಿದ್ದಳು.

ಒಂದು ದಿನ ಏಕಾಂತದಲ್ಲಿ ರೇವತಿ ಗೀತ ಹಾಡುತ್ತಲಿದ್ದಾಗ ತಡೆಯಲಾರದ ಅಳು ನುಗ್ಗಿ ಹೊರಬಂತು. ಅವಳು ಮುಖ ಮುಚ್ಚಿಕೊಂಡು ತಲೆದಿಂಬಿನ ಮೇಲೆ ಒರಗಿ ಬಹಳ ಹೊತ್ತು ಅತ್ತಳು. ಬಾಗಿಲನ್ನು ಜೋರಾಗಿ ಬಡಿದ ಸಪ್ಪಳ ಕೇಳುವ ವರೆಗೂ ಅವಳು ಅಳುತ್ತಲೇ ಇದ್ದಳು. ಯಾರೋ ಅವಳನ್ನು ಕರೆಯುತ್ತಿದ್ದರು. ಕರೆಯುವವರ ಸ್ವರ ಪರಿಚಿತವಾದದ್ದು ಎಂದವಳಿಗೆ ಅನಿಸಿತು. ಅವಳು ಗಡಬಡಿಸಿ ಎದ್ದು ಬಂದು ಬಾಗಿಲು ತೆರೆದಳು. ಅವಳ ಗಂಡನ ಅಂಗಡಿಯ ಹತ್ತಿರವೇ ಅಂಗಡಿಯಿಟ್ಟಿದ್ದ ರಾಮಲಾಲ ಬಂದಿದ್ದ. ಆತ ಏದುಸಿರು ಬಿಡುತ್ತಲೇ ಒಂದೇ ಉಸಿರಿನಲ್ಲಿ ಹೇಳಿದ, "ಶ್ರೀಧರ ಟ್ರಕ್ಕಿನಡಿಗೆ ಸಿಕ್ಕ."

"ಏನು?"

"ಕಿಶನ ರಸ್ತೆಯಲ್ಲಿ ಆಡುತ್ತಿದ್ದಾಗ ಟ್ರಕ್ಕೊಂದು ಭರದಿಂದ ಬಂತು. ಅದು ಕಿಶನನ ಮೇಲೆ ಹಾಯ್ದು ಹೋಗುವುದರಲ್ಲಿತ್ತು. ಅದನ್ನು ಊಹಿಸಿ ಶ್ರೀಧರ ಓಡುತ್ತ ಬಂದು ಕಿಶನನನ್ನು ಬದಿಗೆಳೆದ. ಆದರೆ ಶ್ರೀಧರ ಪಾರಾಗುವಷ್ಟರಲ್ಲಿ ಟ್ರಕ್ಕು ಅವನ ಕಾಲುಗಳ ಮೇಲೆ ಹಾಯ್ದು ಭರ್ರೆಂದು ಹೋಯಿತು."

ರಾಮಲಾಲನ ಮಾತುಗಳು ಮುಗಿಯುವಷ್ಟರಲ್ಲಿ ರೇವತಿ ಹುಚ್ಚಿಯಂತೆ ಓಡಿ ಜನರ ಗದ್ದಲ ನೆರೆದಿದ್ದಲ್ಲಿಗೆ ಬಂದಳು. ಕಿಶನ ಗಟ್ಟಿಯಾಗಿ ಅಳುತ್ತಿದ್ದ. ರಕ್ತದ ಮಡುವಿನಲ್ಲಿ ಶ್ರೀಧರ ಪ್ರಜ್ಞಾಹೀನನಾಗಿ ಬಿದ್ದಿದ್ದ. ರೇವತಿಯನ್ನು ಕಂಡು ಜನ ಸರಿದು ದಾರಿ ಮಾಡಿಕೊಟ್ಟರು. ಭಯ-ಆತಂಕಗಳಿಂದ ಅವಳು ಒಂದು ಕ್ಷಣದಲ್ಲಿ ಎಲ್ಲವನ್ನೂ ನೋಡಿದಳು. ಮರುಕ್ಷಣದಲ್ಲಿ ಕಿಶನನನ್ನು ಎದೆಗವಚಿಕೊಂಡು ಶ್ರೀಧರನ ಬಳಿ ಹೋಗಿ ಕುಳಿತು ಹುಚ್ಚಿಯಂತೆ ಅವನ ದೇಹದ ಮೇಲೆ ಕೈಯಾಡಿಸತೊಡಗಿದಳು.

ಅಪಘಾತವಾದ ಮೂರನೆಯ ದಿನ ಆಸ್ಪತ್ರೆಯಲ್ಲಿ ಶ್ರೀಧರನ ಒಂದು ಕಾಲನ್ನು ಕತ್ತರಿಸಿ ಹಾಕಿದರು. ವಿಶ್ವಪ್ರಯತ್ನ ಮಾಡಿಯೂ ರೇವತಿ ಶ್ರೀಧರ ಕುಂಟನಾಗುವುದನ್ನು ತಪ್ಪಿಸಲಾರದೆಹೋದಳು. ಒಮ್ಮೆಯಂತೂ ಅವಳು "ಡಾಕ್ಟರರೇ, ನನ್ನ ಕಾಲನ್ನು ಕತ್ತರಿಸಿ ಅವನಿಗೆ ಅಂಟಿಸಲಾರಿರಾ?" ಎಂದು ಕೂಡ ಕೇಳಿದಳು.

ಅವಳ ಹುಚ್ಚನ್ನು ಕಂಡು ಡಾಕ್ಟರರು ನಕ್ಕರು. ವಿಧಿಯ ಇಚ್ಛೆಯನ್ನು ರೇವತಿ ಸ್ವೀಕರಿಸಬೇಕಾಗಿ ಬಂದರೂ ಅವಳ ಎದೆ ಒಡೆದು ಹೋಯಿತು. ಅವಳು ನಿತ್ಯವೂ ದವಾಖಾನೆಗೆ ಹೋಗುತ್ತಿದ್ದಳು. ಶ್ರೀಧರನನ್ನು ಕಂಡು ಮುಗುಳ್ನಗುತ್ತಿದ್ದಳು. ತನ್ನ ತಲೆಯನ್ನೆ ಇಡುವಂತೆ ಅವನ ಎದೆಯ ಮೇಲೆ ಕೈಯಿಡುತ್ತಿದ್ದಳು. ನಿದ್ದೆ ಮಾಡುತ್ತಿದ್ದ ಶ್ರೀಧರನನ್ನು ಉದ್ದೇಶಿಸಿ ಅವಳು ಎಷ್ಟೋ ಸಲ ಮೌನವಾಗಿ "ಈ ಹತಭಾಗ್ಯಳಿಗಾಗಿ ನೀನೆಷ್ಟು ಕಷ್ಟಪಟ್ಟೆ! ನಾನು ನಿನಗೆ ಏನೂ ಕೊಡಲಾರದೆ ಹೋದೆ. ಈ ಭಾರವನ್ನು ನಾನು ಹೇಗೆ ಸಹಿಸಬಲ್ಲೆ?" ಎಂದು ನಿವೇದಿಸಿಕೊಂಡಳು.

ಶ್ರೀಧರ ಬಹಳ ಕಡಿಮೆ ಮಾತನಾಡುತ್ತಿದ್ದ. ಬರೇ ನೋಡುವುದಷ್ಟೆ ಅವನಿಗೆ ಪ್ರಿಯವಾಗಿತ್ತು. ರೇವತಿಗೆ ಅವನ ಮಾನಸಿಕ ವೇದನೆ ಅರಿವಾಗುತ್ತಿತ್ತು. ಅವಳು ಪ್ರೇಮದಲ್ಲಿ ಮುಳುಗಿಹೋಗಿ "ಹೆದರುವಿಯಾಕೆ? ನಾನಿದ್ದೇನಲ್ಲ. ಕೆಲ ವರ್ಷಗಳಲ್ಲಿ ಕಿಶನ ದೊಡ್ಡವನಾಗುತ್ತಾನೆ," ಎನ್ನುತ್ತಿದ್ದಳು.

"ಹೌದು ದೊಡ್ಡವನಾಗುತ್ತಾನೆ" ಎಂದು ಶ್ರೀಧರ ಹೇಳುತ್ತಿದ್ದ. ಒಂದು ದೀರ್ಘ ಅರ್ಥ ತುಂಬಿದ ನಿಃಶ್ವಾಸವು ಅವನ ಅಂತರಾಳದಿಂದ ಹೊರಟು ಶೂನ್ಯದಲ್ಲಿ ವಿಲೀನವಾಗುತ್ತಿತ್ತು. ಅದರ ಅರ್ಥ ರೇವತಿಗೆ ತಿಳಿದರೂ ಅದಕ್ಕೆ ಪ್ರತಿವಾದ ಮಾಡುವ ಸಾಹಸ ಅವಳಿಂದಾಗಲಿಲ್ಲ. ಆದರೆ ಈಗ ಅವಳು ವೇದನಾಪೂರ್ಣ ಗೀತಗಳನ್ನು ಹಾಡುವುದನ್ನು ಬಿಟ್ಟಿದ್ದಳು. ಅವಳಿಗೀಗ ಹಿಮಾಲಯದ ಸೌಂದ-

ಯಾತನೆ ಕಲ್ಪನೆಯಿಂದ ಬಿಡುಗಡೆಯಾಗುತ್ತಿರಲಿಲ್ಲ. ಅದರ ಜತೆಲು ಭರದಿಂದ ಓಡುವ ಟ್ರಕ್ಕು, ಅದರ ಅಡಿಗೆ ಸಿಲುಕಲಿರುವ ಕಿಶನ್, ಅವನನ್ನು ಳಿಸಲು ಹುಚ್ಚನಂತೆ ಓಡುತ್ತಿರುವ ಶ್ರೀಧರರ ಚಿತ್ರ ಅವಳ ಕಣ್ಣೆದುರು ಕಟ್ಟುತ್ತಿತ್ತು.

ಕಿರುಚಿಕೊಂಡು ಅವಳು ಕಣ್ಣು ಮುಚ್ಚಿಕೊಳ್ಳುತ್ತಿದ್ದಳು. ಆದರೆ ಒಳಗಣ್ಣಿಗೆ ರಕ್ತದ ಮಡುವೇ ಕಾಣಿಸುತ್ತಿತ್ತು. ವ್ಯಾಕುಲತೆಯಿಂದ ಅವಳು ಮತ್ತೆ ಕಣ್ತೆರೆದು ಅಸ್ಪುಟವಾಗಿ "ಎಂಥ ದೊಡ್ಡ ಮನುಷ್ಯನಿರುವಿ" ಎಂದೆನ್ನುತ್ತಿದ್ದಳು.

ಒಂದು ದಿನ ಅವಳು ಆಸ್ಪತ್ರೆಯಿಂದ ತಿರುಗಿ ಬಂದ ಮೇಲೆ ಯಾರೋ ಬಾಗಿಲು ತಟ್ಟಿದರು. ಬಾಗಿಲು ತೆರೆದು ನೋಡಿದಾಗ ಸ್ವಾಮಿಯೊಬ್ಬ ನಿಂತಿರುವುದು ಕಾಣಿಸಿತು. ಕತ್ತಲಲ್ಲಿ ಅವಳಿಗೆ ಗುರುತು ಹತ್ತಲಿಲ್ಲ. "ಯಾರು ಬೇಕಿತ್ತು?" ಎಂದವಳು ಕೇಳಿದಳು.

ಆ ಸ್ವಾಮಿ ಮುಂದೆ ಬಂದ. ಮಿಂಚು ಹೊಳೆದಂತಾಯಿತು. ಕತ್ತಲೆ ಬೆಳಗಿತು. ಸ್ವಾಮಿ ಕುಶಲಾನಂದನಾಗಿದ್ದ. ಆತ ಅವಳನ್ನು ಅಭಿಮಾನಪೂರ್ವಕವಾಗಿ ನೋಡುತ್ತಲಿದ್ದ. ಅವಳು ನಡುಗುತ್ತಿದ್ದಳು. ಬಹಳ ಹೊತ್ತು ಹೀಗೆ ಕಳೆದ ಮೇಲೆ ಆತ "ಒಳಗೆ ಬರಲೆ?" ಎಂದು ಕೇಳಿದ.

ಅವಳು ಎಚ್ಚೆತ್ತಳು. "ಇಲ್ಲ. ಬರಲಾರೆ, ಬರಲಾರೆ. ಹೋಗು, ಹೋಗು."

ಅವಳ ಧ್ವನಿ ಕಠೋರವಾಗಿತ್ತು. ಹಿಡಿದು ವಾಯು ಮುಖವನ್ನು ಕೊರೆಯುವಂತಿತ್ತು. ಕುಶಲಾನಂದನಿಗೆ ಹೋಗೆಂದು ಹೇಳಿದ ರೇವತಿ ಒಳಗೋಡಿದಳು. ಆದರೆ ಬಾಗಿಲು ಮುಚ್ಚಲು ಮರೆತಳು. ಕುಶಲಾನಂದ ಒಳಗೆ ಬಂದ. ಮಲಗಿದ್ದ ಕಿಶನನ ಮೇಲೆ ಆತನ ಮೊದಲ ದೃಷ್ಟಿ ಬಿತ್ತು. ಆತ ತಡವರಿಸಿದ. ರೇವತಿ ಅವನನ್ನು ನೋಡುತ್ತಲೇ ಇದ್ದಳು. ಕಂಪಿತ ಧ್ವನಿಯಲ್ಲಿ ಕುಶಲಾನಂದ "ನಿನ್ನ ಮಗನೇ?" ಎಂದು ಕೇಳಿದ.

ಕೆರಳಿದ ವ್ಯಾಘ್ರದಂತೆ ರೇವತಿ ಉತ್ತರವಿತ್ತಳು, "ಹೌದು ನನ್ನ ಮಗ. ನೀನು ಇಲ್ಲಿಗೇಕೆ ಬಂದೆ? ನಡೆ. ಹೊರಟುಹೋಗು."

ಆದರೆ ಕುಶಲಾನಂದ ಹೊರಡಲಿಲ್ಲ. ಕುಳಿತುಕೊಂಡ. "ಹೋಗುವುದಂತೂ ಇದ್ದೇ ಇದೆ. ಶ್ರೀಧರನನ್ನು ನೋಡಲು ಬಂದಿದ್ದೆ," ಎಂದ.

ಮುಸುಕೆಳೆದು "ದೂರದಿಂದಲೇ ನೋಡಿದೆ, ಪಾಪ!" ಎಂದ.

ರೇವತಿ ಚಡಪಡಿಸಿ "ನಿನಗೆ ಅಲ್ಲಿ ಹೋಗಲು...." ವಾಕ್ಯ ಮುಗಿಯುವಷ್ಟರಲ್ಲಿ ಕುಶಲಾನಂದ ಅವಳ ಕಾಲು ಹಿಡಿದುಕೊಂಡು ತನ್ನ ತಲೆಯನ್ನು ಅದಕ್ಕೆ ಚಚ್ಚತೊಡಗಿದ. ಈ ಆಕಸ್ಮಿಕ ವರ್ತನೆಯನ್ನು ಕಂಡು ರೇವತಿಗೆ ತನ್ನನ್ನು ನಿಯಂತ್ರಿಸಿಕೊಳ್ಳುವುದು ಕಠಿನವಾಯಿತು. ತನ್ನ ಎಚ್ಚರ ತಪ್ಪುತ್ತಿರುವಂತೆ ಅವಳಿಗೆ ಭಾಸವಾಯಿತು. ಅವಳಿಗೆ ಮತ್ತೆ ಪ್ರಜ್ಞೆ ಬಂದು ನೋಡಿದಾಗ ಅಲ್ಲಿ ಯಾರೂ ಇರಲಿಲ್ಲ. ನಡೆದದ್ದೆಲ್ಲವೂ ಕನಸಿರಬೇಕು ಎಂದುಕೊಳ್ಳುತ್ತ ಅವಳು ಬಹಳ ಹೊತ್ತಿನವರೆಗೆ ಬಾಗಿಲತ್ತ ನೋಡುತ್ತ ಕುಳಿತಳು. ಬಳಿಕ ಮಗನ ಬಳಿಯೆ ಮಲಗಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಬಾಗಿಲು ತೆರೆದುಕೊಂಡೇ ಇತ್ತು.

ಕಿಶನನನ್ನು ಪುನಃ ಪುನಃ ಎದೆಗವಚಿಕೊಂಡು ಅವಳು "ಕಪಟಿ, ಛಲಗಾರ, ಕಳ್ಳ! ಈಗಂತೂ ನೊಂದಲಿಗಿಂತಲೂ...." ಎಂದು ನಾಲಿಗೆ ಕಚ್ಚಿಕೊಂಡಳು.

ಮರುದಿನ ಕುಶಲಾನಂದ ಮತ್ತೆ ಬಂದ. ಅವನು ಬರುತ್ತಾನೆ, ಬಂದರೆ ಮಾತಾಡಬಾರದು ಎಂದು ರೇವತಿ ಅಂದುಕೊಂಡಿದ್ದಳು. ಬಂದ ಮೇಲೆ ಆತ ಇದ್ದಷ್ಟು ಹೊತ್ತು ಕ್ಷಮೆ ಯಾಚಿಸುತ್ತಲೇ ಇದ್ದ. "ನಾನು ತುಂಬ ಹೇಡಿಯಾಗಿ ಬಿಟ್ಟೆ. ಮನೆಯವರನ್ನು ವಿರೋಧಿಸಲಾರದೆ ಹೋದೆ," ಎಂದನಾತ. ಆದರೆ ರೇವತಿ ಏನೂ ಉತ್ತರ ಕೊಡಲಿಲ್ಲ. ಕುಶಲಾನಂದ ಕಿಶನನನ್ನು ಮುದ್ದಿಸಬಯಸಿದ. ಆದರೆ ಕಿಶನ ಅವನ ಹತ್ತಿರ ಬರಲೊಪ್ಪಲಿಲ್ಲ. ಕುಶಲಾನಂದ ಹೊರಟುಹೋದಾಗ ಕಿಶನ "ಅಮ್ಮಾ, ಇವನು ಯಾರು?" ಎಂದು ಕೇಳಿದ.

"ಅ! ಅವನೇ-ಅವನು ನಮ್ಮ ಊರಿನ

ಒಬ್ಬ ಮನುಷ್ಯ," ಎಂದುತ್ತರವಿತ್ತು ರೇವತಿ ನಕ್ಕಳು. ಪುನಃ ಪುನಃ ಶಿಶುವಿನ ಮುಖವನ್ನು ಚುಂಬಿಸಿದಳು.

ಮುಂದೆ ಎರಡು ದಿನ ಕುಶಲಾನಂದ ಬರಲಿಲ್ಲ. ಆದರೆ ಮೂರನೆಯ ದಿನ ರಾತ್ರಿ ಬಹಳ ಹೊತ್ತಾದ ನಂತರ ಬಾಗಿಲು ಬಡಿದ ಸಪ್ಪಳಾಯಿತು. ರೇವತಿ ಮಲಗಿದಲ್ಲಿಂದ ಏಳಲಿಲ್ಲ. ಮತ್ತೆ ಬಾಗಿಲು ಸಪ್ಪಳ. ಆಗಲೂ ಅವಳು ಏಳಲಿಲ್ಲ. ಮುಂದೈದು ನಿಮಿಷ ಕಳೆದು ಮತ್ತೆ ಬಾಗಿಲು ತಟ್ಟಿದ ಸಪ್ಪಳ ಕೇಳಿಬರಲು ಅವಳೆದ್ದು ಬಾಗಿಲನ್ನು ತೆರೆದಳು. ಒಳಗೆ ಬಂದು ಕುಶಲಾನಂದ ಬಹಳ ಹೊತ್ತಿನ ವರೆಗೆ ಕುಂಠಿತ ಮನದಿಂದ ಮೌನವಾಗಿ ಕುಳಿತು ನಂತರ "ನಾನಿನ್ನು ಹೋಗುತ್ತೇನೆ. ನಾನು ಬಹಳ ದೊಡ್ಡ ಪಾಪ ಮಾಡಿದ್ದೇನೆ," ಎಂದ.

ಕತ್ತಲೆಯಲ್ಲಿ ರೇವತಿ ಸ್ತಬ್ಧವಾಗಿ ಮೂರ್ತಿಯಂತೆ ಕುಳಿತಿದ್ದಳು. ಕುಶಲಾನಂದ ಮತ್ತೆ "ನನ್ನಿಂದಾಗಿ ನೀನು ಇಷ್ಟು ಕಷ್ಟದಲ್ಲಿರುವಿ" ಎಂದ.

ರೇವತಿ ಈಗಲೂ ಮಾತಾಡಲಿಲ್ಲ. ಕೆಲ ಕ್ಷಣ ಕಳೆದು ಆತ ಹೇಳಿದ: "ನಾನೀಗ ಏನು ತಾನೆ ಮಾಡಬಲ್ಲೆ? ನನ್ನ-ನನ್ನ ಹತ್ತಿರ ಕೆಲ ರೂಪಾಯಿಗಳಿವೆ. ನೀನು –"

ರೇವತಿ ಈಗ ಕೆರಳಿ "ನನಗೆ ರೂಪಾಯಿಗಳ ಅಗತ್ಯವಿಲ್ಲ" ಎಂದಳು.

"ಆದರೆ...."

"ಇಲ್ಲ."

ಮತ್ತೆ ಮೌನ ಆವರಿಸಿತು. ರೇವತಿಯೇ ಮುಂದಾಗಿ "ಇನ್ನೇನಾದರೂ ಹೇಳುವುದಿದೆಯೆ?" ಎಂದು ಕೇಳಿದಳು.

"ಹಂ."

"ಏನು?"

ಆತ ಹೇಳಬೇಕೆಂದರೂ ಅವನಿಂದ ಧ್ವನಿ ಹೊರಡಲಿಲ್ಲ. ರೇವತಿ ಹಾದಿ ಕಾಯ್ದಳು. ಕೊನೆಗೆ ಆತ, "ನನ್ನನ್ನು ಕ್ಷಮಿಸು. ನಾನು ಈಗಲೂ.... ಈಗಲೂ...."

ಆತ ಒಂದೇ ಉಸಿರಿನಲ್ಲಿ ಎಲ್ಲವನ್ನು ಹೇಳಿಬಿಟ್ಟ. ರೇವತಿಯ ಶರೀರ ತೀವ್ರವಾಗಿ ಕಂಪಿಸಿತು. ಆದರೆ ಕೇಳಿದ್ದನ್ನೆಲ್ಲ ಕೇಳುತ್ತೇನೆಂದು ಕೊಂಡಿದ್ದರಿಂದಲೇ ಏನೊ ಅವಳು ಸಿಟ್ಟಿಗೇಳಲಿಲ್ಲ, ಅಳಲೂ ಇಲ್ಲ. ಕ್ಷಣಕಾಲ ಕಳೆದು ಅವಳು ನಮ್ರವಾಗಿ "ನೀನು ಇಲ್ಲಿಂದ ಹೊರಟುಹೋಗು. ವ್ಯರ್ಥ ಯಾತಕ್ಕೆ ವೇಳೆ ಕಳೆಯುವೆ?" ಎಂದಳು.

ಈ ಶಬ್ದಗಳಲ್ಲಿದ್ದ ಆತ್ಮೀಯತೆ ಮತ್ತು ಸ್ನಿಗ್ಧತೆಯನ್ನು ಕಂಡು ಕುಶಲಾನಂದ ಆಶ್ಚರ್ಯ ಮತ್ತು ನಾಚಿಕೆಯಿಂದ ಮುದುಡಿ ಹೋದ. ಬಹಳ ಹೊತ್ತಿನ ವರೆಗೆ ಆತ ದಿಙ್ಮೂಢನಂತೆ ಕುಳಿತ. ಆಮೇಲೆ ಎದ್ದು ನಿಂತು ಗದ್ಗದ ಸ್ವರದಲ್ಲಿ "ಹೋಗಲಾ?" ಎಂದು ಕೇಳಿದ.

"ಹುಂ. ಇನ್ನೊಮ್ಮೆ ಇಲ್ಲಿಗೆ ಬರಕೂಡದು."

ಆತ ಹೋಗಲೆಂದು ತಿರುಗಿದವ ಶಿಶುವನ್ನು ನೋಡುತ್ತ ನಿಂತ, "ಒಮ್ಮೆ ಹುಡುಗನನ್ನು ಮುದ್ದಿಸಲೇ?" ಎಂದ ಪ್ರಾರ್ಥಿಸಿಕೊಳ್ಳುವವನಂತೆ.

ಬೇಡವೆನ್ನಬೇಕೆಂದಿದ್ದರೂ ರೇವತಿ ಹಾಗೆ ಹೇಳಲಾರದೆ ಹೋದಳು. ಕುಶಲಾನಂದ ಮೆಲ್ಲಗೆ ಹೋಗಿ ಶಿಶುವನ್ನು ಮುದ್ದಿಟ್ಟು ಸೈನಿಕನಂತೆ ದೃಢ, ಶಾಂತ, ಮೌನ ರೀತಿಯಲ್ಲಿ ಹೊರಟುಹೋದ. ರೇವತಿ ಆ ದಿಕ್ಕನ್ನೆ ನೋಡುತ್ತ ಕುಳಿತಳು. ಕುಶಲಾನಂದ ಕತ್ತಲೆಯಲ್ಲಿ ಕರಗಿ ಹೋದಾಗಲೂ ನೋಡುತ್ತಲೇ ಇದ್ದಳು. ಬಹಳ ಹೊತ್ತಿನ ಮೇಲೆ ಎದ್ದು ಬಾಗಿಲು ಮುಚ್ಚಿ ಮಗನ ಬಳಿ ಬಂದು ಅಡ್ಡಾದಳು. ಮಗನ ತಲೆಯನ್ನು ತನ್ನೆದೆಯ ಮೇಲೆ ಇಟ್ಟುಕೊಂಡು ಅವನನ್ನು ತನ್ನ ದೇಹದಲ್ಲಿ ವಿಲೀನಗೊಳಿಸಿಕೊಳ್ಳುವವಳಂತೆ ಅವನನ್ನು ಬಿಗಿಯಾಗಿ ಅಪ್ಪಿಕೊಂಡಳು.

ಆ ಮೇಲೆ ಕುಶಲಾನಂದ ಮರಳಿ ಬರಲಿಲ್ಲ. ಒಂದು ಕಾಲು ಕಳೆದುಕೊಂಡು ಶ್ರೀಧರ ಆಸ್ಪತ್ರೆಯಿಂದ ಮನೆಗೆ ಮರಳಿದ. ಅವನ ಸ್ವಭಾವದಲ್ಲಿ ಈಗ ತುಂಬ ಬದಲಾವಣೆಯಾಗಿತ್ತು. ಕ್ರೋಧ ಮತ್ತು ಅಸಹಿಷ್ಣುತೆಯ ಮುಖವಾಡ ಧರಿಸಿ ದೌರ್ಬಲ್ಯವು ಅವನ ಅಂತರಂಗದಲ್ಲಿ ವ್ಯಾಪಿಸಿತ್ತು. ತನಗಾಗಿ ರೇವತಿ ಒದ್ದಾಡುವುದನ್ನು ಆತ ಕಾಣುತ್ತಿ

ದ್ದರೂ ತನ್ನ ಮತ್ತು ಅವಳ ನಡುವಿನ ಅದೃಶ್ಯ ಕಂದಕವನ್ನು ಅತ ದಾಟಲಾರದವನಾಗಿದ್ದ. ತಿಳಿದೊ ತಿಳಿಯದೆಯೋ ಅವನ ಈ ದೌರ್ಬಲ್ಯ ಅವನನ್ನು ಇನ್ನಷ್ಟು ಪಥಭ್ರಷ್ಟನನ್ನಾಗಿ ಮಾಡಿದವು. ಅತ್ಯಹೆಚ್ಚು ಕುಡಿಯಹತ್ತಿದ, ಜುಗಾರಿ ಆಡಹತ್ತಿದ. ಮನೆಯಲ್ಲಿ ಆಗಾಗ ಹೊಡೆದಾಟದ ಪ್ರಸಂಗ ಬರತೊಡಗಿತು. ಹೆಚ್ಚು ಕುಡಿದು ಬಂದ ದಿನ ಮನೆಯಲ್ಲಿ ಬಿರುಗಾಳಿಯನ್ನೇ ಎಬ್ಬಿಸುತ್ತಿದ್ದ. "ನಿನಗೇನಾಗಿದೆ?" ಎಂದು ರೇವತಿ ಅತ್ತು ಕೂಗಾಡುತ್ತಿದ್ದಳು.

ಒಂದು ದಿನ ಹೆಂಡದಮಲಿನಲ್ಲಿ ಶ್ರೀಧರ ಹೇಳಿದ, "ಜಗತ್ತಿನಲ್ಲಿ ಗಂಡನಿಗೆ ದ್ರೋಹ ಮಾಡುವ ಹೆಂಡರಿದ್ದಾರೆ. ಆದರೆ ನಿನ್ನಿಂದ ಅದೂ ಆಗುವುದಿಲ್ಲ."

ಸ್ತಬ್ಧಳಾಗಿ ರೇವತಿ ಅವನ ಮುಖವನ್ನೇ ನೋಡುತ್ತ ನಿಂತಳು. ಮರುದಿನ ಬೆಳಗಾದೊಡನೆ ಶ್ರೀಧರ ಎಂದಿನಂತೆ ಅವಳ ಕ್ಷಮೆ ಕೇಳಿದಾಗ ಅವಳು ಪ್ರೇಮಭರಿತ ಸಿಟ್ಟಿನಿಂದ "ಸುಮ್ಮನಿರು" ಎಂದಳು.

"ನಾನು-ನಾನು ಶಾಶ್ವತವಾಗಿ ಸುಮ್ಮನಾಗುವಂತಾದರೆ...."

"ಎಂಥ ಮನುಷ್ಯನಪ್ಪಾ ನೀನು, ಹೀಗೆಲ್ಲ ಹೇಳುತ್ತಿ? ನೀನು ಮಾಡಲಾರದ್ದು ಏನಿದೆ?"

ಸಂಜೆಯಾಗುವಷ್ಟರಲ್ಲಿ ಈ ಪ್ರಣಯ ಕಲಹ ಸಮಾಪ್ತವಾಗಿ ಶ್ರೀಧರ ಮತ್ತೆ ದೌರ್ಬಲ್ಯದ ಚಕ್ರವ್ಯೂಹದಲ್ಲಿ ಸಿಲುಕಿಕೊಂಡ. ಸರಿಯಾದ ಚಿಕಿತ್ಸೆ ಸಿಗದ್ದರ ಪರಿಣಾಮ ಇದೆಲ್ಲ ಎಂದು ರೇವತಿ ಯೋಚಿಸಿದಳು. ತನ್ನ ಹತ್ತಿರ ಹಣವಿದ್ದಿದ್ದರೆ? ಆಗ ಮನ ಬಂದ ಚಿಕಿತ್ಸೆ ಮಾಡಿಸಬಹುದಿತ್ತು. ಪರ್ವತ ಕನ್ಯೆ ದುಡಿತಕ್ಕೆ ಅಂಜುವವಳಲ್ಲ. ಆದರೆ ಈ ಯುಗದಲ್ಲಿ ಹಣ ದುಡಿತದಿಂದ ಸಿಗುವುದಿಲ್ಲ. ಅವಳೇನು ಮಾಡಬೇಕು? ಎಲ್ಲಿಂದ ಹಣ ತರಬೇಕು?

"ಇಷ್ಟೆಲ್ಲ ಮಾಡಿದರೂ ಈ ಅವಸ್ಥೆ. ಕಿಶನನೇ ಒಳ್ಳೆಯವ. ನೆರೆಹೊರೆಯವರಲ್ಲಿ ಏನೇನೆಲ್ಲ ಕಂಡು ಬೇಕೆನ್ನುತ್ತಾನೆ ನಿಜ. ಆದರೆ ನಾನೊಮ್ಮೆ ಇಲ್ಲವೆಂದರೆ ಮತ್ತೆ ಆ ಮಾತೆತ್ತುವುದಿಲ್ಲ. ಆದರೆ ಈ ಶ್ರೀಧರ ಜೀವನವನ್ನೇ ಕಷ್ಟಸಾಧ್ಯ ಮಾಡಿಬಿಟ್ಟಿದ್ದಾನೆ," ಎಂದು ಯೋಚಿಸುತ್ತ ರೇವತಿ ಮರುಕ್ಷಣದಲ್ಲಿ ಮೈ ನಡುಗಿಸಿ "ಇಲ್ಲ. ಆ ಅಪಘಾತ ಅವನನ್ನು ಹೀಗೆ ಮಾಡಿದೆ. ಇಲ್ಲವಾದರೆ ಅತನೆಂಥ ದೊಡ್ಡ ಮನುಷ್ಯ" ಎಂದುಕೊಳ್ಳುತ್ತಿದ್ದಳು.

ಬಳಿಕ ಪಶ್ಚಾತ್ತಾಪದ ಕಣ್ಣೀರು ಸುರಿಸುತ್ತಿದ್ದಳು.

ಒಂದು ದಿನ ಹೆಂಡ ಕುಡಿದು ಮತ್ತಿನಲ್ಲಿ ಶ್ರೀಧರ ಕಾಲುವೆಯ ದಂಡೆಗುಂಟ ಬರುತ್ತಿದ್ದಾಗ ಸರಕಾರೀ ಟ್ರಕ್ಕೊಂದು ಬಂತು. ಅದರಿಂದ ಪಾರಾಗಲು ಯತ್ನಿಸುವಾಗ [illegible] ಶ್ರೀಧರ ಉರುಳಿ ಕಾಲುವೆಯಲ್ಲಿ ಬಿದ್ದ.

ಎರಡು ದಿನಗಳ ನಂತರ ಒಂದು ಸೇತುವೆಗೆ ಸಿಕ್ಕಿ ಹಾಕಿಕೊಂಡಿದ್ದ ಅವನ ಶವ ಸಿಕ್ಕಿತು. ಆಗ ರೇವತಿ ಗೈದ ಪ್ರಲಾಪವನ್ನು ಕಂಡು ನೆರೆದವರ ಹೃದಯ ವಿದೀರ್ಣವಾಯಿತು. ಆದರೆ ಕ್ರಿಯಾ ಕರ್ಮ ಆಗಲೇಬೇಕಲ್ಲ. ಅದನ್ನು ಹೇಗೋ ತೀರಿಸಿಕೊಂಡ ನಂತರ ರೇವತಿಗೆ ತಾನೀಗ ಅಸಹಾಯ ಏಕಾಂಗಿ ಎಂಬ ಅರಿವು ಬಂತು. ಅವಳಿಗೆ ಮತ್ತೆ ವೇದ [illegible] ಗೀತಗಳು ನೆನಪಿಗೆ ಬರತೊಡಗಿದವು. ಅವುಗಳ ಅರ್ಥದೊಂದಿಗೆ ಅವಳು ದೂರ [illegible]ಗುತ್ತಿದ್ದಳು. ಆದರೆ ಬಿಕ್ಕಿ ಬಿಕ್ಕಿ ಅಳುತ್ತಿರಲಿಲ್ಲ. ಅವಳು ಕಿಶನನ ಯೋಗಕ್ಷೇಮ ನೋಡಿಕೊಳ್ಳಬೇಕಲ್ಲ. ಅತ ಆಡಾಡುತ್ತಲೇ ಬಂದು "ಅಮ್ಮಾ, ಕಾಕಾ ಎಲ್ಲಿ ಹೋಗಿದ್ದಾನೆ?" ಎಂದು ಕೇಳುತ್ತಿದ್ದ.

"ಬಹಳ ದೂರ ಹೋಗಿದ್ದಾರೆ. [illegible] ಹಣ ತರುತ್ತಾರೆ."

"ಆಟಿಗೆ ತರುತ್ತಾರಲ್ಲವೆ?"

"ಹೂಂ."

"ಪುಸ್ತಕ?"

"ಹೂಂ."

ಕಿಶನ ನಕ್ಕು ಮಂಗನ ಮರಿಯಂತೆ ತಾಯಿಯ ಮಡಿಲಿಗೆ ಜಿಗಿದು "ಇನ್ನು ನಾನ[illegible] ಓದಲು ಹೋಗುತ್ತೇನೆ. ಅಲ್ಲವೆ ಅಮ್ಮಾ? ಗೋಪಾಲ, ಹರಿ, ದೀನು-ಎಲ್ಲರೂ ಹೋಗ[illegible]

ತ್ತಾರೆ" ಎನ್ನುತ್ತಿದ್ದ.

"ಹೌದು. ಒಂದು ದಿನ ನಿನ್ನನ್ನು ಶಾಲೆಗೆ ಕರೆದುಕೊಂಡು ಹೋಗುತ್ತೇನೆ."

ಆ ಬಳಿಕ ಅವಳು ಅವನೊಂದಿಗೆ ಮಕ್ಕಳಾಟಿಕೆಯ ಮಾತಾಡುತ್ತ ನಗನಗುತ್ತ ಕಾಲ ಕಳೆಯುತ್ತಿದ್ದಳು. ಆದರೆ ಜೀವನವೆಂದರೆ ಬರೀ ನಗು-ಅಳುಗಳಷ್ಟೆ ಅಲ್ಲ. "ಈಗೇನು ಮಾಡಬೇಕು? ಗಂಡನ ಅಂಗಡಿ ನಡೆಸಬೇಕೇ ಅಥವಾ ಬೇರೆಲ್ಲಾದರೂ ಹೋಗಬೇಕೆ? ಒಮ್ಮೆ ಸದ್ದಿಲ್ಲದೆ ಬಂದ ಸ್ಥಳಕ್ಕೇ ತಿರುಗಿ ಹೋಗಬೇಕೇ ಅಥವಾ ಕುಶಲಾನಂದ...." ಎಂದೆಲ್ಲ ಅವಳು ಯೋಚಿಸುತ್ತಿದ್ದಳು.

ಕುಶಲಾನಂದನ ನೆನಪು ಆಗುತ್ತಲೆ ಮಲೇರಿಯ ಬಂದವರಂತೆ ಅವಳು ನಡುಗಿ ಅಸ್ಫುಟ ಸ್ವರದಲ್ಲಿ ಏನನ್ನೊ ಬಡಬಡಿಸಿದಳು. ನಂತರ ಮೌನ ಸ್ವೀಕರಿಸಿದಳು. ಆದರೆ ಮೌನಕ್ಕೆ ಸಹಸ್ರ ನಾಲಿಗೆಗಳಿವೆ. ಯಾರೊ ಅವಳ ಕಿವಿಯಲ್ಲಿ "ನಿನ್ನ ಮಗ ಅವನ ಮಗ. ನೀನೀಗ ಒಬ್ಬಂಟಿಗಳು. ನೀನು ಅ ವ ನ ವ ಳೇ," ಎಂದಂತಾಯಿತು. ಅವಳು ಮನದಲ್ಲಿ "ಇದುವರೆಗೆ ಆಗದ್ದು ಇನ್ನು ಆದೀತೇ?" ಎಂದುಕೊಂಡಳು.

ಏನಾಶ್ಚರ್ಯ! ಹಿಂದಿನ ಆವೇಶದಿಂದ ಕುಶಲಾನಂದ ನಿಂತಿದ್ದ. ಅದೇ ರೂಪ, ಅದೇ ಬಣ್ಣ. ಅವಳು ಕಂಪಿಸಿದಳು. "ನೀನು-ನೀನು ಯಾವಾಗ ಬಂದಿ?" ಎಂದು ಕೇಳಿದಳು.

"ಇದೇ ಈಗ."

ಇಬ್ಬರೂ ಶೋಕಾಕುಲರಾಗಿ ಬಹಳಹೊತ್ತು ಸುಮ್ಮನೆ ಕುಳಿತರು. ಆತ ಮಾತಾಡಿದಾಗ ಬರೀ ಶೋಕ ಪ್ರದರ್ಶನ ಮಾಡಿ ಹೋದ. ಮತ್ತೆ ಮೂರು ದಿನ ಆತ ಬರಲಿಲ್ಲ. ಪರೋಕ್ಷವಾಗಿ ಅವನ ಸಂದೇಶ ಬಂತು. ನಾಲ್ಕನೆಯ ದಿನ ಸ್ವತಃ ಬಂದ. ಓರೆಗಣ್ಣಿನಿಂದ ಅವನನ್ನು ನೋಡಿ ತಲೆ ತಗ್ಗಿಸಿಕೊಂಡು "ಕೂಡ್ರು" ಎಂದಳು ರೇವತಿ.

ತುಸು ಹೊತ್ತು ಸುಮ್ಮನೆ ಕುಳಿತು ಬಳಿಕ ಕುಶಲಾನಂದ ಪಶ್ಚಾತ್ತಾಪದಗ್ಧ ಧ್ವನಿಯಲ್ಲಿ ಹೇಳಿದ, "ಅದೆಲ್ಲ ಕೆಟ್ಟದ್ದೇ ಆಯಿತು. ಇನ್ನು ಅದನ್ನೆಲ್ಲ ಮರೆತುಬಿಡು."

ರೇವತಿ ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡು ಅತ್ತಳು. ಹತಬುದ್ಧನಾದ ಕುಶಲಾನಂದ ಗಾಬರಿಯಾದ. ನಂತರ ಅವಳ ಕಾಲ ಬಳಿ ಕುಳಿತು ಅವಳ ಮುಖದತ್ತ ಮುಖಮಾಡಿ "ಬೇಡ ಅಳಬೇಡ. ಇನ್ನೂ ಏನೂ ಆಗಿಲ್ಲ. ಬೇಕಾದಾಗ...." ಎನ್ನುತ್ತಿದ್ದಾಗ ರೇವತಿ ಮುಖವೆತ್ತಿ ತುಂಬಿದ ಕಂಠದಿಂದ "ನೀನೇಕೆ ಬಂದೆ?" ಎಂದಳು.

"ಏಕೆಂದರೆ ನಾನು ಇನ್ನೂ ನಿನ್ನನ್ನು ಪ್ರೀತಿಸುತ್ತೇನೆ."

ರೇವತಿ ಕೆಲ ಕ್ಷಣಕಾಲ ನಡುಗುತ್ತಲೇ ಇದ್ದಳು. ಅವಳ ವಕ್ಷಃಸ್ಥಳ ವೇಗವಾಗಿ ಹಾರುತ್ತಿತ್ತು.

"ನಾನು ನಿಜ ಹೇಳುತ್ತೇನೆ. ನನಗೆ ಸಾಕಷ್ಟು ಶಿಕ್ಷೆಯಾಗಿದೆ."

ರೇವತಿ ಮಾತಾಡಲಿಲ್ಲ.

"ನನ್ನ ಮಗನನ್ನು ನನ್ನ ಮಗ ಎಂದು ಕರೆಯುವ ಅಧಿಕಾರವನ್ನು ನನಗೆ ಕೊಡುವುದಿಲ್ಲವೆ?"

ಈಗಲೂ ರೇವತಿ ಮಾತಾಡಲಿಲ್ಲ.

"ನೀನು ನನ್ನನ್ನು ಪ್ರೀತಿಸುವುದಿಲ್ಲವೆ? ಮಾತನಾಡು."

ಈಗ ರೇವತಿ ದೃಢ ಸ್ವರದಲ್ಲಿ ಹೇಳಿದಳು, "ಪ್ರೀತಿಸುತ್ತೇನೆ."

ಆತ ಹರ್ಷದಿಂದ "ನನಗೆ ಗೊತ್ತಿತ್ತು" ಎಂದ.

ಮತ್ತೆ ಅದೇ ಅಶುಭ ಮೌನ. ಕುಶಲಾನಂದ ವಿಹ್ವಲನಾಗಿ "ಏನು ಯೋಚಿಸುತ್ತಿ? ನಡಿ, ಈಗಲೇ ನಡಿ ಎಂದ."

ಮತ್ತೆ ಅದೇ ದೃಢ ಸ್ವರದಲ್ಲಿ ರೇವತಿ ಹೇಳಿದಳು; "ಒಂದು ಮಾತು ಕೇಳು."

"ನಾನಿನ್ನು ಏನನ್ನೂ ಕೇಳುವುದಿಲ್ಲ."

"ಕೇಳಲೇಬೇಕು. ನೀನೇನೇ ಮಾಡಿರಲಿ, ನಾನು ಸದಾ ನಿನ್ನನ್ನು ಬಯಸುತ್ತಲೇ ಇದ್ದೆ. ಈಗಲೂ ಬಯಸುತ್ತೇನೆ. ಆ ಹಿಂದಿನ ದಿನಗಳು ಮರಳಿ ಬರಲಿ ಎಂದು ಬಯಸುತ್ತೇನೆ. ನಿನ್ನ ಪ್ರೇಮದ ಗುರುತಾಗಿ ನಿನ್ನ ಮಗ ನನ್ನ

ಹತ್ತಿರ ಇದ್ದಾನೆ. ಆದರೆ........"

"ಆದರೇನು?"

"ಆದರೆ ನಿನ್ನ ಮಗನಿಗಾಗಿ ಯಾವನು ಎರಡೆರಡು ಸಲ ತನ್ನ ಪ್ರಾಣವನ್ನು ನಿವಾಳಿಸಿದನೊ ಅವನ ನೆನಪು ಮಾತ್ರ ನನ್ನ ಬಳಿ ಇದೆ."

ಮಾತಾಡುತ್ತ ಮಾತಾಡುತ್ತ ಅವಳ ಕಂಠ ಗದ್ಗದಿತವಾಯಿತು. "ಕೈ ಮುಗಿಯುತ್ತೇನೆ. ಆ ನೆನಪನ್ನು ಅಪವಿತ್ರಗೊಳಿಸಬೇಡ. ನೀನು ಹೊರಟುಹೋಗು."

ಆಶ್ಚರ್ಯದಿಂದಲೂ ಆಘಾತದಿಂದಲೂ ತನ್ನ ತಲೆ ಬ್ರಹ್ಮಾಂಡದ ವೇಗದಲ್ಲಿ ಸುತ್ತುತ್ತಿದೆ ಎಂದೆನಿಸಿತು. ನಿಮಿಷಾರ್ಧದಲ್ಲಿ ಪ್ರೇಮ ಮೂಡುವ ಹಿಂದಿನ ಇತಿಹಾಸ ಕಣಕಣವಾಗಿ ನೆನಪಾಯಿತು. ತನ್ನ ನಾಚಿಕೆಗೇಡು ವರ್ತನೆ ನೆನಪಾಯಿತು. ಆದರೆ ಈ ದೃಢ ನಾರಿಯ ಎದುರಿನಲ್ಲಿ ಆ ಭೂತಕಾಲವೆಲ್ಲ ತೊಳೆದು ಹೋದಂತೆನಿಸಿತು. ಆ ನಿಮಿಷದಲ್ಲಿ ರೇವತಿಯ ಮುಖ ಒಮ್ಮಿಂದೊಮ್ಮೆ ಬದಲಾಯಿತು. ಅಲ್ಲಿ ಅವನಿಗೆ ದುಃಖ, ನಿರಾಶೆ, ಅಶಾಂತಿಯಾವುದೂ ಕಾಣಲಿಲ್ಲ. ಅಭಿಮಾನವೂ ಇರಲಿಲ್ಲ. ಅಲ್ಲಿ ಕೇವಲ ಅಗಾಧ ವಿಶ್ವಾಸ, ಅದಕ್ಕಿಂತಲೂ ಹೆಚ್ಚಾಗಿ ಅಪೂರ್ವ ಶಾಂತಿ ಇತ್ತು.

ಕುಶಲಾನಂದ ತನ್ನನ್ನೆ ಮರೆತು ಕೆಲ ಹೊತ್ತು ಅವಳನ್ನೆ ನೋಡುತ್ತ ನಿಂತ. ಬಳಿಕ ನಿಶ್ಶಬ್ದನಾಗಿ ಹೊರಗೆ ಹೋದ. ಅತ ಹೋದ ಮೇಲೆ ರೇವತಿ ಅವನತ್ತ ನೋಡಿದಳು. ಬಳಿಕ ಹಲ್ಲುಗಳಿಂದ ತುಟಿಯನ್ನು ಒತ್ತಿಹಿಡಿದು ಹೊರಗೆ ಬರುತ್ತಿದ್ದ ಅಳುವನ್ನು ತಡೆದಳು. ಅವಳಿನ್ನು ತನ್ನ ಕಣ್ಣೀರನ್ನು ಯಾರಿಗೂ ತೋರಿಸುವುದಿಲ್ಲ. ತನ್ನ ವ್ಯಥೆಯನ್ನು ತಾನೇ ನುಂಗಿಕೊಂಡು ಬಾಳುವಳು. ಹೌದು, ಅವಳು ಬಾಳುವಳು.

*











ಸ್ಪರ್ಮ್ ತಿಮಿಂಗಿಲ

ನೆಲದಿಂದ ನೀರಿಗೆ
ವಲಸೆ ಹೋದ ಸಸ್ತನಿ

# ತಿಮಿಂಗಿಲದ ಕಥೆ

ಡಾ. ತ. ಸದಾನಂದ ರಾವ್

ಮನುಷ್ಯನ ಮನಸ್ಸನ್ನು ಸೆಳೆದ ಸಾಗರದ ಜೀವಿಗಳಲ್ಲಿ ತಿಮಿಂಗಲಕ್ಕೆ ಅದ್ವಿತೀಯ ಸ್ಥಾನ ಸಿಕ್ಕುತ್ತದೆ. ಜಲವಾರು ಕಟ್ಟುಕತೆಗಳಿಗೆ, ಕಲ್ಪನೆಯ ಐತಿಹ್ಯಗಳಿಗೆ, ಊಹಾಪೋಹೆಯ ವಸ್ತುವಿಗೆ ತಿಮಿಂಗಲವು ಮೂಲವಾಗಲು ಮುಖ್ಯ ಕಾರಣ ಅದರ ಗಾತ್ರ. ಸಾಗರವೇ ಏಕೆ, ನೆಲ ಜಲಗಳೆರಡರಲ್ಲೂ ವಾಸಿಸುವ ಪ್ರಾಣಿಗಳೆಲ್ಲೆಲ್ಲಾ ಗಾತ್ರದಲ್ಲೂ ತೂಕದಲ್ಲೂ ಇದನ್ನು ಮೀರಿಸುವುದು ಬೇರೊಂದಿಲ್ಲ.

ಉದಾಹರಣೆಗೆ ನ್ಯೂ ಜಾರ್ಜಿಯದಲ್ಲಿ ಹಿಡಿಯಲಾದ ಒಂದು ತಿಮಿಂಗಿಲದ ಉದ್ದ ೧೦೭ ಅಡಿಗಳಷ್ಟು ಇತ್ತು. ಅದರ ತೂಕ ೧೨೫ ಟನ್‌ಗಳಷ್ಟಿತ್ತು! ಇದೇ ಅತ್ಯಂತ ದೊಡ್ಡ ತಿಮಿಂಗಲವೇನಲ್ಲ. ಅಂಟಾರ್ಕ್‌ಟಿಕ್ ಸಾಗರದಿಂದ ಹಿಡಿಯಲಾದ ತಿಮಿಂಗಿಲವೊಂದರ ಉದ್ದ ೧೨೪ ಅಡಿ, ತೂಕ ೧೫೦ ಟನ್ ಇತ್ತೆಂದು ವರದಿಯಾಗಿದೆ. ೧೦೦ ಅಡಿ ಉದ್ದದ ಸಾಮಾನ್ಯ ತಿಮಿಂಗಲವೇ ಸಾಧಾರಣ ಗಾತ್ರದ ೩೬ ಆನೆಗಳ, ಅಥವಾ ೨,೩೮೦ ಮನುಷ್ಯರ ತೂಕಕ್ಕೆ ಸಮವಾಗುತ್ತದೆ.

## ನೆಲದಿಂದ ನೀರಿಗೆ

ಅದರ ಗಾತ್ರಕ್ಕಿಂತ ತಿಮಿಂಗಿಲದ ಇನ್ನೊಂದು ವಿಷಯವು ವಿಜ್ಞಾನಿಯ ಕುತೂಹಲವನ್ನು ಕೆರಳಿಸಿತು. ಸಸ್ತನಿ ಪ್ರಾಣಿಗಳೆಲ್ಲ ಕೋಟ್ಯಂತರ ವರ್ಷ ಹಿಂದೆ ಸಾಗರವನ್ನು ತೊರೆದು ನೆಲದ ಕಡೆಗೆ ಹರಿದು ನೆಲದಲ್ಲಿ ವಾಸಿಸತೊಡಗಿರುವಾಗ, ನೆಲವನ್ನು ಬಿಟ್ಟು ನೀರನ್ನು ಸೇರಿದ ಕೆಲವೇ ಪ್ರಾಣಿಗಳಲ್ಲಿ ತಿಮಿಂಗಿಲವು ಒಂದಾಗಿದೆ. ತಿಮಿಂಗಿಲವು ಮೀನಿನಂತೆ ನೀರಲ್ಲಿ ಈಜಬಲ್ಲುದಾದರೂ ಅದು ಮೀನಲ್ಲ. ನಿಜ, ಕೆಲವೇ ವರ್ಷಗಳ ಹಿಂದಿನ ವರೆಗೆ ತಿಮಿಂಗಿಲವನ್ನು ಮೀನೆಂದೇ ಎಲ್ಲರೂ ಭಾವಿಸುತ್ತಿದ್ದರು. ಬೆಸ್ತರಿಗಂತೂ ಅದು ಈಗಲೂ ಭೂತಮೀನೇ. ಕೆಲವು ವರ್ಷಗಳ ಹಿಂದೆ ತಿಮಿಂಗಿಲದ ಮಾಂಸವನ್ನು ಇಂಗ್ಲೆಂಡಿನ ಅಂಗಡಿಗಳಲ್ಲಿ ಮಾರಾಟಕ್ಕಿಟ್ಟಾಗ ಅದನ್ನು ಮೀನುಗಾರರು ಮಾರಬೇಕೇ, ಇಲ್ಲವೆ ಕಟುಕರು ಮಾರಬೇಕೇ ಎಂಬುದು ನಿರ್ಧರಿಸುವುದು ಅಧಿಕಾರಿಗಳಿಗೆ ಒಗಟಾಯಿತಂತೆ!

ವಾಸ್ತವವಾಗಿ ನೋಡಿದರೆ ಅದರ ದೇಹದ ಬಾಹ್ಯರೂಪವು ಮಾತ್ರ ಮೀನಿನದನ್ನು ಹೋಲುತ್ತದೆ. ಉಳಿದೆಲ್ಲಾ ವಿಚಾರಗಳಲ್ಲಿ ಅದು ನೆಲದ ಮೇಲಿನ ಚತುಷ್ಪಾದ ಜೀವಿಗಳಂ

ಕಿಲ್ಲರ್ ವೇಲ್



ತೆಯೆ ಇದೆ. ಮೀನುಗಳು ಉಸಿರಾಡಲು ಬೇಕಾದ ಗಾಳಿಯನ್ನು ನೀರಿನಿಂದ ಪಡೆಯುತ್ತವೆ. ತಿಮಿಂಗಿಲವಾದರೂ ಉಸಿರಾಡಲು ಆಗಾಗ ನೀರಿನ ಮೇಲಕ್ಕೆ ಬರಲೇಬೇಕಾಗುತ್ತದೆ. ನೆಲದ ಪ್ರಾಣಿಗಳಂತೆ ಶ್ವಾಸಕೋಶಗಳನ್ನು ನಿರಂತರವಾಗಿ ಸ್ವಲ್ಪಾಂಶ ಗಾಳಿಯಿಂದ ತುಂಬಿಸಿ ಉಸಿರಾಡುವ ಬದಲಿಗೆ ತಿಮಿಂಗಿಲವು ಪೂರ್ಣ ತುಂಬಿಸಿಕೊಂಡು ನೀರಿನೊಳಕ್ಕೆ ಓಡುತ್ತದೆ, ಮತ್ತು ಕಶ್ಮಲ ವಾಯುವನ್ನು ತುಂಬಿಸಿಕೊಂಡು ನೀರಿನ ಹೊರಕ್ಕೆ ಬಂದು ಹೊರಬಿಡುತ್ತದೆ. ಆಗ ಸಮುದ್ರತಳದಲ್ಲಾಗುವ ಅಲ್ಲೋಲ ಕಲ್ಲೋಲದಿಂದ ಯಾರಾದರೂ ಬೆಚ್ಚಿಬೀಳಬೇಕು.

## ಪ್ರೀತಿಯ ತಾಯಿ

ತಿಮಿಂಗಿಲ ಒಂದು ಬಾರಿಗೆ ಒಂದೇ ಮರಿಯನ್ನು ಹಾಕುತ್ತದೆ. ನೀಲ ತಿಮಿಂಗಿಲದ ಮರಿ ಹುಟ್ಟುವಾಗಲೇ ಇಪ್ಪತ್ತು ಅಡಿ ಉದ್ದ, ನಾಲ್ಕು ಟನ್ನು ತೂಕ ಇರುತ್ತದೆ. ಕೆಲವು ಸಲ ತಾಯಿಯ ದೇಹದ ಅರ್ಧಾಂಶ ಗಾತ್ರ ಮರಿಗಿರುತ್ತದೆ. ಸಸ್ತನಿ ಪ್ರಾಣಿಗಳಂತೆ ತಿಮಿಂಗಲವೂ ಬಹಳ ಪ್ರೀತಿಯ ತಾಯಿ. ತಾನು ಬೋರಲಾಗಿ ಬೆನ್ನ ಮೇಲೆ ಬಿದ್ದುಕೊಂಡು ಮಗುವಿನ ಬಾಯಿಗೆ ತನ್ನ ಮೊಲೆಯಿಂದ ಹಾಲನ್ನು ಚಿಮ್ಮಿಸುತ್ತದೆ. ಒಂದು ಸಲಕ್ಕೆ ಹತ್ತು ಪೌಂಡ್ ಹಾಲು ಮರಿಗೆ ಸಿಕ್ಕುತ್ತದೆಂದು ಹೇಳಲಾಗಿದೆ. ಮನುಷ್ಯನ ಹಾಲಿಗಿಂತ ಎಂಟು ಪಾಲು ಹೆಚ್ಚು ಸಸಾರಜನಕದಿಂದ ಮತ್ತು ಮುಖ್ಯವಾಗಿ ಬೆಣ್ಣೆಯಿಂದ ಕೂಡಿದ ಈ ಹಾಲನ್ನು ಕುಡಿದು ಮರಿ ಆರು ತಿಂಗಳಲ್ಲಿ ತೂಕದಲ್ಲಿ ಎಂಟು ಪಾಲು ಬೆಳೆಯುತ್ತದೆ. ಅರೇಳು ತಿಂಗಳುಗಳ ವರೆಗೂ ಅದು ತಾಯಿ ಹಾಲನ್ನು ಉಣ್ಣುತ್ತಲೇ ಇರುವುದು.

ತಿಮಿಂಗಿಲದ ಭೂನಿವಾಸಿ ಪೂರ್ವಜರು ನೆಲವನ್ನು ಬಿಟ್ಟು ಜಲದ ಕಡೆಗೆ ಹೋದದ್ದೇಕೆ? ಈ ಪ್ರಶ್ನೆಗೆ ವಿಕಾಸವಾದಿಗಳಿಗೂ ಸರ್ವಸಮ್ಮತವಾದ ಕಾರಣವನ್ನು ಕೊಡಲು ಸಾಧ್ಯವಾಗಿಲ್ಲ. ಪ್ರಾಣಿಗಳ ವಿಕಾಸದ ಚರಿತ್ರೆಯಲ್ಲೇ ಈ ಪ್ರಯಾಣವು ಅದ್ಭುತವೆನಿಸಿದೆ. ಅನಾದಿಯಲ್ಲಿ ಎಲ್ಲಾ ಪ್ರಾಣಿಗಳೂ ಜಲಚರ ಪ್ರಾಣಿಗಳಿದ್ದು, ಪರಿಸರದ ಪರಿಸ್ಥಿತಿಯಲ್ಲಾದ ಬದಲಾವಣೆಗಳಿಂದ ಅಗತ್ಯ ತೋರಿ ನೀರನ್ನು ಬಿಟ್ಟು ನೆಲಕ್ಕೆ ಬರತೊಡಗಿದವು, ಮತ್ತು ಅವುಗಳ ಶರೀರದಲ್ಲಿ ಹೊಸ ವಾತಾವರಣಕ್ಕೆ ಅನುಗುಣವಾಗಿ ವ್ಯತ್ಯಾಸಗಳು ಕಾಣಿಸಿಕೊಂಡವು ಎಂಬುದು ವಿಕಾಸವಾದದ ವೈಖರಿ. ತಿಮಿಂಗಿಲದ ಭೂನಿವಾಸಿ ಪೂರ್ವಜರು ಬಹುಶಃ ಆರು ಕೋಟಿ ವರ್ಷಗಳ ಹಿಂದೆಯೆ ಅಳಿದಿರಬೇಕು. ನೆಲದ ತಿಮಿಂಗಿಲದಿಂದ ಇಂದಿನ ನೀರಿನ ತಿಮಿಂಗಿಲಕ್ಕೆ ಆದ ಬದಲಾವಣೆ ಯಾವ ಹಂತಗಳಲ್ಲಾಯಿತೆಂಬುದು, ಸರಿಯಾದ ಪಳೆಯುಳಿಕೆಗಳು ಸಿಕ್ಕದಿರುವುದರಿಂದ ಕೇವಲ ಊಹಾಪೋಹವಾಗಿಯೆ ನಿಂತಿದೆ.

ನೀರನ್ನು ಸೇರಿದ್ದು ಮಾತ್ರ ತಿಮಿಂಗಿಲಗಳ ಒಳ್ಳಿತಿಗೇ ಆಗಿಬಿಟ್ಟಿತೆಂದು ವಿಕಾಸವಾದಿಗಳು ಅಭಿಪ್ರಾಯಪಡುತ್ತಾರೆ. ನೆಲದ ಮೇಲೆಯೆ ಉಳಿಯುತ್ತಿದ್ದರೆ 'ಪ್ಲೀಯಸ್ಟೋಸೀನ್', (೧೦ ಲಕ್ಷ ವರ್ಷ ಹಿಂದೆ) ಯುಗದಲ್ಲಿ ಹವೆ, ವಾತಾವರಣಗಳಲ್ಲಾದ ವೈಪರೀತ್ಯಗಳಿಂದ ಇತರ ನೆಲಚರ ಪ್ರಾಣಿಗಳ ದೇಹದ ಮೇಲೆ ಆದಂತೆ ತಿಮಿಂಗಿಲಗಳ ದೇಹದ ಮೇಲೂ ವಿಪರೀತ ಪರಿಣಾಮವಾಗುತ್ತಿತ್ತು. ನೀರಿನಲ್ಲಿ ತೂಕದ ಹೆಚ್ಚಿಕೆಯಿಂದ ತೊಂದರೆಯಿಲ್ಲದ ಕಾರಣ ತಿಮಿಂಗಿಲಗಳು ಗಾತ್ರದಲ್ಲಿ ಬೇಕಾದಷ್ಟು ಬೆಳೆಯುವುದು ಸಾಧ್ಯವಾಯಿತು. ನೀರಿನಲ್ಲಿರಲು ಬೇಕಾದಂತೆ ಅವುಗಳ ದೇಹದಲ್ಲಿ ಇತರ ಮಾರ್ಪಾಟುಗಳೂ ಆದುವು. ಹೊರಗಿನ ಕಿವಿಯು ಅದೃಶ್ಯವಾಯಿತು, ಹಿಂದಿನ ಕಾಲುಗಳೂ ಹೋದುವು. ನೀರಿನಲ್ಲಿ ಕೂದಲಿನ ಅವಶ್ಯಕತೆ ಇಲ್ಲದ ಕಾರಣ ಕೂದಲು ಹೋದುವು. ಬದಲಾಗಿ ನೀರಿನ

ಅಸಾಧ್ಯ ಚಳಿಯನ್ನು ತಡೆಯಲು ಚರ್ಮದ ಕೆಳಗೆ ಚರ್ಬಿಯ ಪದರನ್ನು ಬೆಳಸಿಕೊಂಡವು. (ಇದೇ ತಿಮಿಂಗಿಲಕ್ಕೀಗ ಮುಳುವಾಗಿದೆ.)

## ಜಾತಿ ವೈವಿಧ್ಯ

ತಿಮಿಂಗಿಲಗಳಲ್ಲಿ ಸುಮಾರು ನೂರು ಜಾತಿಗಳಿದ್ದರೂ ಸ್ಥೂಲವಾಗಿ ಅವುಗಳನ್ನು ಹಲ್ಲಿಲ್ಲದವುಗಳು (mysticeti) ಮತ್ತು ಹಲ್ಲಿರುವವುಗಳು (odontoceti) ಎಂದು ಎರಡು ವರ್ಗಗಳಾಗಿ ವಿಂಗಡಿಸಲಾಗಿದೆ. ಈ ಎರಡೂ ವರ್ಗಗಳೂ ಬೇರೆ ಬೇರೆ ಹಾದಿಯಲ್ಲಿ ಭೂಜೀವಿಗಳಿಂದ ವಿಕಾಸಗೊಂಡಿರಬೇಕು. ನೀಲ ತಿಮಿಂಗಿಲ, ರೆಕ್ಕೆ ತಿಮಿಂಗಿಲ, ಡುಬ್ಬದ ತಿಮಿಂಗಿಲ, ಸೈತಿಮಿಂಗಿಲ, ಕ್ಯಾಲಿಫೋರ್ನಿಯದ ಬೂದು ತಿಮಿಂಗಿಲ, ಗ್ರೀನ್‌ಲೆಂಡಿನ ರೈಟ್ ತಿಮಿಂಗಿಲಗಳು ಮೊದಲಿನ ವರ್ಗಕ್ಕೆ ಸೇರಿದವುಗಳಾಗಿವೆ. ಇವುಗಳಿಗೆ ಹಲ್ಲಿನ ಬದಲು ಬಲೀನ್ ಅಥವಾ ವೇಲ್‌ಬೋನ್ ಎಂಬ ಕೊಂಬಿನಂತಹ ಪದಾರ್ಥದಿಂದ ಮಾಡಿದ ರೋಮಗಳ ಸಾಲುಗಳು ಬಾಯಿಯಲ್ಲಿ ಇರುವುದರಿಂದ ಇವುಗಳನ್ನು ವೇಲ್‌ಬೋನ್ ಅಥವಾ ಬಲೀನ್ ತಿಮಿಂಗಿಲಗಳೆಂದೂ ಕರೆಯಲಾಗುತ್ತದೆ. ಹಲ್ಲಿನವುಗಳಲ್ಲಿ ಕಿಲ್ಲರ್‌ವೇಲ್‌ಗಳು ಮತ್ತು ಸ್ಪರ್ಮ್‌ವೇಲ್‌ಗಳು ಮುಖ್ಯ ಜಾತಿಗಳು. ಸಮುದ್ರದಲ್ಲಿ ಅಸಂಖ್ಯಾತವಾಗಿ ಇರುವ ಚಿಕ್ಕ ಜಾತಿಯ ಡಾಲ್ಫಿನ್‌ಗಳು, ಪಾರ್ಪಾಯ್ಸ್‌ಗಳು ಮತ್ತು ಬಾಟ್ಲ್ ಮೂಗಿನ ತಿಮಿಂಗಿಲ, ಕಪ್ಪು ಪೈಲಟ್ ತಿಮಿಂಗಿಲ, ಬಿಳಿ ತಿಮಿಂಗಿಲಗಳೂ ಹಲ್ಲಿರುವ ತಿಮಿಂಗಿಲಗಳ ವರ್ಗಕ್ಕೆ ಸೇರಿದವುಗಳು. ಹಲ್ಲಿನ ತಿಮಿಂಗಿಲಗಳಲ್ಲಿ ಸ್ಪರ್ಮ್‌ವೇಲ್ ಮಾತ್ರ ಗಾತ್ರದಲ್ಲಿ ದೊಡ್ಡದು, ಅದು ೬೫ ಅಡಿ ಉದ್ದದ ವರೆಗೆ ಇರುತ್ತದೆ. ಕಿಲ್ಲರ್ ವೇಲ್ ಅತ್ಯಂತ ಬಲಶಾಲಿಯಾದರೂ ಅದರ ಗಾತ್ರ ಕೇವಲ ಮೂವತ್ತು ಅಡಿಗಳಷ್ಟೇ ಇರುತ್ತದೆ.

ತಿಮಿಂಗಿಲಗಳು ಇಂತಹ ಪ್ರದೇಶದಲ್ಲೇ ಇರುತ್ತವೆ ಎನ್ನುವಂತಿಲ್ಲ. ಸಾಗರಗಳಿರುವಲ್ಲೆಲ್ಲ ತಿಮಿಂಗಿಲಗಳೂ ಇವೆ. ಆದರೂ ಸ್ಪರ್ಮ್‌ವೇಲನ್ನು ಬಿಟ್ಟರೆ ಉಳಿದವುಗಳು ಹೆಚ್ಚಾಗಿ ಆರ್ಕ್‌ಟಿಕ್ ಮತ್ತು ಅಂಟಾರ್ಕ್‌ಟಿಕ್‌ನ ಶೀತ ಸಾಗರಗಳಲ್ಲಿಯೆ ಹೆಚ್ಚಾಗಿ ಇರುತ್ತವೆ. ಕ್ಯಾಲಿಫೋರ್ನಿಯನ್ ತಿಮಿಂಗಿಲವು ಹೆಸರೇ ಸೂಚಿಸುವಂತೆ ಕ್ಯಾಲಿಫೋರ್ನಿಯದ ಕರಾವಳಿಯಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುವ ಜಾತಿ. ಸಿಹಿನೀರಿನಲ್ಲಿ ಇರುವ ಜಾತಿಗಳೂ ಕೆಲವಿವೆ. ಚೀನದ ಒಂದು ಸರೋವರದಲ್ಲಿ ಒಂದು ಜಾತಿಯ ತಿಮಿಂಗಿಲಗಳು ಜೀವಿಸುತ್ತಿವೆ.

## ವಿಚಿತ್ರ ಆಹಾರ ಕ್ರಮ

ನೆಲ ಜಲಗಳಲ್ಲಿ ಅತ್ಯಂತ ದೊಡ್ಡ ದೇಹವನ್ನು ಪಡೆದಿರುವ ತಿಮಿಂಗಿಲಗಳು ತಮ್ಮ ಆಹಾರಕ್ಕಾಗಿ ಸಾಗರದಲ್ಲಿರುವ ಅತ್ಯಂತ ಚಿಕ್ಕ ಜೀವಿಗಳನ್ನೂ ಸೂಕ್ಷ್ಮಾಣುಗಳನ್ನೂ ಆಹಾರವಾಗಿ ತಿನ್ನುತ್ತವೆ. ಹಲ್ಲಿಲ್ಲದ ವರ್ಗದವುಗಳೆಲ್ಲಾ ಹಲ್ಲುಗಳ ಅಭಾವದಿಂದಾಗಿ ಚಿಕ್ಕ ಚಿಕ್ಕ ಮೀನುಗಳನ್ನು ಮತ್ತು ಮುಖ್ಯವಾಗಿ ಅರ್ಧ ಅಂಗುಲ ಉದ್ದವಿರುವ, ನೀರ ಮೇಲೆ ಲಕ್ಷೋಪಲಕ್ಷ ಸಂಖ್ಯೆಯಲ್ಲಿ ತೇಲುತ್ತಿರುವ "ಕ್ರಿಲ್" ಎಂಬ ಜೀವಿಗಳನ್ನು ತಿಂದು ಹೊಟ್ಟೆ ತುಂಬಿಸಿಕೊಳ್ಳಬೇಕಾಗುತ್ತದೆ. ಇಷ್ಟು ಕೆಲವಂತೂ ಇನ್ನೂ ಚಿಕ್ಕ ಪ್ಲಾಂಕ್ಟನ್ ಇತ್ಯಾದಿ ಏಕಕಣ ಜೀವಿಗಳನ್ನು ತಿಂದೇ ಬದುಕುತ್ತವೆ! ಅವು ಹಸಿವಾದಾಗ ಬಾಯಿ ತೆರೆದುಕೊಂಡು ಸಮುದ್ರದಲ್ಲಿ ಈಜುತ್ತ ಹೋಗುವಾಗ ಒಂದೇ ಬಾರಿಗೆ ಸಹಸ್ರಾರು ಜೀವಿಗಳು ತಿಮಿಂಗಿಲದ ಬಾಯಿಯನ್ನು ಸೇರಿಬಿಡುತ್ತವೆ. ಬಾಯೊಳಗೆ ಜಾಲರಿಯಂತೆ ನಾಲ್ಕುನೂರರ ವರೆಗೆ ಬಲೀನುಗಳಿವೆ. ಇವುಗಳು ಈ ಪ್ರಾಣಿಗಳನ್ನು ಮಾತ್ರ ತಡೆದು ನೀರನ್ನು ಹೊರಕ್ಕೆ ಉಗುಳಲು ತಿಮಿಂಗಿಲಕ್ಕೆ ಸಹಾಯವಾಗುತ್ತದೆ. ಒಂದು ನೀಲ ತಿಮಿಂಗಿಲದ ಹೊಟ್ಟೆಯಲ್ಲಿ ಎರಡು

ಟಿಸಲ್ಲಿ ಪ್ಲ್ಯಾಂಕ್ಟನ್ ಇದ್ದುದು ಕಂಡುಬಂತು. ಎಲ್ಲವೂ ಮುಖ್ಯವಾಗಿ ಮಾಂಸಾಹಾರಿಗಳಾದರೂ ಸಸ್ಯಗಳನ್ನು ತಿನ್ನುವ ತಿಮಿಂಗಿಲಗಳೂ ಇವೆ. ಪಶ್ಚಿಮ ಆಫ್ರಿಕದ ಕ್ರಾಸ್ ನದಿಯಲ್ಲಿರುವ ಕೊಟಾಲಿಡ್ ನ್ಯೂಗಿನೀ ತಿಮಿಂಗಿಲಗಳು ಜಲೀಯ ಸಸ್ಯಗಳನ್ನು ತಿಂದು ಬದುಕುತ್ತವೆ.

ತಿಮಿಂಗಿಲಗಳಿಗೆ ಚಿಕ್ಕ ಪ್ರಾಣಿಗಳಿಂದ ಹಿಡಿದು ತಮ್ಮ ದೇಹದ ಅರ್ಧದಷ್ಟು ದೊಡ್ಡ ಗಾತ್ರದ ಆಕ್ಟೋಪಸ್, ಸ್ಕ್ವಿಡ್‌ಗಳೂ ಆಹಾರವೇ. ಭಯಂಕರ ಸ್ವಭಾವದ ಕಿಲ್ಲರ್ ತಿಮಿಂಗಿಲಗಳಿಗಂತೂ ತಮಗಿಂತಲೂ ದೊಡ್ಡ ನೀಲಿ ತಿಮಿಂಗಿಲದ ನಾಲಿಗೆಯೇ ಪ್ರೀತಿಯ ತಿಂಡಿ! ಕಿಲ್ಲರ್ ತಿಮಿಂಗಿಲಗಳ ಹಿಂಡು ದೊಡ್ಡ ತಿಮಿಂಗಿಲವನ್ನು ಬೇರೆ ಬೇರೆ ಕಡೆಯಿಂದ ಮುತ್ತಿ ಪೀಡೆ ಕೊಡುತ್ತದೆ. ಕೆಲವು ಬಾಲವನ್ನು ಹಿಡಿದರೆ ಇನ್ನು ಕೆಲವು ತಲೆಯತ್ತ ನುಗ್ಗಿ ತಿಮಿಂಗಿಲವು ನಾಲಗೆಯನ್ನು ಹೊರಹಾಕುವಂತೆ ಮಾಡುತ್ತವೆ. ಒಮ್ಮೆ ನಾಲಗೆಯನ್ನು ಹೊರಹಾಕಿದರೆ ತಿಮಿಂಗಿಲದ ಕತೆ ಮುಗಿದಂತೆಯೇ ಸರಿ. ಒಂದೂವರೆ ಎರಡು ಟನ್ ತೂಕದ ನಾಲಗೆಯನ್ನು ಎಲ್ಲಾ ಕಿಲ್ಲರುಗಳೂ ಸೇರಿ ತಿಂದು ತೇಗುತ್ತವೆ. ಕಿಲ್ಲರ್ ತಿಮಿಂಗಿಲಗಳ ಹೊಟ್ಟೆಬಾಕತನಕ್ಕೆ ಮಿತಿ ಇದ್ದಂತೆ ತೋರುವುದಿಲ್ಲ. ಹದಿನಾಲ್ಕು ಸೀಲ್ ಪ್ರಾಣಿಗಳನ್ನೂ ಹದಿಮೂರು ಪಾರ್ಪಾಯಿಸ್‌ಗಳನ್ನೂ ತಿಂದು ಸತ್ತುಬಿದ್ದ ಇಪ್ಪತ್ತೊಂದು ಅಡಿ ಉದ್ದದ ಕಿಲ್ಲರ್ ತಿಮಿಂಗಿಲದ ಕಳೇಬರವು ಒಮ್ಮೆ ದೊರಕಿತ್ತು. ಇಂತಹ ಕಿಲ್ಲರ್‌ಗಳ ಮುಂದೆ ಎಲ್ಲಾ ಸಮುದ್ರ ಪ್ರಾಣಿಗಳೂ ಬೆದರಿ ಜೀವದಾಶೆಯಿಂದ ಓಡಿ ಹೋಗುವುದರಲ್ಲಿ ಸೋಜಿಗವಿಲ್ಲ.

ತಿಮಿಂಗಿಲಗಳು ಹುಟ್ಟಿ ಮೂರು ವರ್ಷಗಳಲ್ಲಿ ಪ್ರಾಯಪ್ರಬುದ್ಧವಾಗುತ್ತವೆ. ಹತ್ತು ವರ್ಷಗಳ ವರೆಗೆ ಬೆಳೆಯುತ್ತ ಹೋಗುತ್ತವಾದರೂ ನಿಜಕ್ಕೂ ನೋಡಿದರೆ ಅವುಗಳ ಬೆಳವಣಿಗೆ ನಿಲ್ಲುವುದೆಂದೇ ಇಲ್ಲ. ಅವು ಎಷ್ಟು ವರ್ಷ ಬದುಕುತ್ತವೆಂಬುದು ಇನ್ನೂ ಸರಿಯಾಗಿ ತಿಳಿದಿಲ್ಲ. ತಿಮಿಂಗಿಲಗಳನ್ನು ಪ್ರಾಣಿಸಂಗ್ರಹಾಲಯದಲ್ಲಿ ಸಾಕುವ ಯತ್ನಗಳು ಈವರೆಗೆ ಯಶಸ್ವಿಯಾಗದಿದ್ದುದರಿಂದ ಅವುಗಳ ಆಯುಸ್ಸನ್ನು ಬೇರೆಯೇ ವಿಧಾನಗಳಿಂದ ನಿರ್ಧರಿಸಬೇಕಷ್ಟೆ. ಅವುಗಳ ದೇಹದ ಮೇಲಿನ ಹುರುಪುಗಳ (Scales) ಮೇಲಿರುವ ವೃತ್ತಗಳಿಂದ ಅವು ಎಂಟು ನೂರು ವರ್ಷ ಬದುಕುತ್ತವೆ ಎಂದೂ ಒಬ್ಬ ವಿಜ್ಞಾನಿ ಅಂದಾಜು ಮಾಡಿದ್ದಾನೆ.

## ಅತ್ಯುಪಯೋಗಿ ಜೀವಿ

ತಿಮಿಂಗಿಲದಲ್ಲಿ ಮನುಷ್ಯನು ಇಷ್ಟು ಆಸಕ್ತಿ ತೋರಿದುದಕ್ಕೆ ಇನ್ನೂ ಒಂದು ಪ್ರಬಲ ಕಾರಣವಿದೆ. ತಿಮಿಂಗಿಲದಂತೆ ಹಣವನ್ನು ತರುವ ಪ್ರಾಣಿಯೇ ಬೇರೊಂದಿಲ್ಲವೆಂದರೆ ಅತಿಶಯೋಕ್ತಿಯಲ್ಲ. ತಿಮಿಂಗಿಲಗಳಿಲ್ಲವಾದರೆ ಅಮೇರಿಕದ ವಸಾಹತುಗಳ ವಿಸ್ತರಣೆ ಮತ್ತು ಐಶ್ವರ್ಯದ [illegible] ಆರಂಭದಲ್ಲಿ ಅಸಾಧ್ಯವಾಗುತ್ತಿತ್ತು ಎಂದು ಹೇಳಲಾಗಿದೆ. ಆರಂಭದಲ್ಲಿ ಮನುಷ್ಯನ ಗಮನವನ್ನು ಸೆಳೆದುದು ತಿಮಿಂಗಿಲಗಳ ಚರ್ಮದ ಅಡಿಯ ಚರ್ಬಿ. ಎಪ್ಪತ್ತು ಟನ್ ತೂಕದ ದೈತ್ಯ ತಿಮಿಂಗಿಲವೊಂದರಿಂದ ಮೂವತ್ತು ಟನ್ ಚರ್ಬಿಯನ್ನು ಪಡೆಯಬಹುದು. ಈ ಚರ್ಬಿಯಿಂದ ತಯಾರಿಸಿದ ಕ್ಯಾಂಡಲುಗಳು ಯುರೋಪು ಅಮೇರಿಕಗಳ ಮನೆಗಳನ್ನು ಬೆಳಗಿಸಿದವು. ಬೇಲೀನುಗಳಿಂದ ಐರೋಪ್ಯ ಮಹಿಳೆಯರು ತಮ್ಮ ಸೊಂಟದಲ್ಲಿ ರೂಪ ಹೆಚ್ಚಿಸಿಕೊಳ್ಳಲು ತೊಡಗಿದಾಗ ತಿಮಿಂಗಿಲಗಳನ್ನು ಹಿಡಿಯುವುದು ದೊಡ್ಡ ಉದ್ಯಮವಾಗಿ ಬೆಳೆಯಿತು. ಕಲ್ಲಿದ್ದಲು ಪೆಟ್ರೋಲುಗಳು ಬಳಕೆಗೆ ಬಂದಾಗ್ಗೆ ಒಮ್ಮೆಗೆ ತಿಮಿಂಗಿಲದ ಎಣ್ಣೆಗೆ ಬೇಡಿಕೆ ಕಡಿಮೆ

ಯಾದರೂ ಕಾಲಾಂತರದಲ್ಲಿ ಇತರ ಉಪಯೋಗಗಳು ಶೋಧಿಸಲ್ಪಟ್ಟವು. ತಿಮಿಂಗಿಲದ ಎಣ್ಣೆಯನ್ನು ತೆಗೆದಾದ ಮೇಲೆ ಉಳಿಯುವ ದೇಹದಿಂದ ನಾನಾ ವಸ್ತುಗಳನ್ನು ಈಗ ತಯಾರಿಸಲಾಗುತ್ತಿದೆ. ಅವುಗಳಲ್ಲಿ ಮುಖ್ಯವಾದದ್ದು ಗೊಬ್ಬರಗಳ ತಯಾರಿಕೆ. ಈಗಲೂ ವೈಜ್ಞಾನಿಕ ಹಾಗು ವೈದ್ಯಕೀಯ ಉಪಕರಣಗಳಲ್ಲಿ ಉಪಯೋಗಿಸುವ ನಾಜೂಕಾದ ಎಣ್ಣೆಯು ಸ್ಪರ್ಮ್ ವೇಲಿನ ತಲೆಯಲ್ಲಿರುವ ಎಣ್ಣೆಯಿಂದಲೇ ತಯಾರಾಗಬೇಕು. ಸ್ಪರ್ಮ್ ಇನ್ನೂ ಒಂದು ಅಮೂಲ್ಯವಾದ ಪದಾರ್ಥವನ್ನು ಮನುಷ್ಯನಿಗೆ ಒದಗಿಸುತ್ತದೆ. ಅದು ಒಕ್ಟೋಪಸ್, ಸ್ಕ್ವಿಡ್‌ಗಳನ್ನು ತಿನ್ನುವಾಗ ಅದರ ಹೊಟ್ಟೆಯಲ್ಲಿ ಒಂದು ರೀತಿಯ ತುರಿಕೆ ಉಂಟಾಗಿ, ಆ ಭಾಗದಲ್ಲಿ ಕೀವಿನಂತಹ ಪದಾರ್ಥ ಬಂದು ಅಲ್ಲೇ ಗಟ್ಟಿಯಾಗುತ್ತದೆ. ಇದನ್ನು ಅದು ಆಗಾಗ ಕಾರುತ್ತದೆ. ಈ ಅಂಬರ್‌ಗ್ರಿಸ್ ಎಂಬುದು ಪರಿಮಳ ದ್ರವ್ಯಗಳ ತಯಾರಿಕೆಯಲ್ಲಿ ಅತ್ಯವಶ್ಯಕ ಸಾಮಗ್ರಿ. ಒಂದು ಸ್ಪರ್ಮ್‌ನ ಹೊಟ್ಟೆಯಿಂದ ತೆಗೆದ ಈ ಅಂಬರ್‌ಗ್ರಿಸ್ ೩೪೦ ಪೌಂಡುಗಳಿದ್ದಿತ್ತು; ಮತ್ತು ೧೯೪೭ ರಲ್ಲಿ ಅದಕ್ಕೆ ೨೩,೦೦೦ ಪೌಂಡುಗಳ ಬೆಲೆ ಬಂತಂತೆ. ಈ ಪದಾರ್ಥಕ್ಕಾಗಿಯೇ ತಿಮಿಂಗಿಲಗಳ ಬೇಟೆ ಹೆಚ್ಚು ನಡೆದಿದೆಯೆಂದರೆ ಈ ಜಾತಿಯ ಸಂತಾನವೇ ಲಯವಾಗುವಂತಿದೆ.

ತಿಮಿಂಗಿಲಗಳನ್ನು ಮನುಷ್ಯನು ಒಂದು ಸಾವಿರ ವರ್ಷಗಳಿಂದಲೂ ಬೇಟೆಯಾಡುತ್ತಾ ಬಂದಿರುತ್ತಾನೆ. ಹಿಂದೆ ಚಿಕ್ಕ ಚಿಕ್ಕ ದೋಣಿಗಳಲ್ಲಿ ಹಿಡಿಯುವ ಕೆಲಸ ನಡೆದಿದ್ದರೆ ಈಗ ತಿಮಿಂಗಿಲದ ಬೇಟೆಗಾಗಿಯೇ ವಿಶೇಷವಾಗಿ ಸಜ್ಜುಗೊಳಿಸಿದ ಹಡಗುಗಳು ಇವೆ. ಕೆಲವು [illegible] ಒಂದು ದಿನದಲ್ಲಿ ಎಪ್ಪತ್ತಕ್ಕೂ ಹೆಚ್ಚು ತಿಮಿಂಗಿಲಗಳನ್ನು ತುಂಡುಮಾಡಿ[illegible] ಅದರ ಭಾಗಗಳನ್ನು ಬೇರ್ಪಡಿಸುವ ಸಲಕರಣೆಗಳಿಂದ ಕೂಡಿವೆ. ಮತ್ತು ಇಂತಹ ಒಂದು ಕಾರ್ಖಾನೆಯು ಒಂದು ಬೇಟೆಯ ಋತುವಿನಲ್ಲಿ ಹತ್ತು ಲಕ್ಷ ಜನರಿಗೆ ಒಂದು ವರ್ಷಕ್ಕೆ ಬೇಕಾದ ಎಣ್ಣೆಯನ್ನೂ ಮಾರ್ಗರೀನನ್ನೂ ಒದಗಿಸಬಲ್ಲದು! ಯೂರೋಪಿನ ಕೆಚ್ಚಿನ ರಾಷ್ಟ್ರಗಳೂ ಜಪಾನ್, ಅಮೇರಿಕಗಳೂ ತಿಮಿಂಗಿಲಗಳ ಕೊಲೆಯಲ್ಲಿ ದೊಡ್ಡ ಪಾತ್ರವನ್ನು ವಹಿಸಿ ಉದ್ಯಮವನ್ನು ಬೆಳಸಿಕೊಂಡಿವೆ. ಅಮೇರಿಕದಲ್ಲಿ ಸ್ಪರ್ಮ್‌ನ ಬೇಟೆಗಾಗಿಯೇ ೭೫೦ ಹಡಗುಗಳು ಒಂದು ಸಮಯದಲ್ಲಿ ಇದ್ದುವೆಂದರೆ ಈ ಉದ್ಯಮದ ಗಾತ್ರದ ಅಂದಾಜಾಗಬಹುದು. ಇದು ಎಲ್ಲಿಯವರೆಗೆ ಸಾಗಿದೆಯೆಂದರೆ ತಿಮಿಂಗಿಲದ ಭವಿಷ್ಯ ಮುಗಿಯುತ್ತಬಂದಂತೆ ಎಂಬ ಹೆದರಿಕೆಯೂ ಪ್ರಾಣಿಶಾಸ್ತ್ರಗಳಿಗೆ ಆಗಿದೆ. ೧೯೦೯ ರಿಂದ ೧೯೧೪ ರವರೆಗೆ ಅಂಟಾರ್ಕ್‌ಟಿಕ್‌ನಲ್ಲಿ ಪ್ರತಿ ವರ್ಷ ೪,೦೦೦ ದಿಂದ ೧೧,೦೦೦ ದ ವರೆಗೆ ತಿಮಿಂಗಿಲಗಳನ್ನು ಹಿಡಿಯಲಾಯಿತಂತೆ. ೧೯೪೭ ರಲ್ಲಿ ಒಟ್ಟು ಕೊಲ್ಲಲಾದ ತಿಮಿಂಗಿಲಗಳ ಸಂಖ್ಯೆ ೩೬,೦೦೦ ದಷ್ಟಿತ್ತು. ಹಲವು ಜಾತಿಯ ತಿಮಿಂಗಿಲಗಳು ಈಗ ಕಾಣಿಸಿಕ್ಕುವುದೇ ಅಪರೂಪವಾಗಿದೆ.

ತಿಮಿಂಗಿಲವನ್ನು ಮನುಷ್ಯನು ನೂರಾರು ವರ್ಷಗಳಿಂದ ಬೇಟೆಯಾಡಿ ಕೊಲ್ಲುತ್ತ ಅದರ ಸಂತಾನವೇ ಲಯವಾಗಲು ಕಾರಣನಾಗಿದ್ದರೂ ಈ ವರೆಗೆ ಮನುಷ್ಯನನ್ನು ತಿಮಿಂಗಿಲವು ಬೇಟೆಯಾಡಿದ್ದಾಗಲೀ ಮನುಷ್ಯನ ಮಾಂಸದ ರುಚಿ ಹತ್ತಿ ನರಭಕ್ಷಕನಾದದ್ದಾಗಲೀ ಕೇಳಿಬಂದಿಲ್ಲ. ಹುಟ್ಟುಗುಣದಿಂದಲ್ಲವಾದರೂ ಆತ್ಮರಕ್ಷಣೆಯ ದೃಷ್ಟಿಯಿಂದಾದರೂ ಗಾತ್ರದಲ್ಲಿ ಅದ್ವಿತೀಯವೆನಿಸಿದ ತಿಮಿಂಗಿಲವು ಈ ದಾರಿಯಲ್ಲಿ ಇನ್ನೂ ಸುಳಿಯದಿದ್ದುದು ಮನುಷ್ಯನ ಭಾಗ್ಯವೆನ್ನಬೇಕು.



ಹೊಸ, ಸುಧಾರಿತ

# ಸನ್‌ಲೈಟ್

ಪ್ರತಿ ಸಲವೂ

## ಬಟ್ಟೆಗಳನ್ನು ಅಧಿಕ ಉಜ್ವಲವಾಗಿ ಒಗೆಯುತ್ತದೆ




ನಿಮ್ಮ ನಿತ್ಯದ ಬಟ್ಟೆಗಳನ್ನು ಹೊಸ, ಸುಧಾರಿತ
ಸನ್‌ಲೈಟ್‌ದಿಂದ ಒಗೆಯಿರಿ

ಹಿಂದುಸ್ತಾನ್ ಲೀವರ್ ಅವರ ತಯಾರಿಕೆ

127-13



# ಬಾಕ್ಸರ
# ದಂಗ

ಇನ್ನೂ ಹಸಿ ತೊಟ್ಟಿಕ್ಕುತ್ತಿದ್ದ ಮಾನವ ರುಂಡಗಳು ತುಂಬಿದ್ದ ಮರದ ಪೆಟ್ಟಿಗೆಗಳನ್ನು ಹಲ್ಲುಕಿರಿಯುತ್ತಲಿದ್ದ ಚೀನೀಯರು ಕೈಲಿ ಹಿಡಿದಿದ್ದರು. ಇನ್ನೂ ಅನೇಕ ಚೀನೀಯರು ಚಾಕುಗಳನ್ನು, ಕಿರಿಗತ್ತಿಗಳನ್ನು, ಬಂದೂಕುಗಳನ್ನು ವಿಜಯೋನ್ಮಾದದಲ್ಲಿ ಬಾವುಟಗಳಂತೆ ಬೀಸುತ್ತಿದ್ದರು. ಈ ದ್ವೇಷಪೂರಿತ ಜನರ ನಡುವೆ ಇಬ್ಬರು ಅಮೇರಿಕನ್ನರು ಅವಸರವಸರವಾಗಿ ಜೀವ ಕೈಲಿ ಹಿಡಿದುಕೊಂಡು ಸಾಗಿದರು. ಸರಸರನೆ ನಡೆದು ಅವರು ಪೀಕಿಂಗಿನ ಅಂತಾರಾಷ್ಟ್ರೀಯ ವಸಾಹತಿನ ಆವಾರವನ್ನು ಪ್ರವೇಶಿಸಿದರು. ಅದರ ವಿಶಾಲ ಬಾಗಿಲಿನಲ್ಲಿ ಅವರು ದಾಟಿದ್ದು ನೋಡಿದಾಗ ಪಹರೆಯವರು ಸಲಾಮು ಮಾಡಿದರು.

ಕೆಲ ನಿಮಿಷಗಳ ನಂತರ ಅವರು ಚೀನದಲ್ಲಿ ಅಮೇರಿಕದ ರಾಯಭಾರಿಯಾಗಿದ್ದ ಎಡ್ವರ್ಡ್ ಕಾಂಗರರೆದುರು ಕುಳಿತಿದ್ದರು. ಅಂದು ೧೯೦೦, ಜೂನ್ ೨೦ ನೇ ತಾರೀಖು. ರಾಯಭಾರಿಯೆದುರು ಕುಳಿತ ಇಬ್ಬರು ಅಮೇರಿಕದ ವಿದೇಶರಾಯಭಾರೀ ಕಚೇರಿಯ ಸದಸ್ಯರಾಗಿದ್ದರು. ಅದೇ ತಾನೇ ಕಂಡ ದೃಶ್ಯದಿಂದ ಮುಖ ಬಿಳುಪಿಟ್ಟು ಹೋಗಿದ್ದ ಅವರಲ್ಲಿ ಒಬ್ಬಾತ ಹೇಳಿದ, "ಇದೇ ಈಗ ಕೆಲ ನಿಮಿಷಗಳ ಮುಂಚೆ ಅವರು ಬ್ಯಾರನ್ ವಾನ್ ಕೆಟ್ಲರರನ್ನು ಕೊಂದರು."

ಅಮೇರಿಕನ್ ರಾಯಭಾರಿ "ಆ!" ಎಂ
ಖುರ್ಚಿ ಬಿಟ್ಟೆದ್ದು ನಿಂತ. ಮುಂದುವರಿ
ಎಂಬಂತೆ ಕೈಯಾಡಿಸಿದ.

"ನಮ್ಮ ರಕ್ಷಣೆಗಾಗಿ ಸೈನಿಕರನ್ನು ಕ
ಬೇಕು ಎಂದು ಚಕ್ರವರ್ತಿಯಲ್ಲಿ ಮನವಿ ಮಾ
ಕೊಳ್ಳಲು ಬ್ಯಾರನ್ನರು ಹೊರಟಿದ್ದರು. ಅ
ಪಲ್ಲಕ್ಕಿಯನ್ನು ಗುರುತಿಸಿದ ಚೀನೀಯ
ಅವರನ್ನು ಗುಂಡಿಕ್ಕಿ ಕೊಂದರು."

ಹೇಳುತ್ತಿದ್ದಾತ ಉಗುಳು ನುಂಗಿ "ವ
ಹತಿನ ಹೊರಗೆ ಪರಿಸ್ಥಿತಿ ತುಂಬ ಗಂಭೀರ
ಗಿದೆ. ಚೀನೀಯರ ಬಳಿ ಈಗ ಮಾ
ರೈಫಲ್‌ಗಳಿವೆ. ಅವರಲ್ಲಿ ಕೆಲವರು ಚೀ
ಕ್ರಿಶ್ಚನ್ನರ ರುಂಡಗಳನ್ನು ಹಿಡಿದುಕೊಂ
ಅಡ್ಡಾಡುತ್ತಿದ್ದಾರೆ. ನಿನ್ನೆ ಇಬ್ಬರು ಇಂಗ್ಲೀ
ಮಿಶನರಿಗಳನ್ನು ಕೊಂದರು ಎಂದು ಕೇಳಿ
ಎಂದು ಹೇಳಿದ.



ಚೀನ ಎಂದಿನಿಂದಲೂ ವಿದೇಶೀಯರನ್ನು ಮೆಚ್ಚಿಲ್ಲ; ಈ ದಂಗೆ ಬಿಳಿಯರ ವಿರುದ್ಧ ಚೀನೀಯರು ಹೂಡಿದ ರಕ್ತಾಕ್ತ ಪ್ರತೀಕಾರವಾಗಿತ್ತು!

ಗಂಗಾಧರ

ಈ ದಾರುಣ ಕಥೆ ಕೇಳಿಕೊಂಡ ಮೇಲೆ ಎಡ್ವರ್ಡ್ ಕಾಂಗರ್ ನುಡಿದ, "ಜರ್ಮನ್ ರಾಯಭಾರಿಯೇನೂ ಜನಪ್ರಿಯನಾಗಿರಲಿಲ್ಲ. ಆದರೆ ಆತ ತುಂಬ ಸತ್ವವಂತನಾಗಿದ್ದ. ನಮ್ಮ ಮುಂದಿನ ಕಷ್ಟಕಾಲದಲ್ಲಿ ಅವನ ಅಭಾವ ನಮಗನಿಸದಿರದು."

ಬಂದವರ ಪ್ರಶ್ನಾರ್ಥಕ ದೃಷ್ಟಿಗುತ್ತರವಾಗಿ ರಾಯಭಾರಿ ಹೇಳಿದ, "ಹೌದು, ನಾನು ಮತ್ತು ಬ್ರಿಟಿಶ್ ರಾಯಭಾರಿ ಇಂದೇ ಈ ವಿಷಯದ ಬಗ್ಗೆ ಚರ್ಚೆಮಾಡಿದೆವು. ಈಗ ನೀವು ತಂದ ಸುದ್ದಿ ಕೇಳಿದರೆ ಸಮಯ ಪ್ರಾಪ್ತವಾಯಿತೆನ್ನಬೇಕು.

"ನಾವು ಕೂಡಲೆ ಕಾರ್ಯಮಗ್ನರಾಗಬೇಕು. ಎಲ್ಲ ಮಿಶನರಿಗಳನ್ನೂ ನಮ್ಮ ವಸಾಹತಿನಲ್ಲಿ ಕರೆತರಬೇಕು. ಹೆಬ್ಬಾಗಿಲನ್ನು ಮುಚ್ಚಿ ಭದ್ರಪಡಿಸಬೇಕು. ಸೈನಿಕರು ಬರುವವರೆಗೆ ಇಲ್ಲಿ ನಮ್ಮನ್ನು ಸಂರಕ್ಷಿಸಿಕೊಂಡರೆ ಮಾತ್ರ ಬದುಕುಳಿಯುತ್ತೇವೆ. ಇಲ್ಲವಾದರೆ ಬಾಕ್ಸರರೆದುರು ನಮ್ಮದೇನು ನಡೆದೀತು?" ರಾಯಭಾರಿ ಹತಾಶನಂತೆ ತಲೆಹಾಕಿದನು.

ಬಾಕ್ಸರ್ಸ್! ಹೌದು. ಚೀನದಲ್ಲಿ ಮಹಾ ಆತಂಕಕಾರಿಯಾಗಿ ಬಾಕ್ಸರ್ ಕ್ರಾಂತಿ ಎದ್ದಿತ್ತು. ಈ ಹೆಸರು ಚೀನದಲ್ಲಿರುವ ಪ್ರತಿಯೊಬ್ಬ ವಿದೇಶೀಯನ ಅಂತರಂಗದಲ್ಲೂ ಭಯವನ್ನುಂಟುಮಾಡಿತ್ತು. ಶತಮಾನಗಳಿಂದಲೂ, ಹತ್ಯಾಕಾರಿ ಗುಪ್ತ ಸಂಸ್ಥೆಗಳಿಂದ ತುಂಬಿದ್ದ ಚೀನ ಈಗ ಅವುಗಳೆಲ್ಲ ಅತ್ಯಂತ ಭೀಕರವಾದ ಬಾಕ್ಸರ್ ಸಂಸ್ಥೆಗೆ ಜನ್ಮವಿತ್ತಿತ್ತು.

ಬಾಕ್ಸರರ ಸರಿಯಾದ ಹೆಸರು "ಸತ್ಯವಾದಿಗಳ ಮುಷ್ಟಿ" ಎಂದಾಗಿತ್ತು. ಹುಸಿ ಮುಷ್ಟಿಯುದ್ಧವನ್ನು ಹೋಲುತ್ತಿದ್ದ ಸಾಂಪ್ರದಾಯಿಕ ನರ್ತನದಿಂದಾಗಿ ಈ ಸಂಸ್ಥೆಯವರಿಗೆ ಬಾಕ್ಸರ್ ಎಂಬ ಹೆಸರು ಬಂದಿತ್ತು. ಚೀನೀ ಸಮುದ್ರ ಮತ್ತು ಚೀನದ ಮಹಾ ಗೋಡೆ ಇವುಗಳ ನಡುವೆ ಇರುವ ಪ್ರತಿಯೊಬ್ಬ ವಿದೇಶೀಯನನ್ನೂ ಕೊಲ್ಲುವುದು ಇವರ ಪ್ರತಿಜ್ಞೆಯಾಗಿತ್ತು.

ಈ ಬಾಕ್ಸರ್ ದಂಗೆ ಈಚೆಗಿನ ಚೀನೀ ಇತಿಹಾಸದ ಅತಿ ಘೋರತ ಘಟನೆಗಳಲ್ಲೊಂದಾಗಿದೆ. ಮಂಚೂ ಚಕ್ರವರ್ತಿಗಳ ಬಲಗುಂದಿದ

ಕಾಣಿಸಿತು. ಚೀನದಲ್ಲಿ ಜನಸಂಖ್ಯೆಯು ಹೆಚ್ಚಳವಾಗಿತ್ತು. ಜನರು ರೋಸಿಗೊಂಡಿದ್ದರು. ಈ ರೋಷ ಸಹಜವಾಗಿಯೆ ವಿದೇಶೀಯರ ಮೇಲೆ ತಿರುಗಿತ್ತು.

ವಿದೇಶೀಯರು ಈ ರೋಷಕ್ಕೆ ತಕ್ಕಮಟ್ಟಿಗೆ ಯೋಗ್ಯ ಪಾತ್ರರೂ ಆಗಿದ್ದರು. ಚೀನದ ಹೆಮ್ಮೆಯ ಇತಿಹಾಸದಲ್ಲಿ ಅದು ಅನೇಕ ಆಕ್ರಮಣಗಳನ್ನೆದುರಿಸಿದ್ದರೂ ಆಗ ಅರುವತ್ತು ವರ್ಷಗಳಿಂದ ಈ ಪಾಶ್ಚಾತ್ಯ ವಿದೇಶೀಯರಿಂದ ಅವರು ಅನುಭವಿಸಿದಂಥ ಅವಮಾನವನ್ನು ಅವರು ಹಿಂದೆಂದೂ ಅನುಭವಿಸಿರಲಿಲ್ಲ. ೧೮೩೯–೪೨ ರ ನಡುವೆ ನಡೆದ "ಅಫೀಮಿನ ಯುದ್ಧ"ದಲ್ಲಿ ಬ್ರಿಟಿಶರು ಚೀನೀಯರನ್ನು ಸಂಪೂರ್ಣ ಸೋಲಿಸಿದ್ದರು. ಈ ವಿಚಿತ್ರ ಯುದ್ಧವನ್ನು ಚೀನದಲ್ಲಿ ಅಫೀಮನ್ನು ಮಾರುವ ಬ್ರಿಟಿಶರ ಹಕ್ಕಿಗಾಗಿ ಹೋರಾಡಲಾಯಿತು. ಚೀನದಲ್ಲಾಗ ಅಫೀಮು ಸೇವನೆಯು ಅಭ್ಯಾಸವಿದ್ದಿಲ್ಲ. ಆದರೆ ಬ್ರಿಟಿಶರು ಭಾರತದಲ್ಲಿ ಬೆಳೆಸಿದ ಅಫೀಮನ್ನು ಕ್ಯಾಂಟನ್ ನಗರದಲ್ಲಿ ತಂದು ಮಾರತೊಡಗಿದರು. ಬೇಗನೆ ಚೀನದಲ್ಲಿ ಬ್ರಿಟಿಶ್ ವ್ಯಾಪಾರಿಗಳು ವರ್ಷಕ್ಕೆ ೨೦೦೦ ಟನ್ ಅಫೀಮನ್ನು ಮಾರಲು ಸಮರ್ಥರಾದರು. ಚೀನೀ ಚಕ್ರವರ್ತಿಯ ಸರಕಾರ ಇದನ್ನು ತಡೆಗಟ್ಟಲು ಬಲಪ್ರಯೋಗ ಮಾಡಿದಾಗ ಬ್ರಿಟಿಶರು ತಮ್ಮ ಸಶಸ್ತ್ರ ನೌಕಾಬಲ ತಂದು ಹಾಂಗ್ ಕಾಂಗ್ ಬಂದರವನ್ನು ವಶಪಡಿಸಿಕೊಂಡು ಎಲ್ಲ ಚೀನೀ ಬಂದರಗಳ ಮೇಲೆ ದಾಳಿ ಪ್ರಾರಂಭಿಸಿತು.

ಚೀನ ಸೋತು ರಾಜಿಗೆ ಬಂತು. ಆಗ ಐದು ಬಂದರಗಳಲ್ಲಿ ಮುಕ್ತ ವ್ಯಾಪಾರ ಮಾಡುವ ಹಕ್ಕನ್ನು ಕೇಳಿಪಡೆದುಕೊಂಡು ಬ್ರಿಟಿಶರು ಚೀನಕ್ಕೆ ಶಾಂತಿದಾನ ಮಾಡಿದರು. ಅಫೀಮು ವ್ಯಾಪಾರ ವರ್ಷಕ್ಕೆ ೪೦೦೦ ಟನ್ನುಗಳಿಗೇರಿತು!

ಬ್ರಿಟಿಶರ ಹಿಂದೆ ಅಮೇರಿಕ, ಫ್ರಾನ್ಸ್ ಮೊದಲಾದವು ಬಂದು ವ್ಯಾಪಾರ ಪ್ರಾರಂಭಿಸಿದವು. ಅವರೊಡನೆ ಕ್ರೈಸ್ತ ಮಿಶನರಿಗಳು ಬಂದು ಒಳನಾಡಿಗೂ ಹೋಗಿ ಮತ ಪ್ರಸಾರ ಮೊದಲು ಮಾಡಿದರು. ಸಾವಿರಗಟ್ಟಳೆ ಜನ ಕ್ರೈಸ್ತರಾಗತೊಡಗಿದರು.

೧೮೫೯ ರಲ್ಲಿ ಮತ್ತೆ ಬ್ರಿಟಿಶರೂ ಫ್ರೆಂಚರೂ ರಾಜಧಾನಿ ಪೀಕಿಂಗಿನಲ್ಲಿ ತಮ್ಮ ರಾಯಭಾರಿಗಳನ್ನಿಡುವ ಹಕ್ಕನ್ನು ಸ್ಥಾಪಿಸಲೆಳಸಿದಾಗ ಚೀನೀಯರು ಅದಕ್ಕೊಪ್ಪಲಿಲ್ಲ. ಫ್ರಾನ್ಸ್, ಬ್ರಿಟನ್ನುಗಳು ಸೇರಿ ೧೮೬೦ ರಲ್ಲಿ ಪೀಕಿಂಗಿನ ಮೇಲೆ ದಂಡೆತ್ತಿ ಹೋದರು. ಚೀನೀಯರು ಸಂಧಾನಕ್ಕೆ ಬಂದ ದೂತರನ್ನು ಕೊಲೆ ಮಾಡುವ ಹುಚ್ಚುತನ ಮಾಡಿದ ನಂತರ ಬ್ರಿಟಿಶರು ಪೀಕಿಂಗಿನ ಹೊರಗಿದ್ದ ಭಾರಿ ಬೇಸಿಗೆಯ ಅರಮನೆಯನ್ನು ಸುಟ್ಟು ಸೇಡು ತೀರಿಸಿಕೊಂಡರು. ವಿದೇಶೀಯರು ರಾಜಧಾನಿಯನ್ನೇ ಆಕ್ರಮಿಸಿದಾಗ ಚೀನೀಯರು ಉಪಾಯವಿಲ್ಲದೆ ಸಂಧಿಗೊಪ್ಪಿ ಇನ್ನೂ ಹೆಚ್ಚು ರೇವು ಪಟ್ಟಣಗಳಲ್ಲಿ ವಿದೇಶೀಯರಿಗೆ ಪ್ರವೇಶವೀಯಬೇಕಾಯಿತು. ಮಿಶನರಿಗಳು ಒಳನಾಡಿನಲ್ಲೆಲ್ಲ ಮತಾಂತರ ಮಾಡಲು ಹಕ್ಕು ಪಡೆದರು.

ಹೀಗೆ ವಿದೇಶೀಯರಿಂದಾದ ಅಭಿಭವದೊಡನೆ ಮಿಶನರಿಗಳ ಕಾರ್ಯವೂ ಸದಾ ಚೀನೀಯರ ಮನಸ್ಸಿನಲ್ಲಿ ನಟ್ಟುಬಿಟ್ಟಿತು. ದೇಶಿ ಕ್ರೈಸ್ತರೂ ಕ್ರೋಧಕ್ಕೆ ಪಾತ್ರರಾದರು. ಅ
ವರ್ಷ ಕಾಲ ಈ ದ್ವೇಷ ಒಳಗೊಳಗೆ ಕುದಿದು
೧೮೯೮ ರ ಕೊನೆಗೆ ಬಹಿರಂಗವಾಗಿ ವ್ಯಕ್ತವಾಗ
ತೊಡಗಿತು. ಈಶಾನ್ಯ ಪ್ರಾಂತದಲ್ಲಿ ವಿದೇಶೀ
ಯರಿಗೆ ಮತ್ತು ದೇಶಿ ಕ್ರೈಸ್ತರಿಗೆ ಉಪಟ
ಆರಂಭವಾಯಿತು. ೧೮೯೯ ರಲ್ಲಿ ವಿದೇಶೀಯ
ರನ್ನು ದ್ವೇಷಿಸುತ್ತಿದ್ದವನೊಬ್ಬ ಗವರ್ನರನಾ
ಮೇಲೆ ಶಾಂಶಿ ಪ್ರಾಂತದಲ್ಲಿ ಬ್ರಿಟಿಶ್ ಮಿಶನ
ಯೊಬ್ಬನ ಕೊಲೆಯಾಯಿತು. ಕ್ರೈಸ್ತ
ಮೇಲೆ ದಾಳಿಗಳು ಆರಂಭವಾದವು.

ಸುದ್ದಿ ಕೇಳಿ ವಿದೇಶಿ ಸರಕಾರಗಳು ಕಿಡಿಕಿ
ಯಾದವು. ಪೀಕಿಂಗಿನಲ್ಲಿರುವ ತಮ್ಮ ಬಾಂ

ತರ ಜೀವಕ್ಕೆ ಗಂಡಾಂತರ ಬಂದಿದೆಯಾದ್ದರಿಂದ ಅವರನ್ನು ರಕ್ಷಿಸಲು ಸೈನ್ಯ ಕಳಿಸುವ ಸನ್ನಾಹವನ್ನು ವಿದೇಶೀಯರು ಆರಂಭಿಸಿದೊಡನೆ ಪರಿಸ್ಥಿತಿ ತೀರ ಹದಗೆಟ್ಟಿತು. ಮಿಶನರಿಗಳನ್ನು ತಂಡತಂಡಲ್ಲಿ ತುಂಡರಿಸಿದರು. ಚೀನಿ ಕ್ರೈಸ್ತರನ್ನು ಸಾವಿರಗಟ್ಟಲೆಯಲ್ಲಿ ಕೊಲೆಗಡಿದರು.

ಅಮೇರಿಕ, ಜಪಾನ್, ರಶಿಯ, ಬ್ರಿಟನ್, ಫ್ರಾನ್ಸ್, ಜರ್ಮನಿ, ಆಸ್ಟ್ರಿಯ, ಇಟಲಿಗಳು ಸೈನ್ಯ ಸಂಗ್ರಹಿಸಿ ಟಾಕು ಬಂದರದ ಮೂಲಕ ಪೀಕಿಂಗಿಗೆ ಕಳಿಸಲು ನಿರ್ಧರಿಸಿದವು. ಜೂನ್ ೧೦ ತಂದು ಮೊದಲ ತಂಡ ಬಂದಿಳಿಯಿತು. ೧೭ ತಂದು ಅದನ್ನು ವಶಮಾಡಿ, ಪೀಕಿಂಗಿನ ದಿಕ್ಕಿಗೆ ದಂಡಯಾತ್ರೆ ಪ್ರಾರಂಭಿಸಿತು. ಇದರಿಂದ ದಂಗೆಗಾರರು ಮತ್ತಷ್ಟು ರೊಚ್ಚಿಗೆದ್ದರು.

ಚೀನಿ ಸರಕಾರ ಮೊದಲು ದಂಗೆಗಾರರನ್ನು ಹತ್ತಿಕ್ಕಲು ಯತ್ನಿಸಿತ್ತು. ಆದರೆ ವಿದ್ವಿಷ್ಟರಾದ ವಿದೇಶೀಯರನ್ನು ಹೊರಗಟ್ಟಲು ಇದೊಳ್ಳೆ ಸಂಧಿಯೆಂದರಿತು ಆ ಮೇಲೆ ಅವರಿಗೆ ಪ್ರೋತ್ಸಾಹವೀಯತೊಡಗಿತು. ದಂಗೆಗಾರರು ಪೀಕಿಂಗಿನಲ್ಲೇ ತಮ್ಮ ಹಿಂಸಾಚಾರವನ್ನು ಆರಂಭಿಸಿದರು. ಅವರಿಗೆ ಕುತಂತ್ರಿಯೂ ಕ್ರೂರಿಯೂ ಆದ ವಿಧವಾ ರಾಜಮಾತೆಯ ಬೆಂಬಲವಿತ್ತು. ವಿದೇಶಿ ವಸಾಹತಿನ ನಾಯಕನಾಗಿದ್ದ ಜರ್ಮನ್ ರಾಯಭಾರಿ ಬ್ಯಾರನ್ ವಾನ್ ಕೆಟ್ಲರನು ತನಗೆ ಚೀನಿ ಸೈನ್ಯದ ರಕ್ಷಣೆಗೆ ಕೇಳಹೋದರೆ ಅವನ ಕೊಲೆಯೇ ಆಯಿತು. ವಿಧವಾ ರಾಜಮಾತೆ ವಿದೇಶಿಯರನ್ನೆಲ್ಲ ಕೊಲೆಗಡಿಯಲು ಅಪ್ಪಣೆಯಿತ್ತಳು.

ರಾಜಧಾನಿಯಲ್ಲಿದ್ದ ವಿದೇಶೀಯರಿಗೀಗ ಹೊರಗಿನಿಂದ ಸಹಾಯ ಬರುವ ವರೆಗೆ ತಮ್ಮ ಶಕ್ತ್ಯನುಸಾರ ಆತ್ಮರಕ್ಷಣೆಮಾಡಿಕೊಳ್ಳುವುದೊಂದೇ ಉಳಿದಿತ್ತು. ಆದಕ್ಕವರು ಅಣಿಯಾದರು. ಚೀನದಲ್ಲಿ ವಿದೇಶೀಯರೆಸಗಿದ ಅನ್ಯಾಯಗಳೇನೇ ಇರಲಿ, ಈ ಆತ್ಮರಕ್ಷಣೆಯ ಕಥೆ ಇತಿಹಾಸದ ಅಪೂರ್ವ ಧೈರ್ಯ, ಸ್ವಾರ್ಥತ್ಯಾಗ, ಶಿಸ್ತುಗಳ ಕಥೆಗಳಲ್ಲೊಂದಾಗಿತ್ತು.

ಮೂರನೆಯ ದಿನ ಮಿಶನರಿಗಳನ್ನೂ ಅವರಿಂದ ಮತಾಂತರಿಸಲ್ಪಟ್ಟ ಚೀನೀಯರನ್ನೂ ಅಂತಾರಾಷ್ಟ್ರೀಯ ವಸಾಹತಿಗೆ ಕರೆತರಲಾಯಿತು. ವಸಾಹತಿನಲ್ಲಿದ್ದ ವಿವಿಧ ದೇಶಗಳ ಜನರು ಬಾಕ್ಸರರ ಮುತ್ತಿಗೆಯಿಂದ ತಮ್ಮ ರಕ್ಷಣೆಯ ಸಿದ್ಧತೆಗಳನ್ನು ಮಾಡಿಕೊಳ್ಳತೊಡಗಿದರು. ಅಮೇರಿಕ, ಬ್ರಿಟನ್, ಜರ್ಮನಿ, ಜಪಾನ್, ಫ್ರಾನ್ಸ್, ರಶಿಯ, ಇಟಲಿ, ಸ್ಪೇನ್, ಆಸ್ಟ್ರಿಯ, ಪೋರ್ತುಗಾಲ್, ಬೆಲ್ಜಿಯಂ ಮತ್ತು ಹಾಲೆಂಡುಗಳ ರಾಯಭಾರಿಗಳೂ ಅವರ ಪರಿವಾರದವರೂ ಅವರ ದೇಶಗಳಿಂದ ಬಂದಿದ್ದ ಕಾವಲುಗಾರರೂ ಕಂಪೌಂಡ್ ಗೋಡೆಗಳಿಗೆ ಉಸುಬಿನ ಚೀಲಗಳನ್ನು ಒಟ್ಟಿದರು. ಆಹಾರ ಮತ್ತು ಮದ್ದುಗುಂಡುಗಳ ಹಂಚಿಕೆ ಮಾಡಿದರು. ನೀರಿಗಾಗಿ ಅವರಿಗೆ ಲಭ್ಯವಿದ್ದ ಎರಡೇ ಎರಡು ಭಾವಿಗಳನ್ನು ಸ್ವಚ್ಛಮಾಡಿದರು. ಸಾಧ್ಯವಿದ್ದೆಲ್ಲ ಕ್ರಮಗಳನ್ನು ಯೋಚಿಸಿ ಏನಾಗುತ್ತೊ ಎಂಬ ಆತಂಕದಿಂದ ಕಾದು ಕುಳಿತರು.

"ಶಾ! ಶಾ! (ಕೊಲ್ಲು ಕೊಲ್ಲು)" ಎಂದು ಕೂಗುತ್ತ ಆವೇಶಯುಕ್ತರಾದ ಬಾಕ್ಸರರು ವಸಾಹತಿಗೆ ಮುತ್ತಿಗೆ ಹಾಕಿದರು. ಚೀನೀಯರೇನಾದರೂ ಗುಂಡು ಹಾರಿಸುವಲ್ಲಿ ಹೆಚ್ಚು ಗುರಿಕಾರರಾಗಿದ್ದರೆ ಅವರು ಸಂತತವಾಗಿ ಹಾರಿಸಿದ ಗುಂಡುಗಳಿಂದ ಪ್ರಚಂಡ ಅನಾಹುತವಾಗಬಹುದಿತ್ತು.

ಬಾಗಿಲನ್ನು ಒಡೆಯಲು ಬಾಕ್ಸರರು ಮಾಡಿದ ಪ್ರಯತ್ನಗಳನ್ನು ಧೀರತನದಿಂದ ಕಾದಿ ನಾವಿಕ ಕಾವಲುಗಾರರು ವ್ಯರ್ಥಗೊಳಿಸಿದರು. ಬಾಕ್ಸರರು ಎರಡು ಸಲ ಸುರಂಗಗಳನ್ನು ತೋಡಿ ಅಲ್ಲಿ ಸ್ಫೋಟಕಗಳನ್ನಿಟ್ಟು ಗೋಡೆ ಹಾರಿಸಲು ಮಾಡಿದ ಪ್ರಯತ್ನ ಒಳಗಿನವರ ಜಾಗರೂಕತೆಯಿಂದ ವಿಫಲವಾಯಿತು.

ನಸಾಹತನ್ನು ಸುಟ್ಟು ಬಿಡುವ ಛಲದಿಂದ ಬಾಕ್ಸರರು ಅದಕ್ಕೆ ಕೆಲವೇ ಗಜ ಅಂತರದಲ್ಲಿದ್ದ ಹಾನ್ಲಿನ್ ಅಕಾದಮಿಗೆ ಬೆಂಕಿ ಹಚ್ಚಿದರು. ಜಗತ್ತಿನಲ್ಲಿಯ ಶ್ರೇಷ್ಠ ಪುಸ್ತಕಾಲಯಗಳಲ್ಲಿ ಒಂದಾಗಿದ್ದ ಅಕಾದಮಿಯ ವಾಚನಾಲಯ ಮತ್ತು ಸುಪ್ರಸಿದ್ಧ ಪುಸ್ತಕ ವ್ಯಾಪಾರಿಗಳ ಬೀದಿ ಸುಟ್ಟು ಭಸ್ಮವಾಯಿತು. ಪುನಃ ಸಿಗಲಾರದಂಥ ದುರ್ಲಭ ಪುಸ್ತಕಗಳು, ಹಸ್ತಪ್ರತಿಗಳು ನಾಶವಾಗಿಹೋದವು.

ಅತ್ತ ಪೀಕಿಂಗಿನಲ್ಲಿಯ ವಿದೇಶೀಯರ ರಕ್ಷಣೆಗೆ ಧಾವಿಸುತ್ತಿದ್ದ ಸೈನ್ಯ ೩೦ ಮೈಲು ಮಗ್ಗಿ ಟೈಂಟ್ಸಿನ್ ಕೋಟೆಯ ಹೊರಗೆ ತಡೆದು ಬಿದ್ದಿತ್ತು. ಕೋಟೆಯೊಳಗೆ ಪ್ರಬಲ ಚೀನಿ ಪಡೆಯುಂಟೆಂಬ ಭ್ರಮೆಯಿಂದ ಈ ಪಡೆ ನೇರ ದಾಳಿ ಮಾಡಲಿಲ್ಲ- ಬಾಕ್ಸರರ ದಾಳಿ ನಿರಂತರ ನಡೆದೇ ಇತ್ತು. ವಿದೇಶಿ ಪಥಕವು ಹೊಸ ಸೈನ್ಯಗಳು ಬರುವ ದಾರಿ ಕಾಯುತ್ತ ಒಂದು ತಿಂಗಳನ್ನು ವ್ಯರ್ಥವಾಗಿ ಕಳೆಯಿತು. ಇತ್ತ ಮುತ್ತಿಗೆಗೊಳಗಾದವರ ಪರಿಸ್ಥಿತಿ ಶೋಚನೀಯವಾಗುತ್ತಿತ್ತು.

ಮುತ್ತಿಗೆ ಏಳು ವಾರಗಳ ವರೆಗೆ ನಡೆದ ನಂತರ ಬಾವಿಗಳಲ್ಲಿದ್ದ ನೀರು ಪೂರ್ಣ ಖರ್ಚಾಗಿ ಅವು ಬತ್ತುವ ಸ್ಥಿತಿಗೆ ಬಂದವು. ಚೀನದ ಇತಿಹಾಸದಲ್ಲೇ ಪ್ರಖರವಾದ ಬೇಸಿಗೆ ಕಾಲ ಆ ಸಲ ಬಂದಿತ್ತು. ಆಹಾರವೆಂದರೆ ಹಣ್ಣುಗಳು ಮತ್ತು ಒಂದು ಹಿಡಿ ಮಾಂಸ. ಈ ಮಾಂಸ ಕೂಡ ಪೋಲೋ ಆಟಕ್ಕಾಗಿ ತಂದಿದ್ದ ಕುದುರೆಗಳಿಂದ ಒದಗುತ್ತಿತ್ತು. ಆ ಕುದುರೆಗಳ ಸಂಖ್ಯೆ ಕೂಡ ಒಂದೆರಡಕ್ಕೆ ಇಂದಿಳಿದಿತ್ತು.

ಮಃ. ಹತಿನ ನಾವಿಕ ಕಾವಲುಗಾರರಲ್ಲಿ ೪೦ ಜನ ಸತ್ತಿದ್ದರು. ಮತ್ತೆ ೪೦ ಜನರಿಗೆ ತುಂಬ ಗಾಯಗಳಾಗಿದ್ದವು. ಸಂತತವಾಗಿ ಹಾರುತ್ತಿದ್ದ ಗುಂಡುಗಳ ಸಪ್ಪಳದಿಂದ ರಾತ್ರಿಯಿಡೀ ನಿದ್ದೆ ಮಾಡಲಾರದೆ ಎಲ್ಲರೂ ಕಂಗೆಟ್ಟಿದ್ದರು. ಮತ್ತೆ ಬೆಂಕಿಗೆ ಗಾಳಿ ಹಾಕಿದಂತೆ ಚೀನದ ಕುಟಿಲ ಚಕ್ರವರ್ತಿನಿಯ ಆದೇಶದಂತೆ, ಚೀನದ ಸೈನ್ಯ ಬಾಕ್ಸರನ್ನು ಕೂಡಿಕೊಂಡಿತ್ತು. ಒಳಗಿದ್ದ ಪ್ರತಿಯೊಬ್ಬನಿಗೆ ೫೦ಕ್ಕೂ ಹೆಚ್ಚು ಶತ್ರುಗಳು ಹೊರಗಡೆ ಇದ್ದರು. ಒಳಗಿದ್ದವರ ಮೃತ್ಯು ಬಾಗಿಲಿಗೆ ಬಂದಿತ್ತು.

ಬ್ಯಾರನ್ ವಾನ್ ಕೆಟ್ಲರನ ಕೊಲೆಯಿಂದ ಸಂತಪ್ತವಾದ ಜರ್ಮನಿ ೧೭,೦೦೦, ಜಪಾನ ಮತ್ತು ರಶಿಯ ತಲಾ ೫೦,೦೦೦, ಬ್ರಿಟನ್ ಮತ್ತು ಫ್ರಾನ್ಸ್ ತಲಾ ೨೦,೦೦೦ ಸೈನ್ಯಗಳನ್ನು ಚೀನೀಯರನ್ನು ಹತ್ತಿಕ್ಕಲೆಂದು ಕಳಿಸಿದವು. ೧೯೦೦, ಜುಲೈ ತಿಂಗಳ ಕೊನೆಯ ಹೊತ್ತಿಗೆ ಚೀನದ ಸಮುದ್ರ ತೀರದಲ್ಲಿ ಬಂದಿಳಿದ ವಿದೇಶೀ ಸೈನ್ಯದ ಸಂಖ್ಯೆ ೨,೫೦,೦೦೦ ದಷ್ಟಿತ್ತು. ಆ ಸೈನ್ಯವೀಗ ಪೀಕಿಂಗಿನತ್ತ ಹೊರಟಿತ್ತು.

ಪ್ರಾರಂಭದಲ್ಲಿ ಈ ಸೈನ್ಯ ಎರಡು ಸಲ ಬಾಕ್ಸರರೊಡನೆ ಭೀಕರವಾಗಿ ಹೋರಾಡಿ ತುಂಬ ಸಾವು ನೋವುಗಳನ್ನು ಅನುಭವಿಸಿತು. ಸೈನ್ಯ ಮುನ್ನುಗ್ಗುತ್ತ ನಡೆದಂತೆ ೧೦ ಲಕ್ಷಕ್ಕಿಂತಲೂ ಹೆಚ್ಚು ಜನರ ಸೈನ್ಯ ಅವರ ಹಾದಿಯನ್ನು ಅಡ್ಡಗಟ್ಟಲು ಸಿದ್ಧವಾಗಿದೆ ಎಂದು ತಿಳಿದುಬಂತು. ಪೀಕಿಂಗಿನಲ್ಲಿ ಮರಣವನ್ನು ಎದುರು ನೋಡುತ್ತಿದ್ದ ವಿದೇಶಿಯರ ನೆರವಿಗೆ ಸಕಾಲದಲ್ಲಿ ತಲುಪುವುದು ಅಸಾಧ್ಯ ಎಂಬಂಥ ಪರಿಸ್ಥಿತಿಯಿತ್ತು.

ಜುಲೈ ೪ ರಂದು ಮುತ್ತಿಗೆಗೊಳಗಾದವರ ಕೊನೆಯ ಸಂದೇಶ ಬಂದಿತ್ತು. ಅನಂತರ ಭೀಕರ ಮೌನದ ಕೆಲ ದಿನಗಳ ನಂತರ ನ್ಯೂಯಾರ್ಕ್ ಮತ್ತು ಲಂಡನ್ನಗಳಿಗೆ ವಸಾಹತಿನ ಪತನದ ಸುದ್ದಿ ಬರತೊಡಗಿತು. ಜುಲೈ ೬ ರಂದು ಬಾಕ್ಸರರೂ ಚೀನೀ ಸೈನ್ಯವೂ ಪ್ರಬಲ ದಾಳಿಯನ್ನು ಮಾಡಿದ್ದವು. ವಸಾಹತಿನ ೪೦೦ ಕಾವಲುಗಾರರು ಕಲಿತನದಿಂದ ಹೋರಾಡಿ ವೀರ ಮರಣವನ್ನಪ್ಪಿದ್ದರು. ವಸಾಹತಿನಲ್ಲಿದ್ದ ರಾಯಭಾರಿಗಳು, ಅವರ ಹೆಂಡಿರು ಮಕ್ಕಳು

ಪರಿವಾರದವರು ಎಲ್ಲರೂ ಅಮಾನುಷ ರೀತಿಯಲ್ಲಿ ಕೊಲೆ ಮಾಡಲ್ಪಟ್ಟಿದ್ದರು — ಹೀಗೆಂದು ಆ ಸುದ್ದಿಯ ಸಾರವಾಗಿತ್ತು.

ಇವರ ನೆರವಿಗೆ ಹೊರಟಿದ್ದ ಸೈನ್ಯಕ್ಕೆ ಹೆಜ್ಜೆ ಹೆಜ್ಜೆಗೂ ಪ್ರಬಲ ಪ್ರತಿಭಟನೆ ಎದುರಾಗುತ್ತಿತ್ತು. ಅಮೇರಿಕದ ಒಂಬತ್ತನೆಯ ಕಾಲ್ದಳದವರಲ್ಲಿ ಶೇಕಡ ೨೫ ಕ್ಕಿಂತಲೂ ಹೆಚ್ಚು ಜನ ಹತರಾಗಿದ್ದರು. ರಶಿಯ, ಜಪಾನುಗಳ ಸೈನಿಕರಿಗೂ ಅಪಾರ ಹಾನಿ ಸಂಭವಿಸಿತ್ತು. ಈ ಸಂಯುಕ್ತ ದಳದ ಸೇನಾಪತಿ ಎಡ್ಮಿರಲ್ ಸೇಮೂರ್ ಅವರು ಕಣ್ಣೀರು ಸುರಿಸುತ್ತ, ಚೀನೀಯರ ಕೈಗೆ ಸಿಕ್ಕು ಯಮಯಾತನೆ ಅನುಭವಿಸುವುದಕ್ಕಿಂತಲೂ ಗಾಯಾಳುಗಳನ್ನು ಗುಂಡಿಕ್ಕಿ ಕೊಲ್ಲುವುದು ಮೇಲು ಎಂದು ಹಾಗೆ ಅಪ್ಪಣೆ ಮಾಡಿದರು.

ಮುಂದುವರಿದಾದರೂ ಏನು ಪ್ರಯೋಜನ? ಅಂತಾರಾಷ್ಟ್ರೀಯ ವಸತಿಯು ನಾಶವಾಗಿ ಹೋಗಿತ್ತಲ್ಲ! ಆದರೆ ವಿದೇಶೀಯರು ತಮಗಾದ ಅನ್ಯಾಯದ ಸೇಡು ತೀರಿಸಿಕೊಳ್ಳದೆ ಬಿಡಲು ಸಿದ್ಧರಿರಲಿಲ್ಲ ಅವರು ಹಟದಿಂದ ಮುನ್ನಡೆಯುತ್ತಿದ್ದರು.

ಜುಲೈ ೧೪ ರಂದು ಯುದ್ಧ ನಿಲ್ಲಿಸಿ ಶಾಂತಿ ಸ್ಥಾಪಿಸುವ ಮೊದಲನೆ ಹೆಜ್ಜೆಯೆಂದು ಅಮೇರಿಕದ ಅಧ್ಯಕ್ಷ ಮೆಕಿನ್ಲೆಯವರಿಗೆ ಚೀನದ ಚಕ್ರವರ್ತಿ ಒಂದು ಮನವಿ ಕಳಿಸಿದ. ಚೀನದ ಚಕ್ರವರ್ತಿಯ ಮೋಸಗಾರಿಕೆಯ ಅನುಭವವಿದ್ದ ಮೆಕಿನ್ಲೆ ಅವರು ವಿದೇಶಮಂತ್ರಿ ಜಾನ್ ಹೇ ಅವರೊಂದಿಗೆ ವಿಚಾರ ವಿನಿಮಯ ಮಾಡಿದರು.

ವಾಶಿಂಗ್ಟನ್ನಲ್ಲಿ ಮೆಕಿನ್ಲೆಯವರ ಭವನದ ಸಮೀಪದಲ್ಲೇ ಇದ್ದ ಇನ್ನೊಂದು ಕಟ್ಟಡದಲ್ಲಿ ಇದೇ ಸಮಯದಲ್ಲಿ ಮತ್ತೊಂದು ವಿಚಿತ್ರವಾದ ಸಭೆ ನಡೆದಿತ್ತು.

ಅಮೇರಿಕ ಗುಪ್ತಚಾರ ದಳದ ವಿಲ್ಕಿಯು ಹತು ತುಂಬ ವ್ಯಾವಹಾರಿಕ ಮನುಷ್ಯ. ತನ್ನೆದುರು ಕುಳಿತಿದ್ದ ಎತ್ತರದ, ಪಂಡಿತನ ಕಳೆಯುಳ್ಳ ವ್ಯಕ್ತಿಯನ್ನು ಅವರು ಅವಿಶ್ವಾಸದ ದೃಷ್ಟಿಯಿಂದ ನೋಡುತ್ತ ಹೇಳಿದರು, "ಡಾಕ್ಟರ್, ನೀವೆಂದದ್ದು ನನಗೆ ಅರ್ಥವೇ ಆಗುತ್ತಿಲ್ಲ. ದಯವಿಟ್ಟು ಪುನಃ ಹೇಳುತ್ತೀರಾ? ನೀವೆನ್ನುವುದು ತುಂಬ ವಿಚಿತ್ರವೆನಿಸುತ್ತಿದೆಯೆಂದು ಒಪ್ಪುತ್ತೀರಿ ತಾನೇ?"

ಡಾಕ್ಟರರು ಹೌದೆಂಬಂತೆ ತಲೆಯಾಡಿಸಿದರು. ಆಮೇಲೆ ನುಡಿದರು, "ಹೇಳುತ್ತೇನೆ, ಕೇಳಿ. ನಾನು ಡಾ ಜಾನ್ ಎಲಿಸ್. ವಾಶಿಂಗ್ಟನ್ನಿನ ಕೆ ಸ್ಟ್ರೀಟಿನ ೧೮೧೭ ನೇ ಕಟ್ಟಡದಲ್ಲಿ ನಾನು ಅನೇಕ ವರ್ಷಗಳಿಂದ ನನ್ನ ವ್ಯವಸಾಯ ನಡೆಸುತ್ತಿದ್ದೇನೆ.

"ನನಗೆ ಚೀನದಿಂದ ನೇರವಾಗಿ ಸಂದೇಶವೊಂದು ಬಂದಿದೆ. ಪೀಕಿಂಗಿನಲ್ಲಿರುವ ರಾಯಭಾರಿ ಕಾಂಗರ್ ಮತ್ತು ಅವರ ಕುಟುಂಬ ಹಾಗೂ ರಾಯಭಾರಿ ಕಚೇರಿಯ ಇತರರು, ಇತರ ದೇಶಗಳ ರಾಯಭಾರಿಗಳೇ ಮುಂತಾದವರು ಬದುಕಿದ್ದಾರೆ, ಚೆನ್ನಾಗಿದ್ದಾರೆ ಎಂದು ಆ ಸಂದೇಶ ಹೇಳುತ್ತದೆ. ಬ್ರಿಟಿಶ್ ರಾಯಭಾರಿ ಕಚೇರಿ ಮತ್ತು ಚೀನಾ ಚಕ್ರವರ್ತಿಯ ಅರಮನೆಯನ್ನು ಜೋಡಿಸುವ ಸುರಂಗ ಮಾರ್ಗದಲ್ಲಿ ಅವರು ಅಡಗಿಕೊಂಡಿದ್ದಾರೆ. ಅವರು ಆಹಾರ ಮತ್ತು ನೀರಿನ ಅಭಾವದಿಂದ ಕಂಗೆಟ್ಟು ಹೋಗಿದ್ದಾರೆ. ಆದರೂ ಅವರು ಶರಣಾಗತರಾಗಿಲ್ಲ ಮುತ್ತಿಗೆ ನಡೆದೇ ಇದೆ. ಅಮೇರಿಕ ಈಗ ಕೈಕೊಳ್ಳಲಿರುವ ನಿರ್ಧಾರಕ್ಕೆ ಈ ಸುದ್ದಿ ತುಂಬ ಮಹತ್ವದ್ದು ಎಂದು ಭಾವಿಸಿ ನಿಮ್ಮಲ್ಲಿಗೆ ಬಂದಿದ್ದೇನೆ."

"ಆದರೆ ನೀವು ಪೀಕಿಂಗಿನಲ್ಲಿ ನಡೆದ ಘಟನೆಗಳ ಬಗ್ಗೆ ಪತ್ರಿಕಾ ವರದಿಗಳನ್ನು ನೋಡಿಲ್ಲವೆ? ಚೀಫೂದಲ್ಲಿರುವ ನಮ್ಮ ಕಾನ್ಸಲ್ ಜನರಲ್ ರು ಕೂಡ ಪೀಕಿಂಗಿನಲ್ಲಿರುವ ಎಲ್ಲ ವಿದೇಶೀಯರ ಕೊಲೆಯಾಗಿದೆಯೆಂದು ತಿಳಿಸಿದ್ದಾರೆ. ಪೀಕಿಂಗಿನಲ್ಲಿ ಅನೇಕ

ವರ್ಷಗಳ ವರೆಗೆ ಇದ್ದ ನಮ್ಮ ವಿದೇಶ ವ್ಯವಹಾರ ಶಾಖೆಯವರಲ್ಲಿ ಒಬ್ಬರೂ ನೀವು ಹೇಳುವ ಸುರಂಗ ಮಾರ್ಗದ ವಿಚಾರ ತಮಗೆ ಗೊತ್ತಿಲ್ಲವೆನ್ನುತ್ತಾರೆ. ಹೀಗಿದ್ದು...."

"ಹೀಗಿದ್ದರೂ ನಾನು ನಿಮಗೆ ಈ ಸಂದೇಶ ತಲುಪಿಸುತ್ತಿದ್ದೇನೆ. ನನಗೆ ಬಂದ ಸಂದೇಶ ಸತ್ಯವಾದದ್ದು. ಉಳಿದ ವರದಿಗಳು ಏನೇ ಹೇಳಲಿ, ನನ್ನ ಮಾತು ನಿಜ," ಡಾಕ್ಟರರು ದೃಢವಾಗಿ ನುಡಿದರು.

ಡಾಕ್ಟರರು ಸಂದೇಶ ಹೇಗೆ ಬಂದಿತೆಂಬುದನ್ನು ಹೇಳಲಿಲ್ಲ. ಡಾಕ್ಟರರು ಸಂಭಾವಿತ ವ್ಯಕ್ತಿಯೆನ್ನುವುದನ್ನು ತಿಳಿದುಕೊಂಡಿದ್ದ ವಿಲ್ಕಿ ವಿಷಯವನ್ನು ಮೇಲಿನವರಿಗೆ ತಿಳಿಸಿದರು. ಅಂದೇ ರಾತ್ರಿ ಎಷ್ಟೇ ಪ್ರತಿಭಟನೆಯಿದ್ದರೂ ಪೀಕಿಂಗಿಗೆ ನುಗ್ಗಬೇಕೆಂದು ಅಮೇರಿಕದ ಅಧ್ಯಕ್ಷರಿಂದ ಆಜ್ಞೆ ಹೋಯಿತು.

ಆಗಸ್ಟ್ ೧೪ ರಂದು ಅಂತಾರಾಷ್ಟ್ರೀಯ ಸೈನ್ಯದ ಮುಂಚೂಣಿಯಲ್ಲಿದ್ದ ಬ್ರಿಟಿಶ್ ಮತ್ತು ಅಮೇರಿಕನ್ ಸೈನಿಕರು ಬಾಕ್ಸರರ ಪ್ರತಿಭಟನೆಯನ್ನು ಮುರಿದು ಪೀಕಿಂಗಿನ ವಿದೇಶೀ ವಸಾಹತಿನ ಬಾಗಿಲಿಗೆ ಬಂದಾಗ ಮುತ್ತಿಗೆಗೊಳಗಾಗಿದ್ದವರು ಶಸ್ತ್ರಗಳನ್ನು ಚೆಲ್ಲಿ ಹರ್ಷಾತಿರೇಕದಿಂದ ಜಯಘೋಷ ಮಾಡಿದರು.

ಡಾಕ್ಟರ್ ಎಲಿಸ್‌ರು ಹೇಳಿದಂತೆ ಅಮೇರಿಕದ ರಾಯಭಾರಿ ಹಾಗೂ ಇತರರು ಸುರಂಗ ಮಾರ್ಗದಲ್ಲಿ ಅವಿತುಕೊಂಡಿದ್ದರು. ವಿಮೋಚನೆಯಾದೊಡನೆ ಅವರೂ ಹೊರಬಂದು ಸಂಭ್ರಮದಲ್ಲಿ ಪಾಲುಗಾರರಾದರು.

ಬಾಕ್ಸರರ ಮುತ್ತಿಗೆ ಜುಲೈ ೪ ರಂದು ಪ್ರಬಲವಾದಾಗ ನೆಲಮಾಳಿಗೆಯೊಂದನ್ನು ಕೊರೆದು ಅಡಗಬೇಕೆಂದು ನೆಲ ಅಗೆಯುತ್ತಿದ್ದಾಗ ಈ ಸುರಂಗ ಮಾರ್ಗ ಆಕಸ್ಮಾತ್ತಾಗಿ ಅವರಿಗೆ ಕಂಡು ಬಂದಿತ್ತು. ವಸಾಹತು ಕಂಪೌಂಡಿನ ಗೋಡೆಗಳು ಮುರಿದು ಒಳಗಿದ್ದವರನ್ನೆಲ್ಲ ಕೊಲೆ ಮಾಡಲಾಯಿತೆಂದು ಚೀನೀಯರು ಹಬ್ಬಿಸಿದ ವಾರ್ತೆ ಸುಳ್ಳಾಗಿತ್ತು. ವಿದೇಶಗಳ ಸಂಯುಕ್ತ ಸೈನ್ಯ ಹಠಾತವಾಗಿ ದಾಳಿ ನಿಲ್ಲಿಸಲಿ ಎಂದು ಚೀನೀಯರು ಈ ಕುಟಿಲ ತಂತ್ರ ಹೂಡಿದ್ದರು.

ಆದರೆ ಕೊನೆಯ ವರೆಗೂ ಅಮೇರಿಕದ ರಾಯಭಾರಿಯೇ ಮುಂತಾದವರು ಜೀವಂತವಾಗಿದ್ದಾರೆಂಬ ಸುದ್ದಿ ಡಾಕ್ಟರರಿಗೆ ಹೇಗೆ ಬಂತು ಎಂಬುದು ಮಾತ್ರ ಇಂದಿಗೂ ರಹಸ್ಯವಾಗಿ ಉಳಿದಿದೆ. ಇದು ಡಾಕ್ಟರರಿಗೆ ದೈವೀ ಸೂಚನೆಯ ಮೂಲಕ ಬಂತೆಂದು ಹೇಳುವವರಿದ್ದಾರೆ.

ಅದೇನೇ ಇರಲಿ, ಚೀನೀ ಅಧಿಕಾರಿಗಳು ಬಾಕ್ಸರರನ್ನು ಬೆಂಬಲಿಸಿ ಜೂಜಾಡಿ ಆಟವನ್ನು ಸಂಪೂರ್ಣವಾಗಿ ಕಳೆದುಕೊಂಡಿದ್ದರು. ರಾಜನ ಸನದಿಲ್ಲದೆ ಯಾರೂ ಕುದುರೆಯೇರಲು ಸಾಧ್ಯವಿಲ್ಲದಿದ್ದ ಚೀನದ ಸ್ವರ್ಗೀಯ ಪಟ್ಟಣದಲ್ಲಿ ವಿದೇಶೀಯ ಸೈನಿಕರು ಕುದುರೆಯೇರಿ ಮೆರೆಯತೊಡಗಿದರು. ತಂತ್ರಗಾರಳಾದ ವಿಧವಾ ರಾಜಮಾತೆ ತನ್ನ ಶ್ರೇಷ್ಠತ್ವವನ್ನೆಲ್ಲ ಕಟ್ಟಿಟ್ಟು ಆಳು ಹೆಂಗಸಿನ ವೇಷದಲ್ಲಿ ನಗರ ಬಿಟ್ಟು ಪಲಾಯನ ಮಾಡಿದಳು.

ಚೀನೀಯರು ಈ ಹುಚ್ಚುತನಕ್ಕೆ ಬಹಳ ಹೆಚ್ಚು ಬೆಲೆ ತೆರಬೇಕಾಯಿತು. ಯುದ್ಧದಲ್ಲಿ ಸತ್ತ ವಿದೇಶೀಯರಿಗೆ ಗೌರವದ ಗೋರಿ ಕಟ್ಟಲು ಅನುಮತಿ ಕೊಡಬೇಕಾಯಿತು. ರಾಯಭಾರಿಯ ಕೊಲೆಗಾಗಿ ಜರ್ಮನಿಗೆ ಕ್ಷಮಾಪಣೆ ಕೇಳಬೇಕಾಯಿತು. ಬಾಕ್ಸರರನ್ನು ದಂಡಿಸಲು ಒಪ್ಪಬೇಕಾಯಿತು. ಯುದ್ಧದ ಖರ್ಚಾಗಿ ೪೫ ಕೋಟಿ ನಾಣ್ಯಗಳ ದಂಡವನ್ನು ೩೯ ವರ್ಷಗಳಲ್ಲಿ ತೀರಿಸಲು ಒಪ್ಪಬೇಕಾಯಿತು.

ಈ ಮಹಾ ಅಪಮಾನದ ಭಾರದಲ್ಲಿ ಚೀನೀ ರಾಜಸತ್ತೆ ತತ್ತರಿಸಿಹೋಯಿತು. ಹನ್ನೊಂದೇ ವರ್ಷಗಳಲ್ಲಿ ಕ್ರಾಂತಿಕಾರರು ದೇಶವನ್ನು ವಶಪಡಿಸಿಕೊಂಡು ರಾಜಸತ್ತೆಯನ್ನು ನಷ್ಟಪಡಿಸಿ ಚೀನದ ಇತಿಹಾಸದಲ್ಲೇ ಮೊದಲಬಾರಿ ಪ್ರಜಾರಾಜ್ಯವನ್ನು ಸ್ಥಾಪಿಸಿದರು.

*



ಇದು ಕೆಂಪುರಕ್ತ ಕಣಗಳಿಲ್ಲದೆಯೂ
ಜೀವಧಾರಣೆ ಮಾಡಲು ಮಾನವನಿಗೆ ನೆರವಾಗುತ್ತದೆ !

# ಏರೊತ್ತಡದ ಕೋಣೆ : ಹೊಸ ಜೀವರಕ್ಷಕ ಸಾಧನ

ಡಾ. ಡಿ. ಎಸ್. ಶಿವಪ್ಪ

ಗರ್ಭದಲ್ಲಿರುವಾಗ ಎದೆಗುಂಡಿಗೆ ಸರಿಯಾಗಿ ಬೆಳೆಯದೆ ಅನೇಕ ಕೂಸುಗಳು ಹಲವಾರು ವಿಕಾರಗಳನ್ನು ಹೊಂದಿರುತ್ತವೆ. ಹೀಗೆ ಹುಟ್ಟಿನಿಂದಲೇ ಬಂದಿರುವ ವಿಕಾರಗಳುಳ್ಳ ಹಸುಗೂಸುಗಳಿಗೆ ಶಸ್ತ್ರಚಿಕಿತ್ಸೆ ದೊರೆಯದಿದ್ದ ಹಿಂದಿನ ಕಾಲದಲ್ಲಿ, ಮೈಯಲ್ಲಿ ರಕ್ತ ಸುತ್ತಾಟಕ್ಕೇ ತೊಡಕಾಗಿ ಅತ್ತಿತ್ತ ಓಡಾಡುವುದಕ್ಕೂ ಏದುಸಿರು ಬಿಡುವಂತಾಗುತ್ತಿತ್ತು. ಈ ಕೂಸುಗಳು ಬದುಕಿ ಬಾಳಿ ಬೆಳೆಯುವುದೇ ದುಷ್ಕರವಾಗಿತ್ತು. ಮುಂದೆ ಇದಕ್ಕಾಗಿ ಶಸ್ತ್ರಚಿಕಿತ್ಸೆ ಹುಟ್ಟಿಕೊಂಡರೂ ಅದನ್ನು ಕೆಲವೇ ನಿಮಿಷಗಳಲ್ಲಿ ಮುಗಿಸಬೇಕಿತ್ತು. ಈ ಅವಸರದಲ್ಲಿ ಅಷ್ಟೇನೂ ಸಾಧಿಸುವಂತಿರಲಿಲ್ಲ. ಇಂದು ಇಂಥ ರೋಗಿ ಮಕ್ಕಳ ಜೀವ ಉಳಿಸುವುದು ಅಷ್ಟು ದುಷ್ಕರವಾಗಿ ಉಳಿದಿಲ್ಲ. ಅಮ್ಲಜನಕದ (ಪ್ರಾಣವಾಯು) ಒತ್ತಡವನ್ನು ಏರಿಸಿದ ಗಾಳಿಯ ಆವರಣದಲ್ಲಿ ರೋಗಿಯನ್ನಿರಿಸುವುದರಿಂದ ಈಗ ಶಸ್ತ್ರಕ್ರಿಯೆಗೆ ಇದರ ಮೂರು ಪಟ್ಟು ಕಾಲದ ಅವಕಾಶ ಸಿಕ್ಕುತ್ತದೆ. ಗುಂಡಿಗೆಯ ರಿಪೇರಿಯನ್ನು ಇನ್ನೂ ಚೆನ್ನಾಗಿಯೇ ಸಾವಕಾಶವಾಗಿ ಮಾಡಬಹುದು.

ರಕ್ತದಲ್ಲಿರುವ ಆಮ್ಲಜನಕದ ಬಹುಪಾಲು ಕೆಂಪು ರಕ್ತಕಣಗಳಲ್ಲಿರುವ ರಕ್ತವರ್ಣಜನಕ (ಹೀಮೋಗ್ಲಾಬಿನ್) ದಲ್ಲಿ ಇರುತ್ತದೆ. ಈ ಕಣಗಳನ್ನು ಬಿಟ್ಟರೆ, ರಕ್ತರಸ (ಪ್ಲಾಸ್ಮ) ದಲ್ಲಿ ಆಮ್ಲಜನಕ ಸಾಮಾನ್ಯವಾಗಿ ಇರುವುದು ಎಲ್ಲೋ ಸ್ವಲ್ಪ ಮಾತ್ರ. ರಕ್ತದಲ್ಲಿರುವ ರಕ್ತವರ್ಣಜನಕವು ಆಮ್ಲಜನಕವನ್ನು ಹಿಡಿದುಕೊಳ್ಳುವ ಪ್ರಮಾಣಕ್ಕೆ ಮಿತಿಯಿದೆ. ಸಾಮಾ



ಒತ್ತಡವೇರಿಸುವ ಕೋಣೆಯ ನಕ್ಷೆ

ನ್ಯವಾಗಿ, ಒಳ್ಳೆಯ ರಕ್ತದಲ್ಲಿರುವ ಆಮ್ಲಜನಕದ ಪ್ರಮಾಣವನ್ನು ಇನ್ನಷ್ಟು ಹೆಚ್ಚಿಸುವುದು ಅಸಾಧ್ಯ. ಆದರೆ, ರಕ್ತದಲ್ಲಿರುವ ಕೆಂಪು ಕಣಗಳನ್ನು ತೆಗೆದರೆ ಉಳಿಯುವ ರಕ್ತರಸದಲ್ಲಿ ಕರಗಿರುವ ಆಮ್ಲಜನಕವನ್ನು ಮಾತ್ರ ಅನೇಕ ಪಟ್ಟು ಏರಿಸಬಹುದು. ರೋಗಿ ತೆಗೆದುಕೊಳ್ಳುವ ಉಸಿರಿನ ಒತ್ತಡವನ್ನು ಹೆಚ್ಚಿಸುವುದೇ ಇದಕ್ಕೆ ಮುಖ್ಯ ಉಪಾಯ.

## ಇದರ ಹುಟ್ಟು

ಹೊರಗಿನ ಗಾಳಿಯಲ್ಲಿ ಸಾಧಾರಣವಾಗಿರುವುದಕ್ಕಿಂತಲೂ ಹೆಚ್ಚಿನ ಒತ್ತಡದಲ್ಲಿರುವ ಆಮ್ಲಜನಕವನ್ನು ರೋಗಿಗಳ ಚಿಕಿತ್ಸೆಗಾಗಿ ಬಳಸುವುದು ಈಚೀಚೆಗೆ ಹೆಚ್ಚಾಗುತ್ತಿವೆ. ಇದಕ್ಕಾಗಿ ಬೇಕೆಂದೇ ಕಟ್ಟಿದ ಹೆಚ್ಚು ಗಾಳಿಯೊತ್ತಡವಿರುವ ಕೋಣೆಗಳನ್ನು ಉಪಯೋಗಿಸುತ್ತಾರೆ. ಇದನ್ನು 'ಏರೊತ್ತಡದ ಕೋಣೆ' ಎಂದು ಕರೆಯುವರು. ಇದು ಹೊಸದೇನೂ ಅಲ್ಲ. ಪೂರ್ವಕಾಲದಿಂದಲೂ ಒಂದಿಲ್ಲೊಂದು ಬಗೆಯಲ್ಲಿ ಇದು ತಿಳಿದೇ ಇತ್ತು. ಮಹಾಧಿಪ ಅಲೆಗ್ಸಾಂಡರ್ ಕ್ರಿ. ಪೂ. ೩೩೨ ರಲ್ಲಿ ಟೈರ್ ಮುತ್ತಿಗೆ ಹಾಕಿದಾಗ ಆಳಮುಳುಗುವ ಗಂಟೆಯನ್ನು ಬಳಸಿದ್ದನೆಂದು ಅರಿಸ್ಟೋಟಲ್ ಬರೆದಿರುವನು. ಈ 'ಮುಳುಗು ಗಂಟೆ'ಯು ಒಂದು ತರಹದ ಏರೊತ್ತಡದ ಕೋಣೆಯೆ ಸೈ. ಆದರೆ ವೈದ್ಯಕೀಯ ಉದ್ದೇಶಕ್ಕಾಗಿ ನಿಜವಾಗಿ, ಗಾಳಿಯ ಒತ್ತಡವೇರಿಸಿದ ಕೋಣೆಯನ್ನು ಕಟ್ಟಲು ಮೊದಲು ಯತ್ನಿಸಿದವನು ಹೆನ್ಷಾ (೧೬೬೨). ಶ್ವಾಸಕೋಶದ ಅನೇಕ ತರದ ಬೇನೆಗಳನ್ನು ತಡೆಯುವುದರಲ್ಲಿ ಉಸಿರಾಟಕ್ಕೂ ಕಫವನ್ನು ಹೊರಡೂಡುವುದಕ್ಕೂ ಇದು ಅನುಕೂಲಿಸುತ್ತದೆಂದು ಅವನು ತಿಳಿದಿದ್ದ.

ಇನ್ನೊಂದು ಶತಮಾನದಲ್ಲಿ(೧೭೭೪) ಆಮ್ಲ-ಜನಕವನ್ನು ಪ್ರೀಸ್ಟ್ಲಿ ಕಂಡುಹಿಡಿದು ಅದೇ ಪ್ರಾಣದಾಯಕ ವಾಯುವೆಂದು ತೋರಿಸಿಕೊಟ್ಟರೂ ಈ ಏರೊತ್ತಡದ ಆಮ್ಲಜನಕದ ಬಳಕೆಗೆ ಯಾರೂ ಕೈಹಾಕದಿದ್ದುದು ಆಶ್ಚರ್ಯವೇ. ಕೊನೆಗೆ, ಉಸಿರಾಟದ ತೊಡಕುಗಳು, ಕಿವುಡತನ, ಎಳೆಯರಲ್ಲಿ ಮೂಳೆಗಳು ಮೆತ್ತಗಾಗುವ ಬೇನೆ, ಎಲುಮುರುಟು(ರಿಕೆಟ್ಸ್)ಗಳೇ ಮುಂತಾದ ಹಲವಾರು ರೋಗಗಳಲ್ಲಿ, ಮೂವರು ಫ್ರೆಂಚರು ೧೮೩೦ ರ ಸುಮಾರಿನಲ್ಲಿ ಇದನ್ನು ಉಪಯೋಗಿಸಿದರು.

ನೀರಿನ ಆಳದಲ್ಲಿ ಕಟ್ಟಡದ ಅಡಿಪಾಯ ಹಾಕುವುದಕ್ಕಾಗಿ, ದೊಡ್ಡ ಗಂಟೆಯಾಕಾರದಲ್ಲಿರುವ ಒತ್ತಿಕ್ಕಿದ ಗಾಳಿಯ ಹದಿಗೂಡ (ಕೆಯ್ಸಾನ್)ನ್ನು ಮೊಟ್ಟಮೊದಲು ಬಳಸಿದ್ದು ಲೊಯ್ರೆ ನದಿಯ ತಳವನ್ನು ಅಗೆಯುವುದಕ್ಕಾಗಿ, ಅದೂ ೧೮೪೧ ರಲ್ಲಿ. ಕೆಲವೇ ವರುಷಗಳಲ್ಲಿ ಇಂತಹ ಒತ್ತಡವೇರಿಸಿದ ಕೋಣೆಗಳನ್ನು ರೋಗಿಗಳ ವೈದ್ಯಕೀಯ ಚಿಕಿತ್ಸೆಗಾಗಿ ಯುರೋಪು, ಅಮೇರಿಕಗಳಲ್ಲಿ ಎಲ್ಲೆಲ್ಲೂ ಕಟ್ಟಿದರಾದರೂ ಈ ಶತಮಾನದ ಮೊದಲಿನ ಹೊತ್ತಿಗೆ ಇದನ್ನು ಹೆಸರಿಸುವವರೇ ಇಲ್ಲವಾದರು. ಆದರೆ, ಅಮೇರಿಕನ್ನರು ಕ್ಲೀವ್ ಲ್ಯಾಂಡಿನಲ್ಲಿ ದೊಡ್ಡ ಸೌಧವನ್ನೇ ಇದಕ್ಕೋಸ್ಕರ ೧೯೨೮ರಲ್ಲಿ ನಿರ್ಮಿಸಿದರು. ೬೪ ಅಡಿ ಅಡ್ಡಳತೆಯ ೫ ಅಂತಸ್ತುಗಳಲ್ಲಿ ಎರಡಾರು ಮಲಗುವ ಕೋಣೆಗಳೊಂದಿಗೆ ಹೋಟೆಲಿನ ಸೌಕರ್ಯಗಳೆಲ್ಲ ಇದರಲ್ಲಿದ್ದುವು. ಹೊರಗಿರುವ ಗಾಳಿಯಲ್ಲಿ ಕೆಲವು ರೋಗಾಣುಗಳು ಚೆನ್ನಾಗಿ ಬೆಳೆದರೆ, ಇನ್ನು ಹಲವು ಸಾಮಾನ್ಯ ಗಾಳಿ ತಾಕಿದರೇ ಸಾಯುತ್ತವೆ. ಹೀಗೆ ಗಾಳಿಯಲ್ಲಿ ಬದುಕುವವು ಗಾಳಿಜೀವಿ (ಏರೋಬ್) ಗಳೆಂದೂ, ಗಾಳಿ ಸೋಕಿದರೆ ಮಡಿಯುವವು ನಿರ್ಗಾಳಿಜೀವಿ (ಅನೀರೋಬ್)ಗಳೆಂದೂ ಏಕಾಣುಜೀವಿ ಶಾಸ್ತ್ರದಲ್ಲಿ ಹೆಸರಾಗಿದೆ. ಇಂತಹ ನಿರ್ಗಾಳಿಜೀವಿಗಳಿಂದಲೇ ಅನೇಕ ರೋಗಗಳು ಆಗಿರಬಹುದೆಂಬ ಆಗಿನ ಕಾಲದ ನಂಬುಗೆಯಿಂದ, ಸಿಹಿಮೂತ್ರ (ಡಯಬಿಟಿಸ್), ಉಪದಂಶ (ಸಿಫಿಲಿಸ್), ರಕ್ತದ ಒತ್ತಡವೇರಿಕೆ,



ಏರೊತ್ತಡದ ಕೋಣೆ : ಒಳಹೋಗಲು ಭದ್ರಬಾಗಿಲು

ಏಡಿಗಂತಿ (ಕ್ಯಾನ್ಸರ್) ಗಳ ಚಿಕಿತ್ಸೆಗಾಗಿ ಜನರು ಇಂಥ ಕೋಣೆಗಳಿಗೆ ಮುನ್ನುಗ್ಗುತ್ತಿದ್ದರೂ ವೈದ್ಯರು ಮಾತ್ರ ಇದರಿಂದಾಗುವ ಗುಣವೆಲ್ಲ ಕೇವಲ ತೋರಿಕೆಯದೆಂದುಕೊಂಡು ತಪ್ಪಾಗಿದ್ದರು. ಆ ಕಡೆ ತಿರುಗಿ ಕೂಡ ನೋಡುತ್ತಿರಲಿಲ್ಲ.

## ಬೇಕಾದಾಗ ಆಮ್ಲಜನಕ

ಕಟ್ಟಕೊನೆಗೆ, ಎದೆಗುಂಡಿಗೆಯ ಶಸ್ತ್ರಚಿಕಿತ್ಸೆಯಲ್ಲಿ ಇದರಿಂದ ಅನುಕೂಲವಾಗಿರುವುದನ್ನು, ಇಂದಿಗೆ ಸರಿಯಾಗಿ ೧೦ ವರುಷಗಳ ಹಿಂದೆ, ಬೆಲ್ಜಿಯಮ್ಮಿನ ಬೊಯರೀಮ ಮತ್ತು ಸಂಗಡಿಗರು ತೋರಿಸಿಕೊಟ್ಟಾಗ ವೈದ್ಯರು ಕಣ್ಣುಬಿಟ್ಟು ನೋಡಲೇಬೇಕಾಯಿತು. ವಾತಾವರಣದ ಸಾಮಾನ್ಯ ಒತ್ತಡವನ್ನು ಮೂರು ಪಟ್ಟು ಏರಿಸಿದರೆ, ಶಸ್ತ್ರಚಿಕಿತ್ಸೆಗಾಗಿ ಎದೆಗುಂಡಿಗೆ ಬಡಿದುಕೊಳ್ಳದಂತೆ ನಿಲ್ಲಿಸಿರುವ ಕಾಲವನ್ನು ಮುಪ್ಪಟ್ಟು ಹೆಚ್ಚಿಸಬಹುದೆಂದು ಇವರು ತೋರಿಸಿಕೊಟ್ಟರು. (ವಾತಾವರಣದ ಸಾಮಾನ್ಯವಾದ ಒಂದು ಒತ್ತಡದಲ್ಲಿ ಚದುರಂಗುಲಕ್ಕೆ ೧೪.೭ ಪೌಂ. ಗಳ ತೂಕದ ಒತ್ತಡವಿರುತ್ತದೆ.) ಗುಂಡಿಗೆಯಲ್ಲಿ ಕೆಟ್ಟು ವಿಕಾರವಾಗಿರುವ ಭಾಗಗಳನ್ನು ಇನ್ನೂ ಚೆನ್ನಾಗಿ ನೇರ್ಪಡಿಸುವಷ್ಟು ಕಾಲಾವಕಾಶ ಶಸ್ತ್ರವೈದ್ಯರಿಗೆ ಇದರಿಂದ ಸುಲಭವಾಗಿ ದೊರೆಯುವಂತಾಯಿತು.

ಸಾಮಾನ್ಯವಾಗಿ ಎದೆಗುಂಡಿಗೆಯ ವಿಕಾರಗಳನ್ನು ಸರಿಪಡಿಸಲು ಶಸ್ತ್ರಚಿಕಿತ್ಸೆ ಮಾಡುವಾಗ ಗುಂಡಿಗಗೂ ಶ್ವಾಸಕೋಶಗಳಿಗೂ ರಕ್ತ ಹೋಗದಂತೆ ಅಡ್ಡಗಟ್ಟಿ ಮೈಹೊರಗಿನಿಂದ (ಎಕ್ಸ್‌ಟ್ರಾ ಕಾರ್ಪೋರಿಯಲ್) ರಕ್ತದ ಸುತ್ತಾಟವನ್ನು ಪ್ರೇರಿಸಿ ಆಮ್ಲಜನಕವನ್ನು ಶರೀರಕ್ಕೆ ನೀಡುವ ಕೃತಕ ಯಂತ್ರಗಳು ಬಳಕೆಯಲ್ಲಿವೆ. ಇಂತಹ ಸಲಕರಣೆಗಳಿಂದ ಮೈಯಲ್ಲಿ ಎಲ್ಲಾ ಅಂಗಾಂಶಗಳಿಗೂ ಮುಖ್ಯವಾಗಿ ಮಿದುಳಿಗೂ ಬೇಕೇಬೇಕಾಗಿರುವ ಆಮ್ಲಜನಕದ ಒದಗಣೆ ತಡೆಯಿರದೆ ಒಂದೇ ಸಮನಾಗಿರುವುದು.

ಕೆಲವೇ ನಿಮಿಷಗಳ ಹೊತ್ತು ಅಮ್ಲಜನಕವಿರದಿದ್ದರೆ ಮಿದುಳಿನ ಮುಖ್ಯ ಭಾಗಗಳು ಮತ್ತೆ ಸರಿಪಡಿಸಲಾಗದಂತೆ ಕೆಟ್ಟು ಸಾಯುತ್ತವೆ. ಇಂತಹ ಸಮಯದಲ್ಲಿ ಮುಪ್ಪಟ್ಟು ಹೆಚ್ಚಿದ ಗಾಳಿಯಾವರಣದ ಒತ್ತಡವಿದ್ದರೆ ಅವಶ್ಯ ಜನಕ ತುಂಬುವ ಯಂತ್ರ ಸಣ್ಣದಾಗಿದ್ದರೂ ಸಾಕು. ರಕ್ತರಸದಲ್ಲಿ ಅಮ್ಲಜನಕವನ್ನು ಹೆಚ್ಚಾಗಿ ತುಂಬುವ ಈ ವಿಧಾನದಿಂದ ಅಪಾಯ ಅಷ್ಟಾಗಿಲ್ಲ.

ನಿಜವಾಗಿ ನೋಡಿದರೆ, ಈ ಮುಪ್ಪಟ್ಟು ಏರಿಸಿದ ಅಮ್ಲಜನಕದ ಇಲ್ಲವೇ ವಾತಾವರಣದ ಒತ್ತಡದಲ್ಲಿ ರೋಗಿಯನ್ನು ಇರಿಸಿರುವಾಗ ರಕ್ತರಸದಲ್ಲಿ ಅಮ್ಲಜನಕ ಎಷ್ಟೊಂದು ಕರಗಿ ತುಂಬಿರುವುದೆಂದರೆ, ರಕ್ತವರ್ಣ ಜನಕವೇ ಬೇಕಾಗಿರದು ಎನ್ನಬಹುದು. ರಕ್ತದಲ್ಲಿ ಅಮ್ಲಜನಕವನ್ನು ಮುಖ್ಯವಾಗಿ ಹೊತ್ತು ಸಾಗಿಸುವ ಕೆಂಪು ರಕ್ತಕಣಗಳೇ ಇಲ್ಲದೆ ಬದುಕುವುದು ಇದರಿಂದ ಸಾಧ್ಯವಾದಂತಾಯಿತು. ಶ್ವಾಸಕೋಶಗಳಿಂದ ತೆಗೆದುಕೊಂಡು ಅಂಗಾಂಶಗಳಿಗೆಲ್ಲ ಪ್ರಾಣವಾಯುವಾದ ಅಮ್ಲಜನಕವನ್ನು ಹಂಚುವ ಇದರ ಕೆಲಸವನ್ನು ಆಗ ರಕ್ತರಸವೇ ಮಾಡುತ್ತದೆ. ಪ್ರಯೋಗಾಲಯದಲ್ಲಿ ರಕ್ತವನ್ನೆಲ್ಲ ಪೂರ್ತಿ ತೆಗೆದುಹಾಕಿ, ನೇಕಡ ೦.೪ ರಷ್ಟು ಕನಿಷ್ಠ ಪ್ರಮಾಣದಲ್ಲಿ ರಕ್ತವರ್ಣ ಜನಕ ಉಳಿದಿರುವ ರಕ್ತರಸವನ್ನು ಕೊಟ್ಟು ಏರೊತ್ತಡದ ಆವರಣದಲ್ಲಿ ಇರಿಸಿದಾಗ, ಪ್ರಾಣಿಗಳು ಬಹಳ ಕಾಲ ಬದುಕಿದ್ದುವು. ಆದರೆ ಈ ಏರಿಸಿದ ಒತ್ತಡವನ್ನು ಮೊದಲಿದ್ದ ಮಟ್ಟಕ್ಕೆ ಇಳಿಸುವ ಮುಂಚೆ ಕೆಂಪು ರಕ್ತಕಣಗಳನ್ನು ಮತ್ತೆ ಒಳಗೆ ಸೇರಿಸಲೇಬೇಕು. ಇಲ್ಲದಿದ್ದರೆ ಪ್ರಾಣ ನಾಶ. ಹೀಗೆ ಮುಪ್ಪಟ್ಟು ಏರಿದೊತ್ತಡವಿದ್ದರೆ, ರಕ್ತರಸದಲ್ಲಿ ಕರಗಿರುವುದರಿಂದಲೇ ಮೈಗೆ ಬೇಕಾದ ಅಮ್ಲಜನಕವನ್ನೆಲ್ಲ ಒದಗಿಸಬಹುದು. ಶಸ್ತ್ರ ಚಿಕಿತ್ಸೆ, ವೈದ್ಯ ಚಿಕಿತ್ಸೆಗಳಲ್ಲಿನ ಇಂದಿನ ಹೆಚ್ಚಿನ ಬಳಕೆಗೆ ಕಾರಣವೂ ಇದೇ.

ಬೆಲ್ಜಿಯಮ್ಮಿನಲ್ಲಿ ಮೊಟ್ಟಮೊದಲು ನಾವಿಕರ ಹಡಗೂಡಿನಲ್ಲಿ ಪ್ರಯೋಗ ಮಾಡಿನೋಡಿ, ಆ ಮೇಲೆ (೧೯೬೪) ಆಮ್‌ಸ್ಟರ್ಡಾಂನಲ್ಲಿ ಒತ್ತಡವೇರಿಸುವ ದೊಡ್ಡ ಕೋಣೆಯನ್ನೇ ಕಟ್ಟಿದರು. ಆಸ್ಪತ್ರೆಗಳಲ್ಲಿನ ಶಸ್ತ್ರಕ್ರಿಯೆಯ ಕೊಟಡಿ (ಆಪರೇಷನ್ ರೂಂ)ಗಳಷ್ಟೇ ದೊಡ್ಡದಿದು. ಬೇಕಾಗಿರುವ ಎಲ್ಲ ಅನುಕೂಲ, ಸಲಕರಣೆಗಳೂ ಒಳಗಡೆಯೇ ಇದ್ದುವು. ಅಡ್ಡನಾಗಿರಿಸಿದ ಗುಂಡು ಸೀಸೆಯಾಕಾರದ ಈ ಬಾನೆ (ಟ್ಯಾಂಕ್)ಯಲ್ಲಿನ ಕೋಣೆಯೊಳಗಿನ ಎತ್ತರ ೧೫ ಅಡಿಗಳು ಮೀರಿತ್ತು. ಇದರೊಳಕ್ಕೆ ಹೋಗುವ ಕಿರಿಯ ದಾರಿಯ ಎತ್ತರ ೭-೧|೨ ಅಡಿಗಳಿತ್ತು. ಈ ಕೊನೆಯಿಂದ ಆ ಕೊನೆಗೆ ೪೨ಅಡಿಗಳಷ್ಟು ದೂರ. ಭದ್ರವಾಗಿ ಮುಚ್ಚಬಹುದಾದ ದಪ್ಪನಾದ ಗುಂಡು ಬಾಗಿಲುಗಳಿದ್ದುವು.

## ಇನ್ನಾವ ಬೇನೆಗಳಲ್ಲಿ ?

ಈಚಿನ ವರ್ಷಗಳಲ್ಲಂತೂ ಈ ಏರೊತ್ತಡದ ಅಮ್ಲಜನಕದ ಬಳಕೆಯಿಂದ ಇನ್ನೂ ಹಲವಾರು ಬಗೆಯ ಬೇನೆಗಳಲ್ಲೂ ಚೆನ್ನಾದ ಅನುಕೂಲ ಕಂಡಿದೆ. ನಿರ್ಗಾಳಿಜೀವಿಗಳಿಂದಾಗುವ ಸೋಂಕುಗಳ ಚಿಕಿತ್ಸೆಯಲ್ಲಿ ಇದರಿಂದ ಅದ್ಭುತ ಸಾಧನೆ ಕಂಡಿದೆ. ಬೆಳೆಯುವಾಗ ಅನಿಲವನ್ನು ಬಿಡುವ ದಂಡಾಣುಜೀವಿಗಳಿಂ (ಬೆಸಿಲ್ಲೈ) ದಾಗುವ ಇಂತಹದೊಂದು ರೋಗ ಅನಿಲದ ಅಳಿಕೊಳೆತ (ಗ್ಯಾಸ್ ಗ್ಯಾಂಗ್ರೀನ್). ಇದರ ಅಂಟುಸೋಂಕು ಹತ್ತಿರುವವರ ಕೈಯನ್ನೋ ಕಾಲನ್ನೋ ಕೂಡಲೇ ಕೊಯ್ದುಹಾಕದಿದ್ದರೆ ಹಿಂದಿನ ಕಾಲದಲ್ಲಿ ಸಾಮಾನ್ಯವಾಗಿ ಸಾಯುತ್ತಿದ್ದರು. ಆದರೆ ಈಗ ಏರೊತ್ತಡದ ಅಮ್ಲಜನಕದಲ್ಲಿ ಇರಿಸಿದ್ದರಿಂದ ಈ ರೋಗಿಗಳ ಪ್ರಾಣಗಳೂ ಉಳಿದುವು. ಕೈಕಾಲುಗಳನ್ನು ತೆಗೆಯುವುದೂ ತಪ್ಪಿತು. ಇದರ ರೋಗಾಣುಗಳು ಜೀವಿಷ (ಟಾಕ್ಸಿನ್)ಗಳನ್ನು ಹೊರಬಿಟ್ಟು ಕೊಳೆಯಿಸುವುದನ್ನು ಇದು ತಡೆಯುತ್ತದೆ.



ಏರೊತ್ತಡದ ಶಸ್ತ್ರಸಜ್ಜಿತ ಕೋಣೆ

ಈ ತೆರನ ಚಿಕಿತ್ಸೆಯಿಂದ ಆಮ್‌ಸ್ಟರ್ಡಾಂನಲ್ಲಿ ೪೬ ರೋಗಿಗಳು ಗುಣಪಡೆದರು. ಹುಟ್ಟನಿಂದಲೇ ಬಂದಿರುವ ಹಸುಗೂಸುಗಳ ಗುಂಡಿಗೆ ವಿಕಾರಗಳನ್ನು ಸರಿಪಡಿಸುವ ಶಸ್ತ್ರಚಿಕಿತ್ಸೆಯುಲ್ಲಿಯೇ ಏರೊತ್ತಡದ ಇಂದಿನ ಮಹತ್ತರ ಉಪಯೋಗವಿರುವುದು. ಇಂತಹ ಮಹಾ ಸಾಧನೆ ಈಗ ಆಮ್‌ಸ್ಟರ್ಡಾಂ, ಬಾಸ್ಟನ್, ಡರ್ಹಾಂಗಳಲ್ಲೂ ಆಗುತ್ತಿದೆ. ನಮ್ಮಲ್ಲಿ ಇನ್ನೂ ಬಂದಿಲ್ಲ. ರಕ್ತದ ಕೆಂಪು ಬಣ್ಣವೇ ಇರದೆ ನೀಲಿಗಟ್ಟಿರುವ, ಕಟ್ಟುಸಿರಿನಿಂದ ಬಳಲುತ್ತಿರುವ ಈ ಕೂಸುಗಳು ಇಂತಹ ಏರೊತ್ತಡದಲ್ಲಿರಿಸಿದರೆ ಆರಾಮವಾಗಿರುತ್ತವೆ

ಏರೊತ್ತಡದ ಆಮ್ಲಜನಕದ ಇನ್ನೊಂದು ಬಳಕೆ ಇಂಗಾಲ ಮೊನಾಕ್ಸೈಡ್ ವಿಷದೇರಿಕೆಯಲ್ಲಿದೆ. ಬಹುಕಾಲ ಗಾಳಿಯಾಡದಂತೆ ಮುಚ್ಚಿಟ್ಟಿರುವ ಹಳೆಯ ಭಾವಿಗಳು, ಕಾಳುಕಡಿಗಳನ್ನು ಕೂಡಿಡುವ ಹಳೇ ಕಣಜ, ಹಗೇವು ಗುಂಡಿಗಳು, ಕಿಟಕಿ ಬಾಗಿಲುಗಳನ್ನೆಲ್ಲ ಭದ್ರವಾಗಿ ಮುಚ್ಚಿಬಿಟ್ಟು ಒಳಗಡೆ ರಾತ್ರಿಯೆಲ್ಲ ಬೆಂಕಿ ಉರಿಯಲು ಬಿಟ್ಟಿರುವ ಕೋಣೆಗಳೇ ಮೊದಲಾದವಕ್ಕೆ ಯಾರಾದರೂ ಸರಕ್ಕನೆ ಒಳಹೊಕ್ಕರೆ ಆಗುವ ಆಕಸ್ಮಿಕ ಸಾವುಗಳಿಗೆ ಸಾಮಾನ್ಯವಾಗಿ ಈ ಅನಿಲದ ವಿಷವೇರುವದೇ ಕಾರಣ. ಸಾಮಾನ್ಯವಾಗಿ ಆಮ್ಲಜನಕಕ್ಕಿಂತಲೂ ಇಂಗಾಲ ಮೊನಾಕ್ಸೈಡೇ ರಕ್ತವರ್ಣಜನಕವನ್ನೂ ಗಟ್ಟಿಯಾಗಿ ಕಚ್ಚಿಕೊಂಡಿರುತ್ತದೆ. ಹೀಗಾದಾಗ ಮೈಯಲ್ಲಿ ಯಾವ ಅಂಗಾಂಶಕ್ಕೂ ಆಮ್ಲಜನಕ ಸಿಗದಂತಾಗಿ ರೋಗಿ ಕ್ಷಣಕಾಲದಲ್ಲಿ ಪ್ರಾಣಬಿಡುವನು. ಇಂತಹ ಸಂದರ್ಭದಲ್ಲಿ ರೋಗಿಯಿರುವ ವಾತಾವರಣದ ಒತ್ತಡವನ್ನು ಕೂಡಲೇ ಏರಿಸಿದರೆ, ರಕ್ತರಸದಲ್ಲಿ ಮತ್ತಷ್ಟು ಆಮ್ಲಜನಕ ಕರಗಿ ಸೇರಿಕೊಂಡು, ಇಂಗಾಲ ಮೊನಾಕ್ಸೈಡನ್ನು ಬೇಗನೆ ತೆಗೆದುಹಾಕಲು ಸಹಾಯವಾಗುವುದು.

ವಿಕಾರವಾಗಿರುವ ಅಂಗವನ್ನು ಸುರೂಪಗೊಳಿಸುವ (ಪ್ಲಾಸ್ಟಿಕ್) ಶಸ್ತ್ರಕ್ರಿಯೆ ಆದನಂತರ ಏರೊತ್ತಡದಲ್ಲಿ ಆಮ್ಲಜನಕವನ್ನಿತ್ತರೆ, ಸಾಕಷ್ಟು ರಕ್ತ ಹರಿಯದ ಚರ್ಮದ ಮಡಿಕೆ

ಗಳು ಸತ್ತು ನೀಲಿಗಟ್ಟುವುದು ತಪ್ಪುವುದು. ನ್ಯೆಯು ಇನ್ನೊಂದೆಡೆಯಿಂದ ತೆಗೆದು ಕಸಿಹಾಕಿದ ಚರ್ಮ ಆಗಲಾದರೂ ಬದುಕುಳಿಯುತ್ತದೆ. ಕೈಕಾಲುಗಳ ಮೂಳೆಗಳು ಮುರಿದಾಗ ರಕ್ತನಾಳಗಳು ಹಿಗ್ಗಿಯೋ, ರಕ್ತಸ್ರಾವ ತಗ್ಗಿಯೋ ಕೈಕಾಲು ಕೊಳೆತು ಕತ್ತರಿಸಬೇಕಾಗಿರುವುದನ್ನು ಕೂಡ ಈ ಏರೊತ್ತಡದ ಆಮ್ಲಜನಕ ನೀಡಿಕೆ ತಪ್ಪಿಸಿದೆ. ಉಳಿದಿರುವ ಸಣ್ಣಪುಟ್ಟ ರಕ್ತನಾಳಗಳ ಮೂಲಕವೇ ಬೇಕಾದಷ್ಟು ಆಮ್ಲಜನಕ ಒದಗಿ, ಹೊಸ ರಕ್ತನಾಳಗಳು ಬೆಳೆಯಲು ಅವಕಾಶವಾಗುವುದರಿಂದ ಕೈಕಾಲುಗಳೂ ಬದುಕುಳಿಯುತ್ತವೆ. ಇಲ್ಲಿ ಆಗುವ ಈ ಒಳ್ಳೆಯ ಪರಿಣಾಮಕ್ಕೆ ಆಮ್ಲಜನಕ ಮತ್ತೂ ಹೆಚ್ಚಾಗಿ ರಕ್ತದಲ್ಲಿ ಸೇರುವುದೇ ಕಾರಣವೆಂದು ಪ್ರಯೋಗದಲ್ಲಿ ಕೂಡ ತೋರಿಸಿಕೊಡಬಹುದು.

ಹೀಗೆಯೇ, ಸಾಮಾನ್ಯವಾಗಿ ಕಣ್ಣೊಳಗಿನ ರಕ್ತನಾಳಗಳಲ್ಲಿ ಕಿಟ್ಟ ಕಟ್ಟಿಕೊಂಡು ನೋಟವೇ ಮಂದವಾಗಿರುವ ವಯಸ್ಸಾದವರಲ್ಲಿ ಕೂಡ ಈ ಏರೊತ್ತಡದ ಆಮ್ಲಜನಕದಿಂದ ಕಣ್ಣೋಟ ತಿಳಿಯಾಗಿಸಬಹುದು. ಎಲ್ಲಕ್ಕಿಂತಲೂ ಮುಖ್ಯ ಎದೆಯ ಸೆರೆಬಿಗಿತ ಇಲ್ಲವೇ ವೇದನೆ (ಆ್ಯಂಜೈನ ಪೆಕ್ಟೋರಿಸ್)ಯಲ್ಲಿ ಕೂಡ ಇದರಿಂದ ಅನುಕೂಲವಾಗಿ, ಈ ಬೇನೆಯಿಂದ ಹಟಾತ್ತನೆ ಸಾಯುವವರನ್ನು ಈ ವಿಧಾನದಿಂದ ಉಳಿಸಿಕೊಳ್ಳಬಹುದೆಂದು ನಿರೀಕ್ಷಿಸುವುದೂ ಸಹಜವೇ. ಆದರೆ ನಿಜ ಹೀಗಿಲ್ಲ. ಗುಂಡಿಗೆಗೆ ಬರುವ ರಕ್ತದಲ್ಲಿರುವ ಆಮ್ಲಜನಕದ ಮಟ್ಟವೇ ಗುಂಡಿಗೆಯಲ್ಲಿ ಹರಿಯುವ ರಕ್ತದ ಪ್ರಮಾಣವನ್ನೂ ಸಾಮಾನ್ಯವಾಗಿ ಗುಂಡಿಗೆ ಬಡಿದುಕೊಳ್ಳುವುದರ ವೇಗವನ್ನು ಹೆಚ್ಚು ಕಡಮೆ ಮಾಡುವ ಮೂಲಕ ನಿರ್ಧರಿಸುತ್ತದೆ. ಗುಂಡಿಗೆಗೇ ವಾಪಸು ಬರುವ ಕಟ್ಟ ರಕ್ತದಲ್ಲಿರುವ ಈ ಆಮ್ಲಜನಕದ ಮಟ್ಟ ಹೆಚ್ಚಿದರೆ, ಗುಂಡಿಗೆ ಬಡಿತವೇ ನಿಧಾನ ಆಗುತ್ತದೆ ಇದರಿಂದಲೇ, ಗುಂಡಿಗೆಗೆ ಏನೇನೂ ಅನುಕೂಲ ಕಾಣದು.

## ಕೆಡುಕಿಲ್ಲದಿಲ್ಲ

ಕೊನೆಯದಾಗಿ, ಈ ವಿಧಾನದಲ್ಲಿ ಇಷ್ಟೆಲ್ಲ ಒಳ್ಳೆಯ ಗುಣಗಳಿರುವುದಾದರೂ, ಈ ಏರೊತ್ತಡದ ಆಮ್ಲಜನಕದಿಂದ ರೋಗಿಗೂ ಅವರ ಬಂದಿಗರಿಗೂ ಎಲ್ಲವೂ ಯಾವಾಗಲೂ ಅನುಕೂಲವೇ ಆಗುವುದೆನ್ನುವಂತಿಲ್ಲ. ಕೆಡುಕುಗಳೂ ಕಂಡುಬಂದಿವೆ. ಮೂಳೆಗೆ ಸಾಕಾದಷ್ಟು ರಕ್ತ ಸಾಗದೆ ಕೊಳೆತುಹೋಗುವುದಂತೂ ಸಾಮಾನ್ಯ. ಶ್ವಾಸಕೋಶಗಳ ಅತಿ ಕಿರಿಯ ಗಾಳಿಗೂಡು (ಆಲ್ವಿಯೋಲೈಸ್)ಗಳು ಗಡುಸಾಗುತ್ತವೆ. ಹಲವಾರು ನರಗಳಿಗೂ ಅಪಾಯವಿದೆ. ಸೊಕ್ಕ (ಷಾಕ್) ಯಾದಾಗ ನ್ಯೆಯ ಪ್ರತಿಕ್ರಿಯೆ (ರಿಯಾಕ್ಷನ್)ಯನ್ನು ಪೂರ್ತಿಯಾಗಿ ಅಣಗಿಸವಂತಹ ಒಳಸುರಿವ ಸ್ರಾವಗಳು ಕುಗ್ಗುವುದೂ ಉಂಟು. ಇದರಿಂದ ನ್ಯೆ ಉಳಿವಿಗೇ ಪೆಟ್ಟು ಬಿದ್ದಂತೆ. ರಕ್ತದ ಮೇಲೂ ನೇರಬಾದ ಕೆಡುಕಿನ ಪರಿಣಾಮಗಳೂ ಕೆಲವಿವೆ.

ಸರಿಯಾದ ತಿಳಿವಳಿಕೆ, ಅನುಭವ, ಮುನ್ನೆಚ್ಚರ ಇಲ್ಲದೆ, ಈ ವಿಧಾನದ ಚಿಕಿತ್ಸೆಯನ್ನು ಬಳಸಿದರೆ ಅನಾಹುತಗಳಾಗುತ್ತವೆ ಎಂದಾಯಿತು. ಈ ಚಿಕಿತ್ಸೆ ಮಾಡುವ ಕೇಂದ್ರಗಳಲ್ಲೆಲ್ಲ ಬೇಕಾದರೆ ಮತ್ತೆ ಕೂಡಲೇ ಒತ್ತಡವೇರಿಸುವ ಯಂತ್ರಗಳನ್ನು ಸಿದ್ಧವಾಗಿರಿಸಿಕೊಂಡು ಇರಬೇಕಾಗುತ್ತದೆ. ಹೀಗೆ ಮಾಡದಿದ್ದಲ್ಲಿ ಸಾಮಾನ್ಯ ವಾತಾವರಣಕ್ಕೆ ಹೊರಬಂದಾಗ ಆಮ್ಲಜನಕದ ನಿಜವಾದ ಕೊರೆಯಾಗಿ ಅನಾಹುತವಾಗಬಹುದು. ಅಲ್ಲದೆ ಏರೊತ್ತಡದಿಂದ ಸಾಮಾನ್ಯ ಒತ್ತಡಕ್ಕೆ ಇಳಿಸುವುದನ್ನೂ ನಿಧಾನವಾಗಿಯೇ ಮಾಡಬೇಕಾಗುತ್ತದೆ. ಇಷ್ಟಾದರೂ ಈ ದಿಸೆಯಲ್ಲಿ ಪರಿಶೋಧನೆಗಳು ಬೇಕಾದಷ್ಟು ಇನ್ನೂ ನಡೆಯುತ್ತಲೇ ಇವೆ. ಆತೂ ಇನ್ನೂ ಯಾವ ಯಾವ ಮಹಾರೋಗಗಳು ಈ ಚಿಕಿತ್ಸೆಗೆ ಬಾಗುವುವೋ ಈಗಲೇ ಹೇಳಬರುವಂತಿಲ್ಲ. *

# ನಿಮ್ಮ ಶಬ್ದ ಭಂಡಾರ ಬೆಳೆಯಲಿ

## ಶಬ್ದ ಭಂಡಾರವು ಹಣದ ಭಂಡಾರಕ್ಕಿಂತಲೂ ಅಮೂಲ್ಯವಾಗಿದೆ

**ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾಗಿ ಅರ್ಥಗಳನ್ನು ವಿವರಿಸಿದೆ.**

೧. **ಪ್ರತಿಪತ್ತಿ**
(ಅ) ಎದುರಾಳಿ (ಆ) ಕಾಲಾಳು (ಇ) ಒಂದೊಂದಾಗಿ ಎಣಿಸುವುದು (ಈ) ಹೊಂದುವಿಕೆ.

೨. **ಉಪಪತ್ತಿ**
(ಅ) ಸಕಾರಣವಾಗಿ ಸಿದ್ಧಪಡಿಸುವಿಕೆ (ಆ) ಇಟ್ಟುಕೊಂಡವಳು (ಇ) ಸಂಶಯ (ಈ) ಊಹೆ.

೩. **ಅತಿವ್ಯಾಪ್ತಿ**
(ಅ) ಬಹಳ ಕೆಲಸ (ಆ) ನಿಯಮವನ್ನು ಮಿತಿ ಮೀರಿ ಪ್ರಯೋಗಿಸುವುದು (ಇ) ಎಣಿಸದ ಲಾಭ (ಈ) ಅಧಿಕಪ್ರಸಂಗ.

೪. **ಸಮಾಪ್ತಿ**
(ಅ) ಸಂಪಾದನೆ (ಆ) ಓಡಿಹೋಗುವುದು (ಇ) ಮುಗಿಸುವಿಕೆ (ಈ) ದಾಟುವುದು.

೫. **ಪ್ರತ್ಯುಕ್ತಿ**
(ಅ) ಮುಂಜಾನೆ (ಆ) ಎದುರುತ್ತರ (ಇ) ಜಗಳ (ಈ) ಭಕ್ತಿ.

೬. **ಅಭಿವ್ಯಕ್ತಿ**
(ಅ) ಬಡಪಾಯಿ (ಆ) ಶತ್ರು (ಇ) ಸೇರಿಸಿಕೊಳ್ಳುವಿಕೆ (ಈ) ತೋರ್ಪಡಿಸುವಿಕೆ.

೭. **ಪೂರ್ವವರ್ತಿ**
(ಅ) ಮೊದಲು ಇದ್ದುದ್ದು (ಆ) ಹಳೇ ಸಂಪ್ರದಾಯ (ಇ) ಮೂಡಲು ದಿಕ್ಕಿನದು (ಈ) ತಿರುಗಿಸುವಿಕೆ.

೮. **ಜನಯಿತ್ರಿ**
(ಅ) ಮಗಳು (ಆ) ಉಂಟುಮಾಡಿದವಳು (ಇ) ಪ್ರಜೆಗಳನ್ನು ಕೊಲ್ಲುವವ (ಈ) ತಿಳಿವಳಿಕೆ.

೯. **ಅಧಿಷ್ಠಾತ್ರಿ**
(ಅ) ಅಭ್ಯಾಸ ಮಾಡುವವಳು (ಆ) ಮೊಲೆಯೂಡಿಸುವವಳು (ಇ) ಆಳುವವಳು (ಈ) ಧರ್ಮಾಚರಣೆ.

೧೦. **ಕೈಂಕರ್ಯ**
(ಅ) ಕೈಬಳೆ (ಆ) ಬುದ್ಧಿಭ್ರಮಣೆ (ಇ) ಅಹಂಕಾರ (ಈ) ಸೇವೆ.

೧೧. **ಪ್ರಾಚುರ್ಯ**
(ಅ) ಹಬ್ಬುವಿಕೆ (ಆ) ಮಹತ್ವ (ಇ) ಕಾಣಿಸಿಕೊಳ್ಳುವಿಕೆ (ಈ) ಬೈಗಳು.

೧೨. **ಪರವರ್ತಿ**
(ಅ) ವಿರೋಧಿ (ಆ) ಅನಂತರ ಇದ್ದುದು (ಇ) ಹಿಮ್ಮೊಗ (ಈ) ಬೇಡವೆನ್ನುವಿಕೆ.

೧. **ಪ್ರತಿಪತ್ತಿ** (ಈ) ಹೊಂದುವುದು, ಸೇರುವುದು, ಪಡೆಯುವುದು ; ಅರಿವು, ತಿಳಿವಳಿಕೆ ಗೌರವಿಸುವುದು. ಉದಾ :– ಪರಮಾತ್ಮನ ಪ್ರತಿಪತ್ತಿಗಾಗಿ ದುಡಿಯುತ್ತಾನೆ. [ಸಂ.]

೨. **ಉಪಪತ್ತಿ** (ಅ) ಸಕಾರಣವಾಗಿ ಸಿದ್ಧಗೊಳಿಸುವಿಕೆ ; ಸಿದ್ಧಾಂತ ; ಖಚಿತಗೊಳಿಸುವಿಕೆ ; ಉತ್ಪಾದಿಸುವಿಕೆ. ಉದಾ :– ನಿನ್ನ ವಾದ ಉಪಪತ್ತಿರಹಿತವಾದದ್ದು [ಸಂ.]

೩. **ಅತಿವ್ಯಾಪ್ತಿ** (ಅ) ನಿಯಮವನ್ನು ಮಿತಿಮೀರಿ ಎಳೆದು ಪ್ರಯೋಗಿಸುವುದು, ಇಲ್ಲದ ಅರ್ಥವನ್ನು ಎಳೆದು ಹಚ್ಚುವುದು. ಉದಾ– ಈ ಅಧಿಕಾರಿ ತನ್ನ ಕರ್ತವ್ಯದಲ್ಲಿ ಅತಿವ್ಯಾಪ್ತಿ ಮಾಡಿದ್ದಾನೆ. [ಸಂ ]

೪. **ಸಮಾಪ್ತಿ** (ಇ) ಮುಗಿಯುವಿಕೆ, ಕೊನೆಗೊಳ್ಳುವಿಕೆ, ಮುಕ್ತಾಯ. ಉದಾ :– ಬರವಣಿಗೆ ಸಮಾಪ್ತಿಯಾಯಿತು. [ಸಂ.]

೫. **ಪ್ರತ್ಯುಕ್ತಿ** (ಅ) ಎದುರುತ್ತರ, ಉತ್ತರಕ್ಕೆ ಪ್ರತಿ ಮಾತು. ಉದಾ : ಅವನ ಪ್ರತ್ಯುಕ್ತಿಯನ್ನು ಕೇಳಿ ಅಸಮಾಧಾನವಾಯಿತು. [ಸಂ.]

೬. **ಅಭಿವ್ಯಕ್ತಿ** (ಈ) ತೋರ್ಪಡಿಸಿಕೊಳ್ಳುವುದು, ಮನಸ್ಸಿನಲ್ಲಿದ್ದದ್ದನ್ನು ಹೊರಗೆ ತೋರಿಸುವುದು. ಉದಾ :– ಮಾತಿನಲ್ಲಿ ಅಭಿವ್ಯಕ್ತಿ ಶಕ್ತಿ ಸಾಲದು ಅಂದರೆ ಮನಸ್ಸಿನಲ್ಲಿದ್ದುದನ್ನು ಸರಿಯಾಗಿ ತಿಳಿಯಪಡಿಸಲಾರ. [ಸಂ.]

೭. **ಪೂರ್ವವರ್ತಿ** (ಅ) ಮೊದಲು ಇದ್ದದ್ದು, ಮುಂಚೆಯೇ ಒದಗಿದ್ದು ಉದಾ :– ನಮ್ಮ ಅನೇಕ ಸಮಸ್ಯೆಗಳು ಸ್ವಾತಂತ್ರ್ಯದ ಪೂರ್ವವರ್ತಿಯಾದವು. [ಸಂ.]

೮. **ಜನಯಿತ್ರಿ** (ಅ) ಉಂಟುಮಾಡಿದವಳು, ಹುಟ್ಟಿಸಿದವಳು. ಉದಾ :– ಸಕಲ ಲೋಕಗಳ ಜನಯಿತ್ರಿ ದುರ್ಗೆ. [ಸಂ.]

೯. **ಅಧಿಷ್ಠಾತ್ರಿ** (ಇ) ಆಳುವವಳು, ಮೇಲ್ವಿಚಾರಣೆ ಮಾಡುವವಳು, ಕಾಪಾಡುವವಳು. ಉದಾ :– ಈ ಗುಡಿಗೆ ಲಕ್ಷ್ಮಿಯೇ ಅಧಿಷ್ಠಾತ್ರಿ ; ನಮ್ಮ ಮನೆಗೆ ನಮ್ಮ ತಾಯಿಯೇ ಅಧಿಷ್ಠಾತ್ರಿ. [ಸಂ.]

೧೦. **ಕೈಂಕರ್ಯ** (ಈ) ಸೇವೆ, ಸೇವಕತನ, ಸೇವಾಜೀವನ. ಉದಾ :– ಗಾಂಧೀಜಿಯ ಕೈಂಕರ್ಯದಲ್ಲೇ ಮಹಾದೇವಭಾಯಿಯವರು ಜೀವನ ಸವೆದರು. [ಸಂ.]

೧೧. **ಪ್ರಾಚುರ್ಯ** (ಅ) ಹಬ್ಬುವಿಕೆ, ಹರಡುವಿಕೆ. ಉದಾ :– ಹಿಂದೆ ಸೂರ್ಯನೇ ಭೂಮಿಯನ್ನು ಬಳಸುತ್ತಾನೆಂಬ ಅಭಿಪ್ರಾಯದ ಪ್ರಾಚುರ್ಯವಿತ್ತು. [ಸಂ.]

೧೨. **ಪರವರ್ತಿ** (ಅ) ಅನಂತರ ಇದ್ದದ್ದು, ಹಿಂದೆ ಇರುವುದು. ಉದಾ :– ಪರವರ್ತಿಯಾದ ತೊಂದರೆಗಳನ್ನರಿಯದೆ ಈ ಜವಾಬ್ದಾರಿ ಹೊತ್ತೆ. ]ಸಂ.]

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ

| | | |
|---|---|---|
| ೬—೮ | ಸರಿಯಿದ್ದರೆ | ಸಾಧಾರಣ |
| ೯—೧೦ | ,, | ಉತ್ತಮ |
| ೧೧—೧೨ | ,, | ಅತ್ಯುತ್ತಮ |

# ವಿಜ್ಞಾನಿಗಳ ಶೋಧನ
## ನೋವು ನಿವಾರಿಸುವ ಶೀಘ್ರ ಮಾರ್ಗ

ಹೊಸ

# ಮೈಕ್ರೋಫೈನ್ 'ಆಸ್ಪ್ರೋ'

ಭಾರತದಲ್ಲಿ ಇದೀಗ ಮೊದಲನೆಯದಾಗಿ ದೊರೆಯುವುದು

**ನೋವು ನಮ್ಮ ಸಮಸ್ಯೆ:** ನೋವಿನ ಸಮಸ್ಯೆ ಬಗೆಹರಿಸುವ ವಿಷಯದಲ್ಲಿ 'ಆಸ್ಪ್ರೋ' ಸಂಶೋಧನಾ ಸಂಸ್ಥೆಯ ವೈಜ್ಞಾನಿಕರು ಶೋಧನೆ ನಡೆಸಿ ಈಗ ಹೊಸ ಮೈಕ್ರೋಫೈನ್ 'ಆಸ್ಪ್ರೋ' ನೋವು ನಿವಾರಣೆಯ ಶೀಘ್ರ ಮಾರ್ಗವನ್ನು ಕಂಡುಹಿಡಿದಿರುವರು.

**ಮೈಕ್ರೋಫೈನ್ ಅಂದರೆ ಏನು:** ಮೈಕ್ರೋಫೈನ್ ಅಂದರೆ 'ಆಸ್ಪ್ರೋ'ದಲ್ಲಿರುವ ನೋವು-ನಿವಾರಕ ಘಟಕವನ್ನು ಒಂದು ಹೊಸ ಹಾಗೂ ವಿಶೇಷ ಸೂತ್ರದಿಂದ 30 ಪಟ್ಟು ಹೆಚ್ಚು ಸೂಕ್ಷ್ಮಾಣುಗಳನ್ನಾಗಿ ಮಾಡಲಾಗಿದೆ ಎಂದರ್ಥ. ಪ್ರತಿಯೊಂದು ಮಾತ್ರೆಯಲ್ಲಿಯೂ ಈಗ ಸುಮಾರು 15 ಕೋಟಿ ಮೈಕ್ರೋಸ್ಕೋಪಿಕ್ ಅಣುಗಳು ಸೇರಿರುತ್ತವೆ. ಅಂದರೆ ಇದರ ಪರಿಣಾಮವಾಗಿ ಇಮ್ಮಡಿ ಪ್ರಮಾಣದಲ್ಲಿ ನೋವು ನಿವಾರಿಸುವ ಶಕ್ತಿಯು ಮೂರು ಪಟ್ಟು ಶೀಘ್ರವಾಗಿ ನೋವು ನಿವಾರಿಸಲು ಮುಂದಾಗುತ್ತದೆ.

**ಶೀಘ್ರ ಪರಿಣಾಮ—ದೀರ್ಘಕಾಲ ಉಳಿಯುವುದು:** ತಕ್ಷಣ ನೋವು-ನಿವಾರಿಸುವ ಹೊಸ ಮೈಕ್ರೋಫೈನ್ 'ಆಸ್ಪ್ರೋ'ವಿನ ಘಟಕವು ಸುಸೂತ್ರವಾಗಿ ಹಾಗೂ ಕೂಡಲೇ ಹೀರಲ್ಪಟ್ಟು 5 ರಿಂದ 7 ತಾಸುಗಳಷ್ಟು ಸಮಯ ಕ್ರಿಯಾನಿರತವಾಗಿರುವುದು. ಇದೇ ಕಾರಣದಿಂದಾಗಿ ಮೈಕ್ರೋಫೈನ್ 'ಆಸ್ಪ್ರೋ' ನೋವನ್ನು ತಕ್ಷಣ ನಿವಾರಿಸಿ ಹೆಚ್ಚು ಸಮಯದವರೆಗೆ ಕಾರ್ಯನಿರತವಾಗಿರುವುದು.

**ತೆಗೆದುಕೊಳ್ಳಲು ಸುಲಭವಾಗಿದೆ:** ಹೊಸ ಮೈಕ್ರೋಫೈನ್ 'ಆಸ್ಪ್ರೋ'ವನ್ನು ನಿಮಗನುಕೂಲವಾದ ಯಾವ [illegible] ತೆಗೆದುಕೊಳ್ಳಬಹುದು—ಇದ್ದಕ್ಕಿದ್ದ ಹಾಗೆ, ನೀರಿನಲ್ಲಿ [illegible] ಅಥವಾ ಒಂದು ಗ್ಲಾಸು ನೀರು ಅಥವಾ ಬಿಸಿ ಪಾನೀಯದೊಂದಿಗೆ.

ಹೊಸ ಮೈಕ್ರೋಫೈನ್ 'ಆಸ್ಪ್ರೋ' ಪರಿಣಾಮದ ವಿವರ

ನಿವಾರಣೆ

ಮಾತ್ರೆಯ ಘಟಕದ ಪ್ರಮಾಣವು ದೊಡ್ಡದಾದ ಪಕ್ಷಕ್ಕೆ ಹೀರುವಿಕೆಯ ತೀವ್ರತೆಯು ಕಡಿಮೆ—ಅಂದರೆ ನೋವು ನಿವಾರಣೆಗೆ ನೀವು ಹೆಚ್ಚು ಸಮಯ ಕಾಯಬೇಕಾಗುವುದು.

ನಿವಾರಣೆ

ಆದನ್ನು [illegible] ಯೊಂದು ಹೊಸ ಮೈಕ್ರೋಫೈನ್ 'ಆಸ್ಪ್ರೋ' ಮಾತ್ರೆಯಲ್ಲಿ 15 ಕೋಟಿ ಮೈಕ್ರೋಸ್ಕೋಪಿಕ್ ಅಣುಗಳು ಕೂಡಿಕೊಂಡಿವೆ—ಆದ್ದರಿಂದ ಕೂಡಲೇ ಹೀರಲ್ಪಟ್ಟು ಶೀಘ್ರವಾಗಿ ನೋವು ನಿವಾರಣೆಯಾಗುವುದು.

---

**ಇವುಗಳಿಗೆ ಹೊಸ ಮೈಕ್ರೋಫೈನ್ 'ಆಸ್ಪ್ರೋ' ತೆಗೆದುಕೊಳ್ಳಿರಿ:** ನೋವು · ತಲೆಸಿಡಿತ · ಮೈನೋವು · ಹಲ್ಲುನೋವು · ಸಂದುನೋವು · ಶೀತಜ್ವರ · ಫ್ಲೂ · ಚಳಿಜ್ವರ · ಗಂಟಲುನೋವು

**ಪ್ರಮಾಣ:** ದೊಡ್ಡವರಿಗೆ: 2 ಮಾತ್ರೆಗಳು. ಅವಶ್ಯವೆನಿಸಿದರೆ ಪುನಃ ತೆಗೆದುಕೊಳ್ಳುವುದು. ಮಕ್ಕಳಿಗೆ 1 ಮಾತ್ರೆ ಅಥವಾ ನಿಮ್ಮ ಡಾಕ್ಟರರ ಸಲಹೆಯಂತೆ!

ಹೊಸ ಮೈಕ್ರೋಫೈನ್ 'ಆಸ್ಪ್ರೋ' ಇಂದೀಗ ಸಿಗುವ ನೋವು ನಿವಾರಕ ಔಷಧಗಳಲ್ಲಿ ಅತ್ಯಾಧುನಿಕವಾದುದು.

NEW

ASPRO

ನಿಕೋಲಸ್ ತಯಾರಿಕೆ

ಮೂರರಲ್ಲಿ ಕಣ್ಣು ಕಳೆದುಕೊಂಡು
ಕುರುಡರಿಗಾಗಿ ಲಿಪಿ ನಿರ್ಮಿಸಿದ

# ಲುಯಿ ಬ್ರೇಲ್: ಕುರುಡರಿಗೆ ಬೆಳಕು ನೀಡಿದ

A B C D E F G H
K L M N O P Q R
U V X Y Z and for of
ch gh sh th wh ed er ou

ಬ್ರೇಲ್ ಅಕ್ಷರಮಾಲೆ

ಚಮಗಾರ ತನ್ನ ಮೂರು ವರ್ಷದ ಮಗನನ್ನು ಅತಿ ಪ್ರೀತಿಯಿಂದ ಕಾಣುತ್ತಿದ್ದ. ವಯಸ್ಸಿಗೆ ಮೀರಿದ ಬುದ್ಧಿ ಅವನಲ್ಲಿದ್ದುದರಿಂದ ಆತ ತನ್ನಂತೆ ಚರ್ಮ ಹೊಲಿಯುವವನಾಗದೆ ಪ್ರೊಫೆಸರನೋ ಪಾದ್ರಿಯೋ ಆಗುವನೆಂದಾತ ಊಹಿಸಿಕೊಂಡು ಹೆಮ್ಮೆಪಡುತ್ತಿದ್ದ. ಆದರೆ ಒಂದು ದಿನ ಈ ಎಲ್ಲ ಆಶೋತ್ತರಗಳು ಮಣ್ಣಾಗಿ ಹೋದವು. ಅವನ ಕರ್ಮಶಾಲೆಯಲ್ಲಿ ಆಡುತ್ತಿದ್ದ ಮಗು ಅವನು ಕೊಯ್ದು ಬಿಸಾಕಿದ್ದ ಒಂದು ಚರ್ಮದ ತುಣುಕನ್ನು ಆರಿಸಿಕೊಂಡು, "ಅಪ್ಪಾ, ನೋಡು, ಇದು ನಿನ್ನ ಮುಖದಂತೆಯೇ ಇದೆ. ಕೂದಲು ಮಾತ್ರ ಇಲ್ಲ!" ಎಂದಿತು. ತಂದೆ ಮುಖವೆತ್ತಿ ನಸುನಕ್ಕು ಮತ್ತೆ ತನ್ನ ಕೆಲಸದಲ್ಲಿ ಮಗ್ನನಾದ. ಮಗು ಚೀರಿದ್ದನ್ನು ಕೇಳಿ ಹೌಹಾರಿ ನೋಡುತ್ತಾನೆ, ಮಗುವಿನ ಕಣ್ಣಿಂದ ನೆತ್ತರು ಸುರಿಯುತ್ತಿದೆ. ಅಪ್ಪನ ಮುಖದ ಹಾಗೆ ಚರ್ಮದಲ್ಲೂ ಗಡ್ಡ ಮೀಸೆಯ ಗುರುತು ಮಾಡುತ್ತೇನೆಂದು ದಬ್ಬಣದಿಂದ ಕೆರೆಯಹೋಗಿ ಮಗು ಕಣ್ಣು ಚುಚ್ಚಿಕೊಂಡಿತ್ತು. ಒಡನೆ ಮಗುವನ್ನು ಆಸ್ಪತ್ರೆಗೆ ಸಾಗಿಸಿದ್ದಾಯಿತು. ಪ್ರಯೋಜನವಾಗಲಿಲ್ಲ. ದಬ್ಬಣ ಚುಚ್ಚಿದ್ದು ಎಡಗಣ್ಣಿಗೆ ಮಾತ್ರವಾದರೂ ಆಘಾತ ಇನ್ನೊಂದಕ್ಕೂ ಹರಡಿ ಎರಡೂ ಕಣ್ಣು ಕಳೆದುಕೊಂಡ ಮಗುವನ್ನು ಮನೆಗೆ ತರಬೇಕಾಯಿತು.

ಮಗನಲ್ಲಿಟ್ಟ ಭರವಸೆಯೆಲ್ಲ ನೀರಲ್ಲಿ ಬರೆದ ಅಕ್ಷರದಂತಾದ ಮೇಲೆ ತಂದೆ ಲುಯಿ ಬ್ರೇಲನಿಗೆ ಕುರುಡ ಮಗ ಭಿಕ್ಷಾಪಾತ್ರೆ ಹಿಡಿಯುವುದನ್ನು ತಪ್ಪಿಸುವುದಕ್ಕಾಗಿ ಹಣ ಕೂಡಿ ಹಾಕುವುದೊಂದೇ ಜೀವನ ಧ್ಯೇಯವಾಯಿತು. ಗಂಡ ಹೆಂಡಿರ ಜೀವನದಲ್ಲಿ ಶಾಶ್ವತವಾದ ಮುಚ್ಚಂಜೆ ಕವಿಯಿತು

ಆದರೆ ಮಗ ತನ್ನನ್ನು ಬಂಧಿಸಿದ ವಿಧಿಯನ್ನು ಮುರಿದು ಸ್ವತಂತ್ರನಾಗಬಯಸುತ್ತಿದ್ದ. ತಾನು ಶಾಲೆಗೆ ಹೋಗುವುದಾಗಿ ಆತ ಪಟ್ಟುಹಿಡಿದ. ಆ ಹತ್ತೊಂಬತ್ತನೇ ಶತಮಾನದಲ್ಲಿ ಕುರುಡರನ್ನು ತೆಗೆದುಕೊಳ್ಳುವ ಶಾಲೆ ಎಲ್ಲಿತ್ತು? ತಂದೆ ಅದರ ಆಶೆ ಬಿಡು ಎಂದರೆ ಮಗ, "ಇಲ್ಲ, ನಾನು ಕೇಳಿದ್ದೇನೆ, ಪ್ಯಾರೀಸ್ ಪಟ್ಟಣದಲ್ಲಿ ಕುರುಡರ ಶಾಲೆ ಇದೆಯಂತೆ, ನಾನು ಅಲ್ಲಿ ಸೇರುತ್ತೇನೆ" ಎಂದ.

ಹೀಗೆ ಪ್ರಾರಂಭವಾಯಿತು ಕುರುಡರ ಬೆರ

"ಮಿರರ್" ಆಧಾರದಿಂದ

ಳುಗಳಿಗೆ ಕಣ್ಣುಕೊಟ್ಟ ಬ್ರೇಲ್ ಲಿಪಿಯ ಜನ್ಮದಾತನಾದ ಲೂಯಿ ಬ್ರೇಲನ (ಅವನ ತಂದೆಯ ಹೆಸರೂ ಅದೇ) ಬೆಳಕಿನ ಅನ್ವೇಷಣೆ. ಆತ ಪ್ಯಾರೀಸಿನಿಂದ ಸ್ವಲ್ಪ ದೂರದಲ್ಲಿದ್ದ ಕೂಪ್ರೆ ಎಂಬಲ್ಲಿ ೧೮೦೯ ರಲ್ಲಿ ಹುಟ್ಟಿದ. ೪೩ ವರ್ಷಗಳ ಜೀವಮಾನವನ್ನು ಅವನು ತನ್ನಂಥ ಕುರುಡರಿಗೆ ಜ್ಞಾನದೀಪವನ್ನು ಲಭ್ಯವಾಗಿ ಮಾಡುವುದಕ್ಕಾಗಿಯೇ ಸವೆದ.

ಆಗ ವೆಲಂಟೇನ್ ಹುವೇ ಎಂಬಾತ ಕುರುಡರಿಗಾಗಿ ಪ್ಯಾರೀಸಿನಲ್ಲೊಂದು ಶಾಲೆ ನಡೆಸುತ್ತಿದ್ದ. ಕುರುಡರ ಸಂಕಷ್ಟಗಳನ್ನು ಕಂಡು ಮರುಗಿ ತನ್ನ ಸಂಪತ್ತನ್ನೆಲ್ಲ ಅವರ ಹಿತಕ್ಕಾಗಿ ಧಾರೆಯೆರೆಯಲು ನಿರ್ಧರಿಸಿದ ಹುವೇಗೆ ಹೆಚ್ಚಿನ ಪ್ರೋತ್ಸಾಹವಿರಲಿಲ್ಲ. ಆತ ಕುರುಡರಿಗೆ ಸ್ಪರ್ಶಮೂಲಕ ಅಕ್ಷರ ಕಲಿಸಲು ಕಡ್ಡಿಗಳನ್ನು ಅಕ್ಷರಗಳಾಗಿ ಜೋಡಿಸಿ ಅವುಗಳನ್ನು ಹಲಿಗೆಗಳಿಗೆ ಬಡಿದು ವಿದ್ಯಾರ್ಥಿಗಳಿಗೆ ಅವುಗಳ ಮೇಲೆ ಬೆರಳಾಡಿಸಲು ಹೇಳುತ್ತಿದ್ದ. ಟೀಕಾಕಾರರು ಅವನ ಯತ್ನಗಳನ್ನು ಕಂಡು ಗೇಲಿ ಮಾಡುತ್ತಿದ್ದರು. ಅವನಿಗೆ ದೊರೆತ ಶಿಷ್ಯರು ಹನ್ನೆರಡೇ ಜನ!

ಹುವೇ ಆಮೇಲೆ ಈ ಅವಾಥವ್ಯವಾದ ಕಡ್ಡಿ ವಿಧಾನವನ್ನು ಬಿಟ್ಟು ದೊಡ್ಡ ದೊಡ್ಡ ಅಕ್ಷರಗಳ ಅಚ್ಚುಗಳನ್ನು ಲೋಹದಿಂದ ಮಾಡಿಸಿ ಅವುಗಳನ್ನು ಕಾಗದದ ಮೇಲೆ ಬಲವಾಗಿ ಒತ್ತಿ ಕಾಗದದ ಮೇಲೆ ಅಕ್ಷರಗಳು ಉಬ್ಬಿ ನಿಲ್ಲುವಂತೆ ಮಾಡಿದ. ಕಾಗದದ ಮೇಲೆ ಕೈಯಾಡಿಸಿ ವಿದ್ಯಾರ್ಥಿಗಳು ಓದಬಹುದಾಗಿತ್ತು. ಅತಿ ವೆಚ್ಚದಿಂದ ಹುವೇ ಇಂಥ ಮೂರು ಪುಸ್ತಕಗಳನ್ನೇ 'ಮುದ್ರಿಸಿ' ಅಣಿಗೊಳಿಸಿದ್ದ.

ಜನರ ಟೀಕೆಗಳಿಗೆ ಸೊಪ್ಪುಹಾಕದೆ ಏಕನಿಷ್ಠೆಯಿಂದ ಕೆಲಸ ಮಾಡುತ್ತಿದ್ದ ಈ ಮನುಷ್ಯನ ಶಿಷ್ಯರ ಬಳಗದಲ್ಲಿ ಸೇರಿ ಲೂಯಿ ಬ್ರೇಲ್ ಸಮಾಧಾನಪಟ್ಟ. ಆದರೆ ತನ್ನಂಥ ಅದೃಷ್ಟಹೀನರು ಕಣ್ಣಿದ್ದವರ ಪ್ರಪಂಚದಲ್ಲಿ ಎಷ್ಟು ಅಸಹಾಯರಾಗಿದ್ದೇವೆಂಬ ಪ್ರತೀತಿ ಶಾಲೆಯ ಹೊರಗಿನ ಜಗತ್ತಿನಲ್ಲಿ ಪ್ರವೇಶಿಸಿದಾಗೆಲ್ಲ ಅವನಿಗೆ ಆಗುತ್ತಿತ್ತು. ಒಮ್ಮೆ ಬೀದಿಯ ಪುಂಡ ಹುಡುಗರು ಅವನನ್ನೂ ಅವನ ಸಂಗಡಿಗರನ್ನೂ ಸುಮ್ಮಸುಮ್ಮನೆ ಕಳ್ಳರೆಂದು ಆರೋಪಿಸಿ ಥಳಿಸಿದರು. ಹೀಗಾದಾಗೆಲ್ಲ ಹುಡುಗ ಬ್ರೇಲನ ಮನಸಿನಲ್ಲಿ ತನ್ನಂಥವರ ಜೀವನವನ್ನು ಹೆಚ್ಚು ಸಹ್ಯವಾಗಿ ಮಾಡಲು ಏನಾದರೂ ಮಾಡಲೇಬೇಕೆಂಬ ಹಂಬಲ ಬಲವಾಗುತ್ತಿತ್ತು.

ಬಹಳ ಬೇಗ ಅವನು ಗುರುವಿನ ಪ್ರಿಯ ಶಿಷ್ಯನಾದ. ಸಂಗೀತದಲ್ಲಿ ಅವನಿಗಿದ್ದ ಅಭಿರುಚಿಯನ್ನು ನೋಡಿ ಹುವೇ ಅವನಿಗೆ ನೆರೆಯ ಇಗರ್ಜಿಯಲ್ಲಿ ಆರ್ಗನ್ ಬಾರಿಸುವವನಿಂದ ಪಾಠ ಹೇಳಿಸಿದ. ಆರ್ಗನ್ ನುಡಿಸುವುದರಲ್ಲಿ ಬ್ರೇಲ್ ಕ್ಷಿಪ್ರದಲ್ಲೇ ಸಾಕಷ್ಟು ಪರಿಣತಿ ಸಂಪಾದಿಸಿದ.

ಬ್ರೇಲನ ಜೀವನಾಂಧಕಾರದಲ್ಲಿ ಏನೋ ರಸ ಮೂಡಿತೆನ್ನುವಾಗ ಹುವೇ ಸಹಸಾ ಮರಣಹೊಂದಿದ. ಬ್ರೇಲನಿಗಾದ ಅಳಲು ಅಷ್ಟಿಷ್ಟಲ್ಲ. ಆ ದುಃಖದಲ್ಲೇ ಅವನು "ಇರುಳು ಕವಿಯಿತು" ಎಂಬ ಗೀತವನ್ನು ರಚಿಸಿದ. ವರ್ಷ ಕಳೆಯುವುದರೊಳಗೆ ಅವನ ತಂದೆ ತಾಯಿಗಳು ಸತ್ತರು. ವಿಧಿ ತನ್ನನ್ನು ಮುಟ್ಟಹಾಕಲು ಟೊಂಕವನ್ನೇ ಕಟ್ಟಿದೆ ಎಂದು ಅವನಿಗನಿಸಿಹೋಯಿತು. ಅದರ ಸಂಗಡ ಜಗಳವಾಡಿ ಫಲವಿಲ್ಲ. ಹೀಗೆಂದುಕೊಂಡು ಆತ ಶಾಲೆಗೆ ಶರಣು ಹೊಡೆದು ಕರಟ ಹಿಡಿದು ಬೀದಿಯಲ್ಲಿ ಭಿಕ್ಷೆ ಬೇಡತೊಡಗಿದ. ತನಗೇನೋ ತಂದೆ ಕಷ್ಟಪಟ್ಟು ಗಳಿಸಿಟ್ಟ ಹಣದಿಂದ ಮರ್ಯಾದೆಯಲ್ಲಿ ಜೀವನ ಸಾಗೀತು. ಆದರೆ ತನ್ನಂಥ ಸಾವಿರಾರು ಜನರಿಗೆ ಭಿಕ್ಷಾಪಾತ್ರೆಯೇ ಆಸರೆಯಾಗಿರುವಾಗ ತಾನೊಬ್ಬ ಮಾತ್ರ ಅದಕ್ಕೆ ನಾಚಬೇಕೇಕೆ? ವಿಧಿಗೆ ಸಂತೋಷವಾಗಲಿ!

ಆದರೆ ಬ್ರೇಲ್ ಹುಟ್ಟಾ ಹೋರಾಟಗಾರ.

ಅವನೀ ಹತಾಶ ಭಾವ ಬಹುಕಾಲ ನಿಲ್ಲಲಿಲ್ಲ. ಶಾಲೆಗೆ ಮರಳಿದ. ಅವನು ಹೆಚ್ಚು ದಿನ ತಂದೆಯ ದಾಯವನ್ನೇ ನಂಬಬೇಕಾಗಿ ಬರಲೂ ಇಲ್ಲ. ನೆರೆಯ ಇಗರ್ಜಿಯ ವಾದಕನಿಗೆ ಬೇರೆ ಕಡೆ ವರ್ಗವಾದ್ದರಿಂದ ಅಲ್ಲಿ ದೇವತಾರಾಧನೆಯಲ್ಲಿ ಆರ್ಗನ್ ವಾದನದ ಕೆಲಸ ಬ್ರೇಲನಿಗೇ ಸಿಕ್ಕಿತು. ಸಣ್ಣ ಗಳಿಕೆಯಿಂದ ಆತ ಇನ್ನುಳಿದ ಅಂಧ ವಿದ್ಯಾರ್ಥಿಗಳಿಗೆ ಸಹಾಯ ಮಾಡುತ್ತಿದ್ದ. ಶಾಲೆಯ ಹೊಸ ಅಧಿಕಾರಿ ಮೈಗಳ್ಳನಾಗಿದ್ದುದರಿಂದ ಬ್ರೇಲನೇ ಶಾಲೆಯನ್ನು ನಡೆಸುತ್ತಿದ್ದನೆಂದರೂ ಸಲ್ಲುವುದು. ಆಗ ಅವನಿಗೆ ಬರಿ ೧೬ ವರ್ಷ.

ಈ ಸುಮಾರಿಗೆ ಅವನ ಜೀವನದಲ್ಲಿ ಮಧುರ ಭಾವವೊಂದು ಪ್ರವೇಶಿಸಿ ಬಾಳಿಗೊಂದು ಹೊಸ ಅರ್ಥವನ್ನು ಕೊಟ್ಟಿತು. ನೆರೆಯ ಹುಡುಗಿಯೊಬ್ಬಳು ಅವನಲ್ಲಿ ಆಸಕ್ತಿ ತಾಳಿದ್ದಳು. ಇಗರ್ಜಿಯಲ್ಲಿ ಇಂಪಾಗಿ ಆರ್ಗನ್ ಬಾರಿಸುತ್ತಿದ್ದ ಈ ಸುಂದರ ಆದರೆ ದೃಷ್ಟಿಹೀನ ತರುಣನನ್ನೇ ಅಲ್ಲಿ ಪ್ರಾರ್ಥನೆಗೆ ಬಂದಾಗಲೆಲ್ಲ ಅವಳು ದಿಟ್ಟಿಸುತ್ತ ಕೂಡುತ್ತಿದ್ದಳು. ಅವರಲ್ಲಿ ಸ್ನೇಹ ಬೆಳೆದು ಅವನ ಕೆಲಸದಲ್ಲಿ ಅವಳು ವೇಳೆಯಿದ್ದಾಗೆಲ್ಲ ನೆರವಾಗತೊಡಗಿದ್ದಳು. ಅವನು ಹೊರಗೆ ಹೊರಟಾಗ ಅವನ ಸಂಗಡ ಇರುತ್ತಿದ್ದಳು. ಅವನಿಗಾಗಿ ಪುಸ್ತಕ, ಪತ್ರಿಕೆಗಳನ್ನು ಓದುತ್ತಿದ್ದಳು.

ಹೀಗೆ ಓದಿದ ಒಂದು ಸುದ್ದಿಯೇ ಮುಂದೆ ಬ್ರೇಲ್ ಲಿಪಿಯೆಂದು ಹೆಸರಾಂತ ಲಿಪಿಯ ಆವಿಷ್ಕಾರಕ್ಕೆ ಕಾರಣವಾಯಿತು. ಚಾರ್ಲ್ಸ್ ಬಾರ್ಬಿಯರನೆಂಬ ಸೈನ್ಯಾಧಿಕಾರಿಯೊಬ್ಬ ಸೈನ್ಯಗಳಿಗೆ ಗುಪ್ತ ಸಂದೇಶ ಕಳಿಸುವುದಕ್ಕಾಗಿ ಸಂಕೇತ ಲಿಪಿಯೊಂದನ್ನು ಸೃಷ್ಟಿಸಿದ್ದ. ಅದು ದಪ್ಪನ್ನ ಕಾಗದದ ಮೇಲೆ ಬೆನ್ನುಗಡೆ ಉಬ್ಬುವಂತೆ ಒತ್ತಲ್ಪಟ್ಟ ಬಿಂದುಗಳ ಸಂಯೋಜನೆಯಿಂದ ಕೂಡಿತ್ತು. ಈ ಸಂಕೇತ ಲಿಪಿಯನ್ನೋದಲು ಬೆಳಕೂ ಬೇಕಾಗಿರಲಿಲ್ಲ.

ಕೇಳಿ ಬ್ರೇಲ್ ಚಕಿತನಾದ. ಹೌದು, ಕುರುಡರಿಗೆ ಓದು ಕಲಿಸಲು ಇಂಥ ಲಿಪಿಯನ್ನೇಕೆ ಉಪಯೋಗಿಸಬಾರದು? ಕಣ್ಣಿದ್ದವರಿಗಾಗಿ ಇರುವ ಲಿಪಿ ಕುರುಡರಿಗೆ ಅಷ್ಟು ಸುಲಭವಲ್ಲವೆಂದು ಅವನ ಅನುಭವ ಹೇಳುತ್ತಿತ್ತು. ಉತ್ಸಾಹ ಹತ್ತಿಕ್ಕಲಾರದೆ ಗೆಳತಿ—ಅವಳ ಹೆಸರು ಡೆನೀಸ್—ಯನ್ನು ಕಾಡಿ ಬಾರ್ಬಿಯರನ ಮನೆ ಹುಡುಕಿ ತೆಗೆದು ಆ ರಾತ್ರಿಯೇ ಅವನನ್ನು ಕಂಡ. ಮರಳುವಾಗ ಕುರುಡರಿಗಾಗಿ ಬಾರ್ಬಿಯರನ ವಿಧಾನವನ್ನು ಅಳವಡಿಸಿಕೊಳ್ಳಲು ಸಾಧ್ಯವೆಂದು ಅವನಿಗೆ ಗಟ್ಟಿಯಾಗಿ ಮನವರಿಕೆಯಾಗಿತ್ತು.

ಮುಂದಿನ ಮೂರು ವರ್ಷ ಕಾಲ ಲುಯಿ ಬ್ರೇಲ್ ಅನ್ನ ನೀರು ನಿದ್ರೆಗಳೆಲ್ಲವನ್ನೂ ಮರೆತು ಕುರುಡರಿಗಾಗಿ ಸಾಂಕೇತಿಕ ಲಿಪಿಯೊಂದನ್ನು ರೂಪಿಸುವಲ್ಲಿ ಮಗ್ನನಾಗಿದ್ದ. ಅವನ ಆರೋಗ್ಯ ಕೆಟ್ಟಿತು. ಅವನ ಎದೆ ನೋಯುತ್ತಿತ್ತು. ಅವನು ಕೆಮ್ಮುತ್ತಿದ್ದ. ಆದರೆ ವಿಶ್ರಾಂತಿ ಪಡೆಯಲು ಒಪ್ಪುತ್ತಿರಲಿಲ್ಲ. ಹಣ ವೆಚ್ಚವಾಗಿ ಕೈ ಬರಿದಾದಾಗ ಆರ್ಗನ್ ಕಚೇರಿಗಳನ್ನೇರ್ಪಡಿಸಿ ಹಣ ಕೂಡಿಸಿಕೊಳ್ಳುತ್ತಿದ್ದ.

ಅವನು ನಾನಾತರದ ಸಂಕೇತಗಳನ್ನು ಯುಕ್ತಿಸಿದ. ಕೆಲವು ಹಳೆಯವು, ಕೆಲವು ಅವನದೇ ಕಲ್ಪನೆಯವು. ನೂರಾರು ತರಗಳನ್ನು ಯೋಜಿಸಿ ನೋಡಿ ಕೈಬಿಟ್ಟ ಮೇಲೆ ಕೊನೆಗೆ ಹೆಸರಾಂತ "ಬ್ರೇಲ್ ಸೆಲ್" ಸೃಷ್ಟಿಯಾಯಿತು. ಅದು ಬಿಂದುಗಳ ಸಂಯೋಜನೆಯ ಮೂಲಕ ವಿವಿಧ ಅಕ್ಷರಗಳನ್ನೂ ಅಂಕೆಗಳನ್ನೂ ಸೂಚಿಸುತ್ತದೆ. ಇಂದು ಬ್ರೇಲ್ ಲೇಖನ ಸಾಮಗ್ರಿಯೆಂದರೆ ಅಡ್ಡಕ್ಕೂ ಉದ್ದಕ್ಕೂ ೧/೮ ಅಂಗುಲ ದೂರಕ್ಕೆ ರೇಖೆಗಳನ್ನು ಕೊರೆದ ಹಲಗೆ ಮತ್ತು ಕಂಟವ ಇಷ್ಟೇ. ಹಲಗೆಯ ಮೇಲೆ ಒಂದೋ ಹೆಚ್ಚೋ ಕಾಗದಗಳನ್ನಿರಿಸಿ ಕಟ್ಟಿನಿಂದ ಭದ್ರಪಡಿಸಿ ವಿವಿಧ ಅಕ್ಷರ

ಸಂಕೇತಗಳನ್ನು ತೂತುಗಳ ರೂಪದಲ್ಲಿ ಕಡಿದ ತಗಡಿನ ಪಟ್ಟಿಯನ್ನು ಕಾಗದದ ಮೇಲಿರಿಸಿ ಕಂಟವದಿಂದ ತೂತುಗಳನ್ನು ಚುಚ್ಚಿದರೆ ಕಾಗದಗಳ ಮೇಲೆ ಅವು ಮೂಡುತ್ತವೆ. ಕಾಗದವನ್ನು ತೆಗೆದು ಬೆನ್ನುಗಡೆ ಹೊರಳಿಸಿ ಕೈಯಾಡಿಸಿದರೆ ಉಬ್ಬಿದ ಗುರುತುಗಳು ತಗಲಿ ಕುರುಡನು ಅವುಗಳನ್ನು ಗುರುತಿಸಿ ಓದುತ್ತಾನೆ. ಓದುವುದು ಬಲದಿಂದ ಎಡವಾಗುತ್ತದೆ.

ಬ್ರೇಲ್ ಸಂಕೇತ ಲಿಪಿಯಲ್ಲಿ ಒಟ್ಟು ೬೩ ವಿವಿಧ ಸಂಕೇತಗಳಿವೆ. ಅಷ್ಟರಿಂದಲೇ ಎಲ್ಲ ಅಕ್ಷರ ಹಾಗು ಅಂಕೆಗಳನ್ನು ನಿರ್ದೇಶಿಸಬಹುದು. ತನ್ನ ವಿಧಾನವನ್ನು ಪರಿಪೂರ್ಣಗೊಳಿಸಿದ ಮೇಲೆ ಬ್ರೇಲ್ ಒಂದು ದಿನ ಡೇನೀಸಳಿಂದ ಒಂದು ಪ್ಯಾರಾ ಓದಿಸಿ ಅದನ್ನು ತನ್ನ ಲಿಪಿಯಲ್ಲಿ ಅಚ್ಚೊತ್ತಿದನು. ಬಳಿಕ ಕಾಗದವನ್ನು ಹಿಂದು-ಮುಂದೆ ಮಾಡಿ ಪಂಕ್ತಿಗಳ ಮೇಲೆ ಬೆರಳಾಡಿಸಿ ಓದತೊಡಗಿದನು. ಒಂದೇ ಒಂದು ತಪ್ಪು ಆಗಲಿಲ್ಲ. ಡೇನೀಸಳಿಗೆ ಆಶ್ಚರ್ಯವಾಯಿತು. ಲೂಯಿ ಆನಂದತುಂದಿಲನಾದನು.

ಅವನ ಆನಂದ ಅಲ್ಪಾಯುವಾಗಿತ್ತು. ತನ್ನ ಹೊಸ ಶೋಧವನ್ನು ತನ್ನ ಶಾಲೆಯ ಹೊಸ ಅಧಿಕಾರಿಗೆ ತೋರಿಸಿದಾಗ ಅತ ಮೆಚ್ಚಿಕೊಂಡನಾದರೂ ಎಚ್ಚರಿಕೆಯನ್ನೂ ಕೊಟ್ಟ. ಕಣ್ಣುಳ್ಳವರು ಉಪಯೋಗಿಸುವ ಲಿಪಿಯನ್ನೇ ಉಬ್ಬಕ್ಷರಗಳಲ್ಲಿ ಮುದ್ರಿಸಿ ಕುರುಡರಿಗಾಗಿ ಪುಸ್ತಕಗಳನ್ನು ತಯಾರಿಸಲು ಸರಕಾರ ಆಗಲೇ ಬಹಳ ಹಣ ವೆಚ್ಚ ಮಾಡಿತ್ತು. ನೂರಾರು ಜನರು ಅದರಿಂದ ಹೊಟ್ಟೆಹೊರೆದುಕೊಳ್ಳುತ್ತಿದ್ದರು. ಈಗ ಎಷ್ಟೇ ಒಳ್ಳೆಯದಾದರೂ ಹೊಸ ವಿಧಾನವನ್ನು ಬ್ರೇಲ್ ಸೂಚಿಸಿದರೆ ಅವನನ್ನು ಬೈದು ಹೊರಗಟ್ಟಬಹುದು!

ಈ ಎಚ್ಚರಿಕೆ ಸುಳ್ಳಾಗಲಿಲ್ಲ. ಅಲ್ಲಲ್ಲಿ ಯತ್ನಿಸಿ ನಿರಾಶನಾಗಿ ಕೊನೆಗೆ ಹೇಗೋ ಪ್ಯಾರಿಸಿನ ವಿಜ್ಞಾನ ಅಕಾದಮಿಯವರ ಮುಂದೆ ತನ್ನ ಶೋಧದ ಬಗ್ಗೆ ಮಾತಾಡಲು ಅನುಮತಿ ಪಡೆದ. ವಿಜ್ಞಾನಿಗಳು ಶಾಂತವಾಗಿ ಕೇಳಿಕೊಂಡರು. ಆದರೆ ಮುಂದೆ ಆ ಬಗ್ಗೆ ಏನೂ ಮಾಡಲಿಲ್ಲ. ಇದೇ ನಿಟ್ಟಿನಲ್ಲಿ ಅವನ ಹೃದಯಕ್ಕೆ ವೈಯಕ್ತಿಕ ಆಘಾತವೊಂದು ಒದಗಿತು. ಅವನನ್ನು ಬಹುವಾಗಿ ಪ್ರೀತಿಸುತ್ತಿದ್ದ ಡೇನೀಸ್ ಲಗ್ನವಾಗೋಣ ಎಂದಳು. ಆದರೆ ಅಭಿಮಾನಿಯಾದ ಬ್ರೇಲ್ ಅದಕ್ಕೊಪ್ಪಲಿಲ್ಲ. ತಾನು ಕುರುಡನೆಂಬ ಕಾರಣದಿಂದ ಇವಳು ತನಗಾಗಿ ತ್ಯಾಗಮಾಡಲು ಮುಂದೆ ಬಂದಿದ್ದಾಳೆಂದು ಅವನ ಭಾವನೆಯಾಗಿತ್ತು. ಇಂಥ ದಯಾಭಿಕ್ಷೆಗೆ ತಾನು ಕೈಯೊಡ್ಡಲಾರೆ ಎಂದ. ಡೇನೀಸ್ ಕೆರಳಿ ಅವನನ್ನು ತೊರೆದುಹೋದಳು. ಮುಂದೆ ಅವಳು ಬೇರಾವನನ್ನೋ ಲಗ್ನವಾದಳೆಂದು ತಿಳಿದು ಬ್ರೇಲನ ಎದೆ ಕುಸಿಯಿತು.

ದುಃಖವನ್ನು ಮರೆಯಲು ಬ್ರೇಲ್ ಇನ್ನಷ್ಟು ಕಾರ್ಯಮಗ್ನನಾದ. ಶಾಲೆಯಲ್ಲಿ ವಿದ್ಯಾರ್ಥಿಗಳಿಗೆ ತನ್ನ ನವೀನ ಲಿಪಿಯನ್ನು ಗುಟ್ಟಾಗಿ ಕಲಿಸತೊಡಗಿದ. ಸಂಗೀತದ ಸ್ವರಪ್ರಸ್ತಾರವನ್ನು ಬರೆಯಲು ತನ್ನ ಲಿಪಿಯನ್ನು ಅಳವಡಿಸಿದ. ಕಾಗದದಲ್ಲಿ ಅಚ್ಚುಮಾಡಿದ ಈ ಪ್ರಸ್ತಾರವನ್ನೋದಿ ಕುರುಡರೂ ಸುಲಭವಾಗಿ ಬಾರಿಸಬಹುದಿತ್ತು.

ಈ ಲಿಪಿಯ ಮೂಲಕವಾಗಿ ಅವನಿಂದ ಸಂಗೀತ ಕಲಿತ ಕುರುಡ ಹುಡುಗಿಯೊಬ್ಬಳು ಕೊನೆಗೆ ಬ್ರೇಲನ ವಿಧಾನಕ್ಕೆ ಸಾರ್ವತ್ರಿಕ ಮನ್ನಣೆ ದೊರಕಿಸಲು ಕಾರಣಳಾದಳು. ಅನೇಕ ಪ್ರತಿಷ್ಠಿತ ಫ್ರೆಂಚ್ ಜನರು ಸೇರಿದ್ದ ಒಂದು ಕೂಟದಲ್ಲಿ ಈ ಹುಡುಗಿ ಕಾಗದದಮೇಲೆ ಕೈಯಾಡಿಸಿ ಆರ್ಗನ್ ಮೇಲೆ ಹಾಡು ನುಡಿಸುವುದನ್ನು ನೋಡಿ ನೆರೆದವರು ವಿಸ್ಮಿತರಾಗಿ ಅವಳನ್ನು ಪ್ರಶ್ನಿಸಿದರು. ತನ್ನ ಅಂಧ ಗುರುವನ್ನೂ ಅವನ ಸಾಧನೆಯನ್ನೂ ಅವನ ವಿಧಾನದಿಂದ ತಾನು ಬರೆದಿಟ್ಟುಕೊಂಡಿದ್ದ ಅನೇಕ ಹಾಡುಗಳ ಪ್ರಸ್ತಾರದ ವಿಷಯವನ್ನೂ

ಅವಳು ಮನಮುಟ್ಟುವಂತೆ ವರ್ಣಿಸಿದಳು. ಯಾವ ವಿಜ್ಞಾನ ಆಕಾದಮಿ ಸ್ವತಃ ಬ್ರೇಲ್ ಬೇಡಿಕೊಂಡಾಗ ಅಸಡ್ಡೆ ಮಾಡಿತ್ತೋ ಅದೇ ಈಗ ಪ್ರತಿಷ್ಠಿತರಿಂದ ಪ್ರಚೋದಿತವಾಗಿ ಅವನಿಗೆ ಕಿವಿಗೊಡಲು ಆತುರವಾಯಿತು! ಆದರೆ ಬ್ರೇಲ್ ತನ್ನ ನಿರಂತರ ಶ್ರಮ ಮತ್ತು ನಿರಾಸೆಯಿಂದ ರೋಗಿಷ್ಠನಾಗಿ ಹಾಸಿಗೆ ಹಿಡಿದಿದ್ದ. ಹುಡುಗಿಯೇ ತಿಳಿದಂತೆ ಅಕಾದಮಿಯು ಮುಂದೆ ವಿವರಿಸಿದಳು. ಮುಂದೆ ಫ್ರೆಂಚ್ ಸಾಮ್ರಾಟ್ ಲುಯಿ ನೆಪೋಲಿಯನ್ನನ ಮುಂದೆ ಇದೇ ಹುಡುಗಿ ಸಂಗೀತ ಕಚೇರಿ ಮಾಡಿದ ಮೇಲಂತೂ ಬ್ರೇಲ್ ವಿಧಾನಕ್ಕೆ ಎಂದಿಲ್ಲದ ಪ್ರಶಸ್ತಿ ಬಂತು. ಆದರೆ ಆಗ ಲುಯಿ ಬ್ರೇಲ್ ಸತ್ತು (೧೮೫೨) ಎರಡು ವರ್ಷ ಕಳೆದು ಹೋಗಿತ್ತು!

ಇಂದು ಜಗತ್ತೆಲ್ಲ ಬ್ರೇಲ್ ವಿಧಾನವನ್ನು ಬಳಸುತ್ತಿದೆ. ಅನೇಕ ಭಾಷೆಗಳಿಗೆ ಅದನ್ನು ಅಳವಡಿಸಲಾಗಿದೆ. ಅಸಂಖ್ಯ ಪುಸ್ತಕಗಳನ್ನು ಬ್ರೇಲ್ ಲಿಪಿಯಲ್ಲಿ ಮುದ್ರಿಸಲಾಗಿದೆ. ಬ್ರೇಲ್ ಮುದ್ರಣಾಲಯಗಳಾಗಿವೆ. ಭಾರತದ ಸಕಲ ಭಾಷೆಗಳಿಗೂ ಅನ್ವಯಿಸುವ "ಭಾರತೀ ಬ್ರೇಲ್" ಲಿಪಿಯನ್ನು ರೂಪಿಸಲಾಗಿದೆ. ಡೆಹರಾಡೂನಿನಲ್ಲಿರುವ ಬ್ರೇಲ್ ಮುದ್ರಣಾಲಯವು ಹಿಂದಿ ಮೊದಲಾದ ಭಾರತೀಯ ಭಾಷೆಗಳಲ್ಲಿ ಅನೇಕ ಬ್ರೇಲ್ ಪುಸ್ತಕಗಳನ್ನು ಮುದ್ರಿಸಿದೆ. ದೇಶದಲ್ಲಿರುವ ೧೦೯ ಕುರುಡರ ಸಂಸ್ಥೆಗಳಲ್ಲಿ ಅಂಧರಿಗೆ ಜ್ಞಾನದೀಪ ದೊರೆಯುತ್ತಿದೆ.

ಇದಕ್ಕೆಲ್ಲ ನಾವು ಲುಯಿ ಬ್ರೇಲನಿಗೆ ಬಹುಮಟ್ಟಿಗೆ ಋಣಿಗಳಾಗಿರಬೇಕು. *

# ಸಿತ್ತನವಾಸಲ್ :
# ಪಲ್ಲವ ಚಿತ್ರಕಲೆಯ ಪರಿಣತಿ ಸ್ಥಾನ

ಐವತ್ತು ವರ್ಷಗಳ ಹಿಂದೆ ಶ್ರೀ ಟಿ. ಎ. ಗೋಪೀನಾಥ ರಾಯರು ಸಿತ್ತನವಾಸಲ್ಲಿನ ಗುಹಾದೇವಾಲಯಗಳಲ್ಲಿ ಅಪೂರ್ವ ಸೌಂದರ್ಯವುಳ್ಳ ಭಿತ್ತಿ ಚಿತ್ರಗಳನ್ನು ಮೊಟ್ಟಮೊದಲು ಗುರುತಿಸಿದರು. ೧೯೧೬-೧೭ ರಲ್ಲಿ ಅವರ ಮಿತ್ರರಾದ ಪ್ರೊಫೆಸರ್ ಜಿ. ಜೋವಿಯೋ ದುಬ್ರೋಲರರು ಈ ಚಿತ್ರಗಳ ವಿಷಯದಲ್ಲಿ ಲೇಖ ಬರೆದು ಪುರಾತತ್ವ ಪತ್ರಿಕೆಗಳಲ್ಲಿ ಪ್ರಕಟಿಸಿದರು. ಅಂದಿನಿಂದ ಇಂದಿನವರೆಗೂ ಈ ಚಿತ್ರಗಳು ಜಗತ್ತಿನ ಕಲಾಪ್ರೇಮಿಗಳ ಮನ ಸೆಳೆಯುತ್ತಲೇ ಇವೆ.

ಸಿತ್ತನವಾಸಲ್ ಪುದುಕೋಟೆಯಿಂದ ೯ ಮೈ. ವಾಯುವ್ಯಕ್ಕೆ ಕಾವೇರಿ ನದಿಯ ದಕ್ಷಿಣ ತಟ[illegible]ವೆ. ಗೋಪೀನಾಥ ರಾಯರು ಮೊದಲು ಗುರು[illegible] ಈ ಗುಹಾದೇವಾಲಯ [illegible] ಭಿತ್ತಿಗಳ ಮೇಲೆ ಮಣ್ಣಿನ ಆವರಣವನ್ನು ಮೆತ್ತಿ ಅದರ ಮೇಲೆ ಚಿತ್ರಗಳನ್ನು ನಿರ್ಮಿಸಲಾಗಿತ್ತು. [illegible]ವರೆ ಹೆಚ್ಚಿನ ಕೆಳಭಾಗದ ಚಿತ್ರಗಳೆಲ್ಲ ಮಳೆ-ಗಾಳಿಗಳ ಮತ್ತು ಮೂಢಮಾನವರ ದಾಳಿಗಳಿಂದ ನಷ್ಟವಾಗಿ ಹೋಗಿದ್ದವು. ಕಂಬಗಳ ಮೇಲ್ಭಾಗದಲ್ಲೂ ಮುಚ್ಚಿಗೆಯ ಮೇಲೂ ನಿರ್ಮಿತವಾದವುಗಳಷ್ಟೇ ಒಳ್ಳೇ ಸ್ಥಿತಿಯಲ್ಲಿ ಉಳಿದಿದ್ದವು. ಕಂಡುಹಿಡಿಯಲ್ಪಟ್ಟಾಗ ಇವುಗಳ ನಿರ್ಮಾಣವಾಗಿ ೧೩ ಶತಮಾನಗಳು ದಾಟಿಹೋಗಿದ್ದವೆಂಬುದನ್ನು ಮರೆಯಲಾಗದು.

ಸಿತ್ತನವಾಸಲ್ ಗುಹಾ ಚಿತ್ರಗಳ ನಿರ್ಮಾಣ ಕಾಲ ಕ್ರಿ. ಶ. ಏಳನೇ ಶತಮಾನದ ಆದಿಕಾಲ. ಅಖಿಲ ಭಾರತದಲ್ಲಿ, ವಿಶೇಷವಾಗಿ ದಕ್ಷಿಣ ದೇಶದಲ್ಲಿ ಧಾರ್ಮಿಕ ಮತ್ತು ಕಲಾ ಉತ್ಕರ್ಷದ ಕಾಲವದು. ಉತ್ತರದಲ್ಲಿ ಹರ್ಷವರ್ಧನ, ಮಧ್ಯದಲ್ಲಿ ಬಾದಾಮಿಯ ಚಾಲುಕ್ಯರು, ದಕ್ಷಿಣದಲ್ಲಿ ಪಲ್ಲವರು ಈ ಕಲಾಸಾಹಿತ್ಯೋತ್ಕರ್ಷದ ಅಧ್ವರ್ಯುಗಳಾಗಿದ್ದರು. ವಿಶೇಷವೆಂದರೆ ಇವರೆಲ್ಲರೂ ಪರಸ್ಪರ ಶತ್ರುಗಳೂ ಚಕ್ರವರ್ತಿ ಪದಕ್ಕೆ ಸ್ಪರ್ಧಿಗಳೂ ಆಗಿದ್ದರು. ಹರ್ಷವರ್ಧನ ದಕ್ಷಿಣಾಪಥವನ್ನು ಗೆಲ್ಲಲು ಹವಣಿಸಿ ಚಾಲುಕ್ಯ ಎರಡನೇ ಪುಲಕೇಶಿಯಿಂದ ನರ್ಮದಾ ತೀರದಲ್ಲಿ ಹಿಂತಳ್ಳಲ್ಪಟ್ಟಿದ್ದ. (ಕ್ರಿ. ಶ. ೬೨೦). ಅದೇ ೯೯,೦೦೦ ನಾಡಿನ ಅಧಿಪತಿ ಚಾಲುಕ್ಯಪುಲಿಕೇಶಿ, ೧,೦೦೦ ಕ್ರೋಶ ರಾಜ್ಯದ ಅಧಿಪತಿಯಾದ ಕಾಂಚಿಯ ಪಲ್ಲವ ಒಂದನೇ ಮಹೇಂದ್ರವರ್ಮನನ್ನು ಸೋಲಿಸಿದ್ದ (ಕ್ರಿ. ಶ. ೬೦೯). ಆದರೂ ಇವರೆಲ್ಲರೂ ಕಲಾಪ್ರೋತ್ಸಾಹಕರಾಗಿದ್ದರು, [illegible] ಒಬ್ಬರ ಪ್ರದೇಶದ [illegible]ಲೆಯಿಂದ [illegible] ಸ್ಫೂರ್ತಿ ಪಡೆದಿದ್ದರು.

ಗುಹಾಂತರ ದೇವಾಲಯಗಳು [illegible]



ಅಪ್ಸರೆಯರು

ಬಹು ಜನಪ್ರಿಯವಾಗಿದ್ದವು. ಚಾಲುಕ್ಯ ಕೀರ್ತಿವರ್ಮನ ಕಾಲದಲ್ಲಿ ಬಾದಾಮಿಯ ಗುಹಾ ದೇವಾಲಯಗಳನ್ನು ಕಟೆಯಲಾಗಿತ್ತು (ಕ್ರಿ. ಶ. ಸು. ೫೭೮). ಸಿತ್ತನವಾಸಲ್ ಗುಹಾಲಯವು ಪಲ್ಲವ ಒಂದನೇ ಮಹೇಂದ್ರವರ್ಮನ (ಕ್ರಿ. ಶ. ಸು. ೬೦೦-೬೨೫) ನ ಕಾಲದ್ದು.

ಈ ಗುಹಾಲಯವು ದಕ್ಷಿಣದ ಬೇರೆ ಕೆಲ ಗುಹಾಲಯಗಳ ಹಾಗೆ ಮೊದಲು ಜೈನದೇಗುಲವಾಗಿತ್ತು. ಅಡತೆ ಮೊದಲು ಜೈನ ಯತಿಯಾಗಿದ್ದು ಬಳಿಕ ಶೈವಮತಾವಲಂಬಿಯಾದ ಪ್ರಸಿದ್ಧ ಅಪ್ಪಾರ್ ಅಹತು ಜೈನ ಮತವನ್ನು ವಿರೋಧಿಸಿ ಶೈವಮತ ಪ್ರಚಾರ ಪ್ರಾರಂಭಿಸಿದಾಗ ಮೊದಲು ಜೈನನಾಗಿದ್ದ ಮಹೇಂದ್ರವರ್ಮನೂ ಶೈವಮತಕ್ಕೆ ಮತಾಂತರ ಹೊಂದಿದ. ಶೈವ ಪಂಥದ ಈ ಉಚ್ಛ್ರಾಯ ಕಾಲದಲ್ಲಿ ಜೈನ ಸಂಘಗಳ ವಶದಲ್ಲಿದ್ದ ಹಲವು ದೇಗುಲಗಳು ಶೈವರ ವಶಕ್ಕೆ ಹೋದಂತೆ ಕಾಣುತ್ತದೆ. ಸಿತ್ತನವಾಸಲ್ ಗುಹಾಲಯಗಳಲ್ಲಿಯೂ ಈ ಅಧಿಕಾರ ಪರಿವರ್ತನೆಯ ಕುರುಹುಗಳು ಕಾಣಸಿಗುತ್ತವೆ.

"ವಿಚಿತ್ರಚಿತ್ತ" ಎಂಬ ಬಿರುದನ್ನು ಧರಿಸಿದ್ದ ಮಹೇಂದ್ರವರ್ಮನು ಸ್ವತಃ ಚಿತ್ರಕಲಾಪ್ರೇಮಿಯಾಗಿದ್ದ, ಚಿತ್ರಕಾರನೂ ಆಗಿದ್ದ. ಅದನ್ನು ಸೂಚಿಸಲು ಅವನು "ಚಿತ್ರಕಾರ ಪುಲಿ" ಎಂಬ ಬಿರುದನ್ನು ಧರಿಸಿದ್ದ. ಅವನ ಪ್ರೋತ್ಸಾಹದಲ್ಲಿ ಪಲ್ಲವ ರಾಜ್ಯದಲ್ಲಿ ಚಿತ್ರಕಲೆ ಅರಳಿದ್ದರಲ್ಲಿ ಸೋಜಿಗವಿಲ್ಲ.

ಸಿತ್ತನವಾಸಲ್ ಗುಹಾಲಯದ ಮೊಗಸಾಲೆಯ ಮಾಳಿಗೆಯ ಮೇಲೆ ಬರೆದ ಮಹಾ ವರ್ಣಚಿತ್ರವೊಂದು ದೇವಾಲಯದ ಜೈನತ್ವವನ್ನು ವ್ಯಕ್ತಪಡಿಸುತ್ತದೆ. ಕಮಲ ಪುಷ್ಪಗಳಿಂದ ತುಂಬಿದ ಈ ಸರೋವರದಲ್ಲಿ ಮೀನುಗಳೂ ಹಂಸಗಳೂ ಆನೆಗಳೂ ಎಮ್ಮೆ ಕೋಣಗಳೂ ನಡುನಡುವೆ ವಿಹರಿಸುತ್ತಿವೆ. ಅಲ್ಲಿಯೇ ಮೂವರು ಜೈನ ಯತಿಗಳೂ ಇದ್ದಾರೆ. ಈ ಯತಿಗಳನ್ನು ಚಿತ್ರಿಸಲು ಉಪಯೋಗಿಸಿದ ಬಣ್ಣಗಳ ಸೌಂದರ್ಯವೂ ಯತಿಗಳ ಭಾವಭಂಗಿಗಳಲ್ಲಿ ವ್ಯಕ್ತವಾದ ಶಾಂತಿ-ದಯಾ-ಸೌಕುಮಾರ್ಯಗಳೂ ಅಸದೃಶವಾಗಿವೆಯೆಂದು ವಿಮರ್ಶಕರು ಹೇಳುತ್ತಾರೆ. ಈ ಚಿತ್ರದಲ್ಲಿ ಕಾಣಬರುವ ಒಬ್ಬ ಗಂಧರ್ವನನ್ನು ಪ್ರಸ್ತುತ ಚಿತ್ರಮಾಲೆಯಲ್ಲಿ ಕಾಣಬಹುದು. ಅವನು ಮುಕುಲಿತ ಕಮಲವನ್ನು ಹಿಡಿದ ರೀತಿ, ಅವನ ಇನ್ನೊಂದು ಕೈಯ ಬೆರಳುಗಳ ಲಾಲಿತ್ಯ, ಮುದ್ರಾವಿನ್ಯಾಸ ಇವು ಚಿತ್ರಕಾರನ ಅಭಿವ್ಯಕ್ತಿಸಾಮರ್ಥ್ಯಕ್ಕೊಂದು ನಿದರ್ಶನವಾಗಿವೆ. ಇದು ಭಾರೀ ಚಿತ್ರವೊಂದರ ಅಂಶವೆಂಬುದನ್ನು ನೆನೆದರೆ ಚಿತ್ರದ ಪ್ರತಿ ಅಂಗೋಪಾಂಗದ ವಿಷಯದಲ್ಲಿಯೂ ಈ ಕಲಾವಿದರು ಎಷ್ಟು ಶ್ರಮವನ್ನೂ ಎಚ್ಚರವನ್ನೂ ವಿನಿಯೋಗಿಸಿದ್ದರೆಂದು ತರ್ಕಿಸಬಹುದು.

ದೇವಾಲಯವು ಶೈವರ ಕೇಂದ್ರವಾದುದಕ್ಕೆ ಸಾಕ್ಷಿ ಹೇಳುವ ಮಹಾದೇವನ ಚಿತ್ರವು ಅಜಂತಾ ಚಿತ್ರಗಳಲ್ಲಿ ವ್ಯಕ್ತವಾಗುವ ಋಜುತ್ವವನ್ನೂ ರೇಖಾ ಕೌಶಲವನ್ನೂ ಪ್ರಕಟಿಸುವ ಜತೆಗೆ ಮಹಾದೇವನ ಮುಖದಲ್ಲಿ ಅನಿರ್ವಚನೀಯ ಭಾವವನ್ನು ಬಹು ಶಕ್ತಿಯುತವಾಗಿ ತೋರಿಸುತ್ತದೆ.

ಕಲಾವಿಮರ್ಶಕರ ಮತದಲ್ಲಿ ಇಲ್ಲಿನ ಚಿತ್ರಗಳಲ್ಲೆಲ್ಲ ಮೋಹಕವಾದವುಗಳೆಂದರೆ ಅಪ್ಸರೆಯರ ಚಿತ್ರಗಳು. ನರ್ತನ ನಿರತರಾದ ಈ ದೇವಲೋಕದ ಕಲಾವತಿಯರ ಮೈಕಟ್ಟು, ಮುಖಭಾವ, ಚಲಂತಿಕೆ, ಲಾವಣ್ಯಗಳು ಇವುಗಳನ್ನು ಬರೆದವರ ಶಾರೀರಜ್ಞಾನ ಮತ್ತು ಕಲಾಪ್ರತಿಭೆಗೆ ನಮೋ ನಮೋ ಎನಿಸುತ್ತವೆ.

ಇವು ಚಿತ್ರಕಲೆ ದೇಶದಲ್ಲಿ ಬಹಳ ಗೌರವಾಸ್ಪದವಾಗಿದ್ದ ಕಾಲದ ಕೃತಿಗಳು. ಆಗ ಚಿತ್ರಕಾರರಿಗೂ ಕವಿಗಳಿಗಿದ್ದ ಗೌರವವೇ ಇತ್ತೆಂದು ಅಲಂಕಾರಶಾಸ್ತ್ರಿ ರಾಜಶೇಖರನ ಬರವಣಿಗೆಗಳಿಂದ ತಿಳಿಯುತ್ತದೆ. ಆದರೆ ದುರ್ದೈವದಿಂದ ಈ ಕಲಾವಿದರು ಅನಾಮಧೇಯರಾಗಿ ಉಳಿದಿದ್ದಾರೆ.







# ಇರುಳಿನ ಆತ್ಮ



ಮೂಲ : ಮಲೆಯಾಳ
ಎಂ.ಟಿ. ವಾಸುದೇವನ್ ನಾಯರ್

ಕನ್ನಡಕ್ಕೆ :
ಕೆ.ಟಿ. ವೇಣುಗೋಪಾಲ್
ಮತ್ತು ಕೆ.ಟಿ. ಶ್ರೀಧರ್

# ಇರುಳಿನ ಆತ್ಮ

ಗಾಬರಿಯಿಂದ ಮೆಲ್ಲನೆ ಕಳ್ಳ ಹೆಜ್ಜೆಗಳನ್ನಿಡುತ್ತಾ ಹೊರಗೆ ಬಂದಿದ್ದ. ಅಚ್ಯುತ್ತನ್ ನಾಯರಿಗೆ ಒಳ್ಳೇ ನಿದ್ದೆ. ಸೊಂಟಕ್ಕೆ ಸುತ್ತಿದ್ದ ಬಟ್ಟೆ ಜಾರಿ ಬೀಳುವಂತಿತ್ತು. ರೋಮ ತುಂಬಿದ್ದ ಆ ಬಲಿಷ್ಠ ತೋಳುಗಳನ್ನೂ ಹೇಸಿಗೆಯನ್ನುಂಟುಮಾಡುತ್ತಿದ್ದ ದಪ್ಪ ಬೆರಳುಗಳನ್ನೂ ನೋಡಿದಾಗ ಕೋಪ ಉಕ್ಕಿ ಬಂತು.

ಆ ಕೈಯಲ್ಲವೆ ನಿನ್ನೆ ಸಂಜೆ....ನಿನ್ನೆಯಲ್ಲವೆ? ಅಥವಾ ಕೆಲ ದಿನಗಳ ಹಿಂದೆಯೆ ?

ವೇಲಾಯುಧನ್ ಕುತ್ತಿಗೆಯನ್ನು ಸವರಿಕೊಂಡ. ನೋವು ಇನ್ನೂ ಇದೆ. ಒಂದು ದಿನ ಯಾರಿಗೂ ತಿಳಿಯದಂತೆ ಆ ಕೈಯನ್ನು ಕಡಿದು ಹಾಕಬೇಕು. ಮೊದಲೇ ದೊಡ್ಡದೊಂದು ಕಡಿಗತ್ತಿ ತಂದು ಇಟ್ಟುಕೊಳ್ಳಬೇಕು.

ಅವರಿಗೆ ಹಾಗೇ ಮಾಡಬೇಕು. ಇಲ್ಲವಾದರೆ ಹೀಗೆ ಮನುಷ್ಯನಿಗೆ ಕಷ್ಟ ಕೊಡಬೇಕೆ ?

ನಿನ್ನೆ....ನಿನ್ನೆಯೇ? ಅಲ್ಲ, ಒಂದೆರಡು ದಿನಗಳ ಹಿಂದೆಯೆ ? ಮನೆಯ ಹಿಂಬದಿಗೆ ಅವನನ್ನು ಮೀಯಿಸಲು ಹಿಡಿದು ತಂದಿದ್ದರು. ಕೆಲವು ದಿನಗಳಿಂದ ಅವನನ್ನು ಮೀಯಿಸುವ ಕೆಲಸ ಅಚ್ಯುತ್ತ ನಾಯರರದ್ದಾಗಿತ್ತು. ಅದು ವೇಲಾಯುಧನಿಗೆ ಇಷ್ಟವಾಗುತ್ತಿರಲಿಲ್ಲ. ಇನ್ನೊಬ್ಬರು ಮೀಯಿಸುವುದೇ ? ಅವನೇನು ಚಿಕ್ಕ ಮಗುವೆ ? ದೊಡ್ಡವನಾಗಿದ್ದಾನೆ. ಬಹಳ ದೊಡ್ಡವನಾಗಿದ್ದಾನೆ. ಗೋಪಿಯ ಹಾಗೆ ಹುಡುಗನಾಗಿದ್ದಾಗ ನದಿಗೆ ಹೋಗಿ ಸ್ನಾನ ಮಾಡಿದ್ದ. ಆಗ ಅಮ್ಮ ಮೈಗೆ ನೀರು ಎರೆಯುವುದಿತ್ತು.

ಈಗ ಅವನು ಎತ್ತರ ಬೆಳೆದಿದ್ದಾನೆ. ಮುತ್ತಜ್ಜಿ ಹೇಳುತ್ತಾಳೆ: "ಪಾಪ, ಹತ್ತಿಪ್ಪತ್ತು ವಯಸ್ಸಾಯಿತು. ದುರ್ವಿಧಿ.... ....ದುರ್ವಿಧಿ...." ವೇಲಾಯುಧನಿಗೆ ಗೊತ್ತು, ಅದೆಲ್ಲಾ ತನ್ನನ್ನು ಕುರಿತೇ ಎಂದು. ಹಾಗಿದ್ದರೂ ಅಚ್ಯುತ್ತನ್ ನಾಯರ್ ಮೀಯಿಸಲು ಹಿಡಿದುಕೊಂಡು ಹೋಗುತ್ತಿದ್ದರು. ಮೂರು ದೊಡ್ಡ ಹಂಡೆಗಳಲ್ಲಿ ನೀರು ತುಂಬಿಸಿಟ್ಟಿರುವರು. ನೀರು ತುಂಬಿದ ಹಂಡೆಗಳ ಸಮೀಪ ಹಲಗೆಯ ಮೇಲೆ ಹಿಡಿದು ಕುಳ್ಳಿರಿಸಿ ಅಚ್ಯುತ್ತನ್ ನಾಯರ್ ಚೆಂಬು ತರಲು ಹೋದಾಗ ವೇಲಾಯುಧನಿಗೆ ಒಂದು ಯುಕ್ತಿ ತೋರಿತು. ಮನೆಯ ಹಿಂಬದಿಯಿಂದ ಒಂದು ಹೊಳೆ ಹರಿದು ಹೋಗುವುದಾದರೆ ಹೇಗಿದ್ದೀತು? ಹಾಯಿ ಬಿಚ್ಚಿದ ದೊಡ್ಡ ಮಂಜಿಗಳೂ ಮೀನು ಹಿಡಿಯುವ ಸಣ್ಣ ದೋಣಿಗಳೂ ತೇಲುತ್ತಿರುವವು. ಅವನು ಮಲಗುವ ಕೋಣೆಯ ಕಿಟಕಿಯಿಂದ ಎಲ್ಲವನ್ನೂ ನೋಡಬಹುದಿತ್ತು. ಮಳೆಗಾಲ ಬಂದಾಗ ಮೀನುಗಳು ಬೇಕಾದರೆ ಕಿಟಕಿಯಿಂದಲೆ ಗಾಳ ಹಾಕಲೂ ಬಹುದು. ಗೋಡೆಯ ಸಮೀಪದಿಂದ ಕಡಿದಿದ್ದ ಗಟಾರಿಗೆ ಮೂರು ಹಂಡೆಗಳಲ್ಲಿದ್ದ ನೀರನ್ನೂ ಸುರಿದ. ಕೆಂಪು ನೀರು ಹರಿದು ಹೋಗುತ್ತಿರುವುದನ್ನು ಆಸಕ್ತಿಯಿಂದ ನೋಡುತ್ತಾ ನಿಂತಾಗ ಅಚ್ಯುತ್ತನ್ ನಾಯರ್ ಗರ್ಜನೆ: "ವೇಲಾಯುಧಾ!"

ಹೆದರಿಕೊಂಡೇ ಅವರ ಮುಖ ನೋಡಿದ.

"ಸೊಕ್ಕು ಬಂದಿದೆಯೋ ?"

ಅವರ ಕಣ್ಣುಗಳಲ್ಲಿ ಬೆಂಕಿ ಇತ್ತು. ಅವರಿಂದ ತನ್ನ ತಲೆಯನ್ನು ಮರೆ ಮಾಡಿಕೊಳ್ಳಲು ಬರಿದಾಗಿದ್ದ ಹಂಡೆಯನ್ನು ಮೇಲಕ್ಕೆತ್ತುತ್ತಿದ್ದಾಗ ಏಟು ಬಿದ್ದಿತ್ತು.

"ಹೊಡೀಬೇಡಪ್ಪಾ........ಹೊಡಬೇಡೀ...." ಸ್ವರವೇರಿಸಿ ಅತ್ತುಬಿಟ್ಟಿದ್ದ.

ಮುತ್ತಜ್ಜಿ ಅಂಗಳದ ಅಂಚಿಗೆ ಬಂದು ನಿಂತಳು. ಹಿಂದಿನಿಂದ ದೊಡ್ಡಮ್ಮ ಮತ್ತು

ಗೋಪಿ.

ಮುತ್ತಜ್ಜಿ ಮೈಮೇಲೆ ಹಾಕಿದ್ದ ಬಟ್ಟೆಯ ತುದಿಯಿಂದ ಕಣ್ಣುಗಳನ್ನೊರಸಿಕೊಳ್ಳುತ್ತಾ ಅಂದಳು: "ದೈವದೋಷವಾದೀತು ಅಚ್ಚುತ್ತಾ ....ಸ್ವಬುದ್ಧಿ ಇಲ್ಲವಲ್ಲಾ ?"

"ಮಾಡಿದ ಕೆಲಸನೋಡಿದಿರಾ ಕಾಳ್ಯಮ್ಮಾ?"

ದೊಡ್ಡಮ್ಮ ಗುರುಗುಟ್ಟಿದಳು : "ಸೊಕ್ಕು ಸೊಕ್ಕು...ಚೆನ್ನಾಗಿ ಎರಡು ಬಿದ್ದರೆ ಎಲ್ಲಾ ಸರಿಯಾಗುತ್ತದೆ."

ಮುತ್ತಜ್ಜಿ ಇನ್ನೊಮ್ಮೆ ಕಣ್ಣುಗಳನ್ನು ಜ್ಜಿ ಕೊಳ್ಳುತ್ತಾ ಎಂದಿನಂತೆಯೇ ಗೊಣಗುಟ್ಟಿದಳು: "ದುರ್ವಿಧಿ....ದುರ್ವಿಧಿ !"

ವೇಲಾಯುಧನ್ ಕುತ್ತಿಗೆ ಮುಟ್ಟಿ ನೋಡಿ ಕೊಂಡ. ನೋವು ಇನ್ನೂ ವಾಸಿಯಾಗಿಲ್ಲ.

ಒಳ್ಳೇ ಹರಿತವಾದ ಒಂದು ಕಡಿಗತ್ತಿ ಅಯ್ಯಪ್ಪನ ಕೈಯಲ್ಲಿದೆ. ಅವನು ಕೆಲಸ ಮುಗಿಸಿ ಸಾಯಂಕಾಲ ಕೂಲಿ ತೆಗೆದುಕೊಳ್ಳಲು ಅಂಗಳದ ಮೂಲೆಗೆ ಬಂದು ನಿಂತಾಗ ಅದನ್ನು ಜಾರಿಸಿ ಬಿಡಬೇಕು.

ಕುತ್ತಿಗೆಯ ಗೋಲಿಯನ್ನು ಉರುಳಿಸುತ್ತಾ ಅಚ್ಯುತ್ತನ್ ನಾಯರ್ ನಿದ್ದೆ ಮಾಡುತ್ತಿರುವಾಗ ಒಂದೇ ಪೆಟ್ಟಿಗೆ....

ಬೆಳಿಗ್ಗೆ ಎದ್ದಾಗ ಒಳ್ಳೇ ತಮಾಷೆ ಆಗುವುದು.

"ಇದೆಲ್ಲಾ ಹುಚ್ಚಲ್ಲ, ಸೊಕ್ಕು" ಎನ್ನುತ್ತಾ ಹೊಡೆಯಲು ಬಂದಾಗ ಕೈ ಇರುವುದಿಲ್ಲ.

ವೇಲಾಯುಧನ್ ಅಲ್ಲಿಂದ ಹೊರಗಿನ ಕೋಣೆಗೆ ಕಾಲಿಟ್ಟ. ತೆರೆದ ಕಿಟಕಿಯ ಕೆಳಗೆ ಮುತ್ತಜ್ಜಿ ಹುಲ್ಲು ಚಾಪೆ ಹಾಸಿ ಮಲಗಿದ್ದಾಳು. ಅವಳ ದೇಹ ನೋಡಿದರೆ ಹೇಸಿಗೆಯಾಗುವುದು. ಮೈತುಂಬಾ ಮೀನಿನ ಹರೆ ಅಂಟಿಕೊಂಡಂತಿದೆ.

ಮುತ್ತಜ್ಜಿಯಲ್ಲಿ ಅವನಿಗೆ ಸಿಟ್ಟಿಲ್ಲ. ಅವಳು ಅವನನ್ನು ಈ ವರೆಗೂ ಹೊಡೆದಿಲ್ಲ–ಬೈದಿಲ್ಲ. ಮನೆಯಲ್ಲಿ ಉಳಿದವರೆಲ್ಲಾ ಹೊಡೆದಿದ್ದಾರೆ. ಗೋಪಿ ಮತ್ತು ಶಂಕರನ್ ಕುಟ್ಟಿ ಕೂಡಾ. ಅವರು ಹುಡುಗರು. ಸಾಧಾರಣವಾಗಿ ಸಣ್ಣವರು ದೊಡ್ಡವರನ್ನು ಹೊಡೆಯುವುದಿಲ್ಲವಲ್ಲಾ? ದೊಡ್ಡಮ್ಮ ಕೆಳಗೆ ಇರದೆ ಇದ್ದುದು ಒಳ್ಳೆಯದಾಯಿತು. ಅವಳ ಕೋಣೆ ಮೇಲೆ ಇತ್ತು.

ಒಳಗಿನ ಕೋಣೆಯಲ್ಲಿ ತುಂಬ ಕತ್ತಲು. ನಡು ಮಧ್ಯಾಹ್ನದ ಹೊತ್ತಿಗೂ ಒಳ್ಳೇ ಕತ್ತಲಿರುವುದು. ಅಟ್ಟದ ಮೂಲೆಯಿಂದ ಮಾತ್ರ ಇಷ್ಟು ಬೆಳಕು ಕೋಣೆಯ ನಡುವೆ ದುಂಡಗೆ ಬೀಳುವುದು. ಮೂಲೆಗಳಲ್ಲಿ ಭತ್ತ ತುಂಬಿಸಿಟ್ಟಿದ್ದಾರೆ. ವಡುಮನೆಯ ಕತ್ತಲಲ್ಲಿ ಪಿಶಾಚಿಗಳಿವೆಯೊ ಏನೊ. ಒಂದು ವೇಳೆ ದೊಡ್ಡಮ್ಮನು ಅಡಗಿ ಕುಳಿತಿರಲೂಬಹುದು. ಇದ್ದರೆ ಸೋಗೆದಂಟು ಕೈಯಲ್ಲಿರುವುದು. ಅದರಿಂದ ಹೊಡೆಯುವುದಲ್ಲವೆ ಅವರ ವಿನೋದ! ಆದರೆ ಪಿಶಾಚಿಗಳಿದ್ದರೆ ಮಾವ ಹೇಗೆ ಅಲ್ಲಿ ಕುಳಿತಿರುವುದು ?

ಅಂಗಳಕ್ಕೆ ಇಳಿಯುವ ಮೊದಲೊಮ್ಮೆ ಮಾವನ ನೆನಪು ಬಂತು. ಸೋಗೆಯ ದಂಟನ್ನು ಕೈಯಲ್ಲಿ ಹಿಡಿದು ಕಾದು ಕುಳಿತಿದ್ದರೆ?

ಒಂದು ದಿನ ಅವರನ್ನು ಕೊಂದು ಹಾಕಬೇಕು. ಅಂಗಳದಲ್ಲಿ ಎಲ್ಲಿಯಾದರೂ ನಾನು ಕಂಡುಬಂದರೆ ಮನೆ ನಡುಗುವಂತೆ ಗರ್ಜನೆ :

"ಅಚ್ಚುತ್ತಾ...."

ಅಷ್ಟರಲ್ಲೇ ಅಚ್ಯುತ್ತನ್ ನಾಯರ್ ಓಡಿ ಬಂದಾರು. ಅಂಗಳಕ್ಕೆ ಇಳಿಯಬಾರದೆಂದಲ್ಲವೆ ಹೇಳಿರುವುದು? ಅವರು ದಪ್ಪವಾದ ಬೆರಳುಗಳಿಂದ ತೋಳನ್ನು ಹಿಡಿದರೆ ಅಸಹ್ಯವೆನಿಸುವುದು. ಕಪ್ಪೆಯನ್ನು ತುಳಿದಂತೆ. ಅಂಗಳದಲ್ಲೇ ಹೊಡೆಯಲಿಕ್ಕಿಲ್ಲ. ಮುತ್ತಜ್ಜಿ ನೋಡುತ್ತಿದ್ದರೆ ಹೊಡೆಯಲಿಕ್ಕಿಲ್ಲ. ಒಳಗಿನ ಕೋಣೆಗೆ ಬಂದರೆ ನೋಡಬೇಕು ಅವರ ಪರಾಕ್ರಮ!

ಬಾಗಿಲಿನ ಮರೆಯಲ್ಲಿ ಸರಿದು ನಿಂತು ಸಂದಿನಿಂದ ಮೆಲ್ಲನೆ ಇಣಿಕಿನೋಡಿದ. ಯಾರೂ ಇರಲಿಲ್ಲ. ಮಾವ ಕಾಣಬಾರದು. ಶಂಕರನ್ ಕುಟ್ಟಿಯೂ ನೋಡಬಾರದು. ನೋಡಿದರೆ ಕೂಗಿ ಹೇಳುತ್ತಾನೆ: "ಅಪ್ಪಾ? ವೇಲಾಯುಧಣ್ಣ ಹೊರಗೆ ಬಂದಿದ್ದಾನೆ ನೋಡು"

ಅತ್ತ ನೋಡಿದರೂ ಅಷ್ಟೆ. ಮಾವನನ್ನು ಕರೆಯಲಿಕ್ಕಿಲ್ಲ. "ಓ, ಅಚ್ಯುತ್ತನ್ ನಾಯರೆ,

ಇದ್ದಾರು ಹೊರಗೆ ಬಂದಿರುವುದು ನೋಡಿದ್ದೀರಾ?"

ಕೆಲವೊಮ್ಮೆ ಅವನನ್ನೆ ಕೇಳುವುದೂ ಇದೆ: "ಎಲ್ಲಿಗೆ ಸವಾರಿ ಹೊರಟಿರುವುದು?"

ಅವರ ಬಿಳಿಯ ಕಲೆಯುಳ್ಳ ಜುಟಿ ಅಸಹ್ಯ. ನೋಡಿದರೆ ವಾಂತಿ ಬರುವುದು. ಗುಡ್ಡದ ಮೇಲಿನಿಂದ ಗುಂಡಾದ ಬೆಣಚುಕಲ್ಲು ಹೆಕ್ಕಿ ತಂದು ಅಚ್ಯುತ್ತನ್ ನಾಯರೇ ಎನ್ನುವಾಗ ಅವರ ಬಾಯಿಗೆ ತುರುಕಬೇಕು.

ಕುಟ್ಟಿ ಶಂಕರನನ್ನು ಏನು ಮಾಡುವುದು? ಅವನ ಬೋಳು ತಲೆಯ ಮೇಲೆ ಅರೆಯುವ ಕಲ್ಲನ್ನು ಹಾಕಿದರಾಯಿತು.

ಅಂಗಳಕ್ಕೆ ಬಂದು ಬಹಳ ದಿನಗಳಾದವು. ಹೊರಕ್ಕೆ ನೋಡುವಾಗ ಎಲ್ಲ ಹಳದಿಯಾಗಿ ಕಾಣುತ್ತಿದೆ. ಬೆಂಕಿಯಂತೆ ಸುಡುವ ಬಿಸಿಲು. ಹೊತ್ತು ಇಳಿದರೆ ಮಾವ ಅಂಗಳದಲ್ಲಿ ಶತಪಥ ಹಾಕುತ್ತಿರುತ್ತಾರೆ.

ಸೆಗಣಿ ಬಳಿದ ಅಂಗಳದಲ್ಲಿ ಓಣಂ ಹಬ್ಬದ ವೇಳೆಗೆ ಇಟ್ಟ ರಂಗೋಲೆ ಇನ್ನೂ ಮಾಸಿಲ್ಲ. ತೃಕ್ಕಾರಪ್ಪನ ಸುತ್ತಲೂ ಬಿಡಿಸಿದ್ದಾಗಿತ್ತು. ತೃಕ್ಕಾರಪ್ಪನನ್ನು ನೋಡುವುದಕ್ಕಿಂತ ಒಮ್ಮೆ ಹೊಸ್ತಿಲ ವರೆಗೆ ಬಂದದ್ದಕ್ಕೆ ಅಚ್ಯುತ್ತನ್ ನಾಯರ್ ಕುತ್ತಿಗೆಗೆ ಕೈಹಾಕಿ ಒಳಗೆ ತಳ್ಳಿದ್ದರು.

ಅಂಗಳದಲ್ಲಿ ಬಿದ್ದಿದ್ದ ಕಾಗದದ ತುಂಡನ್ನು ಹೆಕ್ಕಿ ತೆಗೆದು ವೇಲಾಯುಧನ್ ಉಗ್ರಾಣದ ಕಡೆಗೆ ನಡೆದ. ಕೆಳಗೆ ಗೋಡೆಗೆ ಒರಗಿಸಿ ಇಟ್ಟಿದ್ದ ಹಲಿಗೆಯ ಮೇಲೆ ತಾಳ ಬಡಿದು ತಿರುಗಿ ನೋಡಿದಾಗ ದೊಡ್ಡಮ್ಮನ ದನದ ಕರು ಮಾವಿನ ಮರದ ನೆರಳಿನಲ್ಲಿ ಮಲಗಿ ಮೆಲುಕಾಡುತ್ತಿತ್ತು.

ತಂಪಾದ ನೆರಳಿನಲ್ಲಿ ನಿಂತಿದ್ದಾಗ ವೇಲಾಯುಧನಿಗೆ ಏನೊ ಸಂಶಯ ಬಂದಿತು.

ಆಗ, ಏನನ್ನು ಯೋಚಿಸುತ್ತಿದ್ದೆ?

ಒಂದಿಷ್ಟು ತಿರುಗಾಡಿ ಬರುವುದು, ಹೀಗೆಯೆ. ಅಚ್ಯುತ್ತನಾಯರಿಗೆ ನಿದ್ದೆ. ಮಾವ ಒಳಗಿದ್ದಾರೆ. ಒಳ್ಳೇ ಸಮಯ.

ಕಲ್ಲುಗೋಡೆ ದಾಟಿದರೆ ನಂಬೂದಿರಿಯವರ ಮನೆಯಾಯಿತು. ಆದರೆ ಆ ಕಡೆ ಹೋಗಲು ಭಯವಾಗುತ್ತಿದೆ.

ಅವರ ಮೇಲಿನ ಹಿತ್ತಲಿನ ಕಾಡು ಪೊದೆಗಳ ನಡುವೆ ಯಕ್ಷಿ ಕೂದಲು ಬಿಚ್ಚಿ ಹಾಕಿಕೊಂಡು ಹೇನು ತೆಗೆಯಲು ಕುಳಿತಿರುವಳೊ ಏನೊ.

ದೇವರೇ, ಯಕ್ಷಿ ಕಾಣಿಸಬಾರದು. ಚಿಕ್ಕ ಮಕ್ಕಳ ರಕ್ತ ಹೀರಿ ಶವದಂತೆ ಮಾಡಿ ಎಸೆದು ಬಿಡುತ್ತಾಳಂತೆ. ದೊಡ್ಡವರಿಗೂ ಉಪದ್ರವ ಕೊಡುತ್ತಾಳೋ ಏನೋ. ಬಹಳ ದೊಡ್ಡವನಾಗಿದ್ದೇನೆ ಬಾಗಿಲು ದಾಟುವಾಗ ಬಗ್ಗಿ ನಡೆಯದಿದ್ದರೆ ಹಣೆಗೆ ಪೆಟ್ಟು ಬೀಳುವುದು. ಎಷ್ಟು ಎತ್ತರ ಬೆಳೆದಿದ್ದೇನೆ! ಮುಖದಲ್ಲಿ ತುಂಬ ರೋಮವಿದೆ. ಅವನು ಮುಖದ ಮೇಲೆ ಕೈಯಾಡಿಸಿದ. ಎಂಥಾ ತುರಿಕೆ...ದೊಡ್ಡ ಮನುಷ್ಯನಾದರೂ ಯಕ್ಷಿ ಎದುರಿಗೆ ಬಂದು ಬಿಟ್ಟರೆ ಏನು ಮಾಡಲಾದೀತು?

ಒಂದು ಮೊಲೆಯನ್ನು ಹೆಗಲ ಮೇಲೆ ಹಾಕಿಕೊಂಡು ಯಕ್ಷಿ ಬಿರುಗಾಳಿಯಂತೆ ಓಡಿ ಬರುವಳಂತೆ. ಅಯ್ಯೋ, ಅದು ಕಾಣುವಂತಾಗದಿರಲಿ ....ಸುಮ್ಮನೆ ನಿಂತಿರುವಾಗ ಬಂದರೆ? ಹೊಲಸು ಕೈಯಲ್ಲಿದ್ದರೆ ಸರಿ. ಹೊಲಸು ಎಸೆದುಬಿಟ್ಟರೆ ಯಕ್ಷಿ ಓಡಿಹೋಗುವಳು.

ಈ ಉಪಾಯ ತಿಳಿಸಿಕೊಟ್ಟವರು ಯಾರು?

ತಂದೆಯ ಮನೆಯಲ್ಲಿ ಕೆಲಸಕ್ಕಿದ್ದ ಆ ಹೆಂಗಸೆ? ಬಹಳ ದಿನಗಳ ಹಿಂದೆ. ಆದರೂ ನೆನಪಿದೆ. ಲಂಗೋಟಿ ಉಟ್ಟು ಓಡಾಡುತ್ತಿದ್ದಾಗ? ಅಲ್ಲ, ಹೊಳೆಯ ದಡದಲ್ಲಿ ಉಸುಕಿನ ಮೇಲೆ ಆಟವಾಡುತ್ತಿದ್ದಾಗಲೊ? ದೇವಕಿ ಅಕ್ಕನೊ, ಅಲ್ಲ ತಾಯಿಯೊ? ಅಮ್ಮ ಈಗ ಇಲ್ಲವಲ್ಲಾ? ಬನದ ಆಚೆಗಿರುವ ಪೊದೆಗಳು ಬೆಳೆದು ನಿಂತ ಮಣ್ಣಿನಲ್ಲಿ ಇದ್ದಾಳೆ ಈಗ ಅಮ್ಮ. ಕಿವಿ ಕತ್ತರಿಸಿ ಹೋದ ಮೀನಾಕ್ಷಿ ಅಕ್ಕ ಅಮ್ಮ ಚಾವಡಿಯಲ್ಲಿ ಕುಳಿತು ಮಾತನಾಡುವಾಗ ಹೇಳಿದ್ದೇನೊ.

ಅಲ್ಲ ಅಮ್ಮ ಕುಟ್ಟಿಯೆ!

ಆಗ ಆಳಳ ಕರುವಿನ ಬೆನ್ನಮೇಲೆ ಎಲ್ಲಿಂದಲೊ ಒಂದು ಕಾಗೆ ಹಾರಿ ಬಂದು ಕುಳಿತಿತು. ಕಾಗೆ ಬರೆ ಕಳ್ಳ. ಅವಳಿಗಿರುವುದು ಒಂದು

ಕಣ್ಣು.

ಅದೆಲ್ಲಾ ವೇಲಾಯುಧನಿಗೆ ಗೊತ್ತು. ಚಿಕ್ಕಂದಿನಲ್ಲಿ ಕಲಿತ "ಕಾಕ ಕುಯಿಲೆ ಕರಿಂ ಗುಯಿಲೆ" ಎಂಬ ಪದ್ಯವೂ ನೆನಪಿದೆ. ಅವನಿಗೆ ಬಹಳಷ್ಟು ವಿಷಯಗಳ ಜ್ಞಾನವಿದೆ ಆದರೂ ಅವನು ಏನು ಮಾಡಿದರೂ ಏನನ್ನು ಹೇಳಿದರೂ ಅಷ್ಟೆ: "ಬುದ್ಧಿ ಸರಿ ಇಲ್ಲದಾತ, ಹಿಂದಿನ ಜನ್ಮದ ಕರ್ಮ ಫಲ."

"ಆ ತಾಯಿ ಕಣ್ಣು ಮುಚ್ಚಿದ್ದು ಒಳ್ಳೇದಾಯಿತು., ಇದನ್ನೆಲ್ಲಾ ನೋಡದೆ ಹೋಗಿಬಿಟ್ಟಳು."

ಇವರಿಗೆಲ್ಲಾ ತನ್ನಲ್ಲಿ ದ್ವೇಷವಿದೆ. ಅದು ವೇಲಾಯುಧನಿಗೆ ತಿಳಿದಿದೆ. ಯಾರೊ ಮೆಲ್ಲನೆ ಕರೆದರು,

"ವೇಲಾಯುಧಣ್ಣಾ."

ಅವನು ಬೆಚ್ಚಿ ಬಿದ್ದ. ಯಕ್ಷಿಯಾಗಿರಬಹುದೆ? ಆದರೆ ಯಕ್ಷಿ 'ವೇಲಾಯುಧಣ್ಣಾ' ಎಂದು ಕರೆಯಲಿಕ್ಕಿಲ್ಲ. ಅಯ್ಯೋ, ನಾನೆಂಥ ಮೂರ್ಖ! ತಿರುಗಿ ನೋಡಿದಾಗ ಪಕ್ಕದ ಕೋಣೆಯ ಕಿಡಿಕಿ ಬಾಗಿಲು ತೆರೆದಿತ್ತು. ಸರಳುಗಳನ್ನು ಹಿಡಿದುಕೊಂಡು ಅಮ್ಮುಕುಟ್ಟಿ ನಿಂತಿದ್ದಳು. ಯಕ್ಷಿಯಲ್ಲ. ಅಮ್ಮುಕುಟ್ಟಿಯೆ. ಆದರೂ ಮೊದಲಿಗೆ ಹೆದರಿಬಿಟ್ಟಿದ್ದ. ಅದನ್ನೇ ಯೋಚಿಸಿದಾಗ ವೇಲಾಯುಧನ್ ಗಹಗಹಿಸಿ ನಕ್ಕ. ನಾನೆಂಥ ಮೂಢ!

ಮದರಂಗಿ ಹಚ್ಚಿದ ಉಗುರುಗಳು ಕಾಣಿಸಿದವು. ತೊಂಡೆ ಹಣ್ಣಿನಂತಿವೆ ಅವಳ ಬೆರಳುಗಳು. ಮಿನುಗುತ್ತಿರುವ ಹಳದಿ ಜರಿ ಕುಪ್ಪಸದ ಮೇಲೆ ಕಪ್ಪು ತಲೆಗೂದಲು ಹರಡಿಕೊಂಡಿದೆ. ಅಮ್ಮುಕುಟ್ಟಿಯನ್ನೇ ನೋಡುತ್ತಾ ನಿಂತಿದ್ದಾಗ ಅವಳು ಇನ್ನೊಮ್ಮೆ ಕರೆದಳು.

"ವೇಲಾಯುಧಣ್ಣಾ."

ಏನು ಹೇಳಬೇಕೆಂದೇ ತಿಳಿಯಲಿಲ್ಲ. ಮಾವಿನ ಹಣ್ಣಿನ ಕೆನ್ನೆಗಳಿಂದ ದೃಷ್ಟಿಯನ್ನು ಸರಿಸುವುದೇ ಆಗಲಿಲ್ಲ.

"ವೇಲಾಯುಧಣ್ಣಾ, ಹೀಗೇಕೆ ನೋಡುತ್ತೀ?"

"ಊಂ - ಊಂ"

"ಆದೇಕೆ ವೇಲಾಯುಧಣ್ಣಾ, ಅಂಗಳದಲ್ಲಿ ನಿಂತಿದ್ದೀ?"

"ಊಂ - ಊಂ."

"ವೇಲಾಯುಧಣ್ಣಾ, ಹೊರಗೆ ತಿರುಗಾಡಬೇಡ."

ಅವನು ಮೆಲ್ಲನೆ ಕಣ್ಣು ರೆಪ್ಪೆಗಳನ್ನು ಮೇಲಕ್ಕೆತ್ತಿದ. ಅಮ್ಮುಕುಟ್ಟಿಯ ಕಣ್ಣುಗಳನ್ನು ಸಂಧಿಸಿದಾಗ ಕಾರಣವಿಲ್ಲದೆ ಗಾಬರಿಬಿದ್ದ.

ಹಳದಿ ಬಣ್ಣದ ಸಿಲ್ಕ್ ಕುಪ್ಪಸದ ಕೆಳಗೆ ಅವಳ ಹೊಟ್ಟೆ ಕಾಣಿಸುತ್ತಿದೆ ಅವನಿಗೆ ನಾಚಿಕೆ ಎನಿಸಿತು.

"ಅಚ್ಯುತನ್ ನಾಯರ್ ಕಾಣುವ ಮೊದಲೆ—"

ಅಮ್ಮುಕುಟ್ಟಿ ಏನನ್ನೊ ಹೇಳಲು ಇಚ್ಛಿಸಿದಳು.

ಆಗ ಅಚ್ಯುತನ್ ನಾಯರ ಒರಟು ಕೈಯನ್ನು ಅವನು ಮರೆತಿದ್ದ. ಸರಳುಗಳನ್ನು ಹಿಡಿದಿದ್ದ ಈ ಕೆಂಪು ಬೆರಳುಗಳನ್ನು ಒಮ್ಮೆ ಮುಟ್ಟಿ ನೋಡಿದರೆ?

"ಮೊಳಕಾಲಿಗೆ ಗಾಯವಾದದ್ದು ಹೇಗೆ?"

ಅವನು ಏನನ್ನೂ ಹೇಳಲಿಲ್ಲ.

ಆ ಕೆಂಪು ಬೆರಳುಗಳು......ತೊಂಡೆ ಹಣ್ಣಿನ ಬಣ್ಣದ ಬೆರಳುಗಳು....

"ನಿನ್ನೆ ಅಚ್ಯುತ ನಾಯರ್ ಹೊಡೆದದ್ದೇಕೆ?"

ಅದಕ್ಕೂ ಉತ್ತರ ಹೇಳಲಿಲ್ಲ.

"ಹೀಗೆ ಯೋಚಿಸುತ್ತಿರುವುದಾದರೂ ಏನು?"

ವೇಲಾಯುಧನ್ ಸುಮ್ಮನಿದ್ದ. ಅಮ್ಮುಕುಟ್ಟಿ ಹಿಂದಕ್ಕೆ ತಿರುಗಿ ನಿಂತು ಏನನ್ನೋ ನೋಡಿದಳು. ಅಮ್ಮ ಬರುತ್ತಿದ್ದಾಳೇನೊ? ವೇಲಾಯುಧನ್ ಇನ್ನೂ ಯೋಚಿಸುತ್ತಲೇ ಇದ್ದ.

ಒಮ್ಮೆ ಮುಟ್ಟಿದರೆ....ಒಮ್ಮೆ ಮುಟ್ಟಿದರೇನಂತೆ?—

"ವೇಲಾಯುಧಣ್ಣನ ಕಾಯಿಲೆ ಎಲ್ಲಾ ವಾಸಿಯಾದೀತು."

"ಊಂ."

"ಅಚ್ಚುತ್ತನ್ ನಾಯರ್ ಹೇಳಿದಂತೆ ಕೇಳುತ್ತಿರಬೇಕು."

"ಊಂ."

"ಇಲ್ಲವಾದರೆ ಸುಮ್ಮನೆ ಪೆಟ್ಟು ತಿನ್ನಬೇಕಾದೀತು."

"ಊಂ."

"ಮೊನ್ನೆ ರಾತ್ರಿ ಬೊಬ್ಬೆ ಹಾಕಿದ್ದೇಕೆ?"

"ಊಂ, ಊಂ."

ಅಮ್ಮು ಕುಟ್ಟಿ ಕಿಟಕಿಯಿಂದ ಕೈತೆಗೆದಾಗ ಅವನಿಗೆ ಸಂಕಟವೆನಿಸಿತು. ಅವಳು ಬೆನ್ನು ತಿರುಗಿಸಿ ನಿಂತು ಉಟ್ಟಿದ್ದ ಬಟ್ಟೆಯನ್ನು ಬಿಚ್ಚಿ ಜಾಡಿಸಿ ಪುನಃ ಬಿಗಿಯಾಗಿ ಸುತ್ತಿಕೊಂಡು ಕಿಟಕಿಯ ಮೇಲೆ ಕೈಇಟ್ಟಾಗ ಸಂತೋಷವೆನಿಸಿತು.

ಹೆದರಿ ಹೆದರಿಕೊಳ್ಳುತ್ತಲೆ ಪ್ರಶ್ನಿಸಿದ್ದ!

"ಒಮ್ಮೆ ಮುಟ್ಟಲೇ?"

ಆಗ ಅವಳ ಮುಖದಲ್ಲಿ ನಗು ಅರಳಿತು. ಗೋಪಿಯೂ ಶಂಕರನ್ ಕುಟ್ಟಿಯೂ ಅವನನ್ನು ಅಪಹಾಸ್ಯ ಮಾಡಿ ನಗುವುದಿದೆ. ಆದರೆ ಅಮ್ಮು ಕುಟ್ಟಿ ಹಾಗಲ್ಲ. ಅವಳು ನಕ್ಕಾಗ ಅವನಿಗೆ ಅಳು ಬರುವ ಹಾಗಾಯಿತು. ಅವನು ಮೆಲ್ಲನೆ ಅವಳ ಬೆರಳುಗಳನ್ನು ಮುಟ್ಟಿದ.

"ವೇಲಾಯುಧಣ್ಣ, ಹೋಗು. ಅಚ್ಚುತ್ತನ್ ನಾಯರ್ ಈಗ ಬಂದಾರು." ಅವನು ಕದಲಲಿಲ್ಲ.

"ಹೋಗಿ ಅಂತಾ...."

ಅವಳು ಗಾಬರಿ ತೋರಿಸಿದಳು. ಅವನು ಆಗಲೂ ಅಲ್ಲಿಯೇ ನಿಂತಿದ್ದ. ಅಟ್ಟದ ಮೇಲಕ್ಕೆ ಏಣಿಹತ್ತಿ ಅವಳು ಹೋಗುವುದನ್ನು ನೋಡುತ್ತ ವೇಲಾಯುಧನ್ ಇನ್ನೂ ಸ್ವಲ್ಪ ಹೊತ್ತು ಹಾಗೆಯೇ ನಿಂತಿದ್ದ.

ಮನೆಯ ಹಿಂದಿನ ಕಿರುಹಾದಿಯಲ್ಲಿ ಮುಂದಕ್ಕೆ ನಡೆದಾಗ ಏನನ್ನೊ ಗುಣುಗುಣಿಸುತ್ತಿದ್ದ. ಹೆಗಲಮೇಲಿನಿಂದ ಬಿದ್ದ ಗುಂಗುರುಕೂದಲು, ಹಳದಿ ಕುಪ್ಪಸದ ಮೇಲೆ ಹರಡಿಕೊಂಡಿದೆ. ಮಾವಿನಹಣ್ಣಿನ ಬಣ್ಣದ ಕೆನ್ನೆಗಳು— ಅಮ್ಮು ಕುಟ್ಟಿ ನೋಡಲು ಎಷ್ಟು ಚಂದ. ತನ್ನ ಸೊಂಟಕ್ಕೆ ಸುತ್ತಿದ್ದ ಬಟ್ಟೆಯನ್ನು ಬಿಚ್ಚಿನೋಡಿದ. ವೇಲಾಯುಧನಿಗೆ ನಾಚಿಕೆ ಎನಿಸಿತು. ಎಂಥಾ ಹೊಲಸು....ಕೆಸರು ನೀರಿನ ಹಾಗಿದೆ. ಮೈತುಂಬ ಮಣ್ಣು ಮೆತ್ತಿದೆ. ಮುಖದಲ್ಲಿ ಕೂದಲು ಗಡ್ಡ ಬೆಳೆದು ನಿಂತಿದೆ. ಇನ್ನು ಹಜಾಮ ಗೋವಿಂದ ಬಂದರೆ ಅವನ ಮುಂದೆ ಹೋಗಿ ಕೂಡಲು ಬೇಡವೆನ್ನುವುದಿಲ್ಲ.

ಅಮ್ಮು ಕುಟ್ಟಿಯ ಮೈಯಲ್ಲಿ ಒಂದಿಷ್ಟೂ ಕೊಳೆ ಇಲ್ಲ. ಕಪ್ಪು ಅಂಚಿನ ಅವಳ ಬಟ್ಟೆ ಒಳ್ಳೇ ಶುಭ್ರವಾಗಿದೆ. ಅವಳು ಕಿಟಕಿಯ ಬಳಿ ನಿಂತಾಗ ಕೇದಿಗೆಯ ಪರಿಮಳವಿತ್ತು. ವೇಲಾಯುಧನ್ ತನ್ನ ಮೊಣಕೈಯನ್ನು ಮೂಸಿ ನೋಡಿದ. ಇಸ್ಸಿ! ಕೋಳಿ ಹಿಕ್ಕೆಯ ದುರ್ಗಂಧ! ವಾಕರಿಕೆ ಬರುತ್ತಿದೆ. ಬೆರಳು ಮುಟ್ಟಿದಾಗ ಅಮ್ಮು ಕುಟ್ಟಿಗೆ ಹೇಸಿಕೆ ಎನಿಸಿರಬಹುದೆ? ಅದನ್ನು ಅತ್ತೆ ನೋಡಿದ್ದರೆ ಸಾಕಿತ್ತು. ಯಾರ್ಯಾರಿಂದೆಲ್ಲಾ ಪೆಟ್ಟು ಬೀಳುತ್ತಿತ್ತೇನೊ.

ಎಲ್ಲರ ತಲೆಯೂ ಸಿಡಿದು ಬೀಳಲಿ. ಮಾವ, ಅಚ್ಚುತ್ತನ್ ನಾಯರ್, ಅತ್ತೆ, ದೊಡ್ಡಮ್ಮ ಎಲ್ಲರದ್ದೂ. ಶಂಕರನ್ ಕುಟ್ಟಿಯೂ ಹಾಳಾಗಲಿ. ಅವನು ಸುಮ್ಮನೆ ಹಾಸ್ಯ ಮಾಡುತ್ತಾನೆ. ಜೊತೆಯವರಿಗೆ ಕೂಗಿ ಹೇಳುತ್ತಾನೆ. "ಈ ವೇಲಾಯುಧಣ್ಣನಿಗೆ ಹುಚ್ಚು." ಅವನ ತಲೆಯೂ ಸಿಡಿದು ಬೀಳಲಿ!

ಅಮ್ಮು ಕುಟ್ಟಿ ಹಾಸ್ಯಮಾಡುವುದಿಲ್ಲ. ದೇವರೇ ಅವಳಿಗೆ ಒಳ್ಳೆಯದನ್ನು ಕೊಡು.

ಕಿರುಹಾದಿಯ ಇಬ್ಬದಿಗಳಲ್ಲೂ ಬಿದಿರಿನ ಕಾಡುಗಳು. ಕೆಳಗೆ ಬಸವಿದೆ. ಬಳ್ಳಿಗಳು ಹಾವಿನಂತೆ ಒಂದನ್ನೊಂದು ಸುತ್ತಿಕೊಂಡಿವೆ. ಹಗಲು ಹೊತ್ತು. ಹೆದರಬೇಕಾಗಿಲ್ಲ. ರಾತ್ರಿಯಲ್ಲಿ ಪಿಶಾಚಿಗಳಿವೆಯಾದ್ದವು. ಕೆಂಡವನ್ನು ಜಗಿಯುತ್ತಾ ಕುಣಿಯುವ ಪಿಶಾಚಿಗಳು.

ಕಿರುಹಾದಿ ಗದ್ದೆದ ಇಳಿಜಾರನ್ನು ಮುಟ್ಟುವುದು. ಅಲ್ಲಿ ದೊಡ್ಡ ಮಾವಿನ ಮರದ ಕೆಳಗೆ ಹೊಲತಿಯರು ನೀರು ಸೇದುತ್ತಿದ್ದರು. ವೇಲಾಯುಧನ್ ಅವರನ್ನು ನೋಡಲಿಲ್ಲ.

"ಚಿಕ್ಕಧಣಿಗಳು ಎಲ್ಲಿಗೆ ಹೊರಟಿರುವುದು?"

ಅವನು ಮಾತನಾಡಲಿಲ್ಲ. ಅವರಿಗೆ ಅದರಿಂದೇನಾಗಬೇಕಾಗಿದೆ?

ಹಾದಿಯ ಪಕ್ಕದಲ್ಲಿ ಕೆಂಪುಮಣ್ಣು ಕಡಿದು

ಕೆಗೆದು ತೋಡಿದ್ದ ಗುಂಡಿಯಲ್ಲಿ ಒಂದು ಗುಂಡಾದ ಕಲ್ಲನ್ನು ಬೀಸಿ ಎಸೆದು ಅವನು ಮೆಲ್ಲಮೆಲ್ಲನೆ ಗುಡ್ಡವನ್ನೇರಿದ. ಹೋತಿಯರು ಅವನನ್ನು ಕುರಿತೇ ಮಾತನಾಡುತ್ತಿದ್ದರು. ಅವನು ಗಮನಿಸದೆ ಮೇಲೆ ನಡೆದುಹೋದ. ಗುಡ್ಡದ ಇಳಿಜಾರಿನಲ್ಲಿ ಒಣಗಿದ ಕನ್ನಂಡಳಿ ಗಿಡಗಳಿದ್ದವು. ಮೇಲಿನ ದೊಡ್ಡ ಕಪ್ಪು ಬಂಡೆಕಲ್ಲಿನ ಮೇಲೆ ನಿಂತು ನೋಡಿದಾಗ ಏನದ್ಭುತ! ಕೆಳಗೆ ಹಿತ್ತಿಲು ಪಕ್ಕದಲ್ಲಿ ಅಡಿಕೆ ತೋಟ, ಅದರ ಮಧ್ಯೆ ಕೆಂಪು ಹಂಚಿನ ಮನೆಯ ಮೇಲ್ಛಾವಣಿ, ಎಲ್ಲವೂ ಕಾಣಿಸಿತು.

ದೂರದಲ್ಲಿ ಹೊಲಗಳು, ಅದರಾಚೆಗೆ ಹೊಳೆ, ಮಳಲ ರಾಶಿ.

ಉಸುಕಿನ ರಾಶಿ ವೇಲಾಯುಧನ್ ಮನಸ್ಸಿನಲ್ಲಿ ಕೆಲವು ಮಾಸಿಹೋದ ನೆನಪುಗಳನ್ನು ಮೂಡಿಸಿತು.

ಸೌತೆಯ ಬಳ್ಳಿ ಹರಡಿಕೊಂಡಿದ್ದ ಹೊಯಿಗೆ ನೆಲ....ಪಸಕರುಗಳ ಮೈತೊಳೆಸುತ್ತಿದ್ದ ಹರಿಜನ ಹುಡುಗರು....ಮೀನು ಹಿಡಿಯುವ ಬೆಸ್ತರ ದೋಣಿಗಳು. ಅಮ್ಮ ಹೇಳುತ್ತಿದ್ದಳು, "ನೀರಿಗಿಳಿಯಬೇಡಪ್ಪಾ ಮಗಾ, ಮೊಸಳೆಗಳಿದ್ದಾವು."

ಆ ಹೊಯಿಗೆ ನೆಲದಲ್ಲಿ ಒಮ್ಮೆ ತಲೆಕೆಳಗಾಗಿ ಕುಸ್ತಿ ಮಾಡುವ ಮನಸ್ಸಾಗಿತ್ತು. ಆದರೆ ಅಚ್ಚುತ್ತನ್ ನಾಯರ್ ಒಪ್ಪಬೇಕಲ್ಲಾ, ಮಾವ ಕೂಡಾ ಒಪ್ಪುವುದಿಲ್ಲ. ಯಾರೂ ಒಪ್ಪಲಾರರು.

ಮುತ್ತಜ್ಜಿ ಮಾತ್ರ ಬೇಡವೆನ್ನುವುದಿಲ್ಲ. ಆದರೂ ಹೇಳುತ್ತಾಳೆ. "ವೇಲಾಯುಧಾ, ಅದೆಲ್ಲ ಸರಿ, ಆದರೆ ನಿನ್ನ ಕಾಯಿಲೆ ಒಮ್ಮೆ ವಾಸಿಯಾಗಲಿ...."

ಯಾವುದಕ್ಕೂ ಇದೇ ಮಾತು. "ಕಾಯಿಲೆ ವಾಸಿಯಾಗಲಿ ಆಗಲಿ" ಕಾಯಿಲೆ ಆಗಿರುವುದು ಇವರಿಗೇ. ನನಗಲ್ಲ. ಅವನಿಗೆ ಸಿಟ್ಟು ಬಂತು. ಇವರನ್ನೆಲ್ಲಾ ಕೊಂದುಹಾಕಿದರೇನಂತೆ? ಮನೆಗೇ ಬೆಂಕಿ ಇಟ್ಟುಬಿಡುವುದು. ಹಾಗಾದರೆ ಎಲ್ಲರೂ ಸತ್ತುಬಿಡುವರಲ್ಲಾ. ಎಲ್ಲರೂ ಬೇಡ. ಅಮ್ಮುಕುಟ್ಟಿ ಉಳಿಯಬೇಕು.

ಇಬ್ಬರೇ ಉಳಿದಾಗ ವಾಸಮಾಡುವುದಾದರೂ ಎಲ್ಲಿ? ಮನೆ ತುಂಬಾ ಪ್ರೇತಗಳಿರುತ್ತವೆ. ಜಗಲಿಯಲ್ಲಿ, ಚಾವಡಿಯಲ್ಲಿ, ಒಳಗಿನ ಕೋಣೆಯಲ್ಲಿ....ಅದೆಲ್ಲಾ ಮುತ್ತಜ್ಜಿಗೆ ತಿಳಿದಿದೆ.

ಚಾವಡಿಯಲ್ಲಿ ಚಾತು ಮಾವ ರಾತ್ರಿ ಅಳಿಯಂದಿರು ಬಡಿಸಿದ ಕೋಳಿ ಪಲ್ಯ ತಿಂದು ಮಲಗಿದವರು ಮಧ್ಯರಾತ್ರಿಗೆ 'ನೀರು ನೀರು' ಎಂದು ಬೊಬ್ಬಿಟ್ಟು ಸತ್ತೇ ಹೋದರು. ಮಾಂಸದಲ್ಲಿ ಪಾಷಾಣ ಸೇರಿಸಿದ್ದರಂತೆ.

ಈಗಲೂ ಚಾವಡಿಯಿಂದ ನೀರಡಿಕೆ ಸಹಿಸದೆ ಮರಣ ಸಂಕಟದಿಂದ ಚಾತು ಮಾವ ಬೊಬ್ಬೆ ಹಾಕುವುದಿದೆಯಂತೆ. ವೇಲಾಯುಧನ್ ರಾತ್ರಿಯಿಡೀ ಕಿವಿಗೊಟ್ಟು ಮಲಗುತ್ತಿದ್ದ.

ಮನೆ ಸುಟ್ಟು ಬೂದಿಯಾದರೆ ಒಳಗಿನ ಕೋಣೆಯಿಂದ ಕೊಪ್ಪರಿಗೆ ಸಿಗುವುದು. ಅದರಲ್ಲಿ ತುಂಬ ಚಿನ್ನಬೆಳ್ಳಿ ಇರುವುದು. ಕೊಪ್ಪರಿಗೆ ಸಿಕ್ಕಿದರೆ ಒಂದು ದೊಡ್ಡ ಮನೆ ಕಟ್ಟಿಸುವುದು.

ಒಂದು ರಾತ್ರಿ ನೋಡುವಿರಂತೆ, ಮನೆಗೆ ಬೆಂಕಿ. ಚಿನ್ನದ ಕೊಡ ಎತ್ತಿಕೊಂಡು ಗುಡ್ಡದ ತುದಿಗೆ ಒಂದೇ ಓಟ. ಜರಿಯ ಉಡುಪು ಧರಿಸಿ ರಾಜಕುಮಾರನಂತೆ ತಿರುಗಾಡುವುದನ್ನು ನೋಡಿದರೆ ಅಮ್ಮುಕುಟ್ಟಿಗೆ ಆಶ್ಚರ್ಯವೆನಿಸಬೇಕು.

ಒಳಗಿನ ಕೋಣೆಯನ್ನೇ ಮೊದಲು ಸುಡಬೇಕು. ಮಾವ ಬೆಂದು ಸತ್ತುಹೋಗುತ್ತಾರೆ. ಅಚ್ಚುತ್ತನ್ ನಾಯರನ್ನು ಕರೆದುತಂದು ಕಾವಲು ಇಟ್ಟಿದ್ದಾರೆ. ಹೊರಗೆ ಹೋಗಿಬಿಟ್ಟರೆ ಕಾಲು ಕಡಿದುಹಾಕುತ್ತಾರಂತೆ. ಮೊನ್ನೆ ಶಂಕರನ್ ಕುಟ್ಟಿಯನ್ನು ಮುಟ್ಟಿಬಿಟ್ಟೆನೆಂದು, ಸೊಗೆಯ ದಂಟಿನಿಂದ ಹೊಡೆದರಲ್ಲಾ ಅಚ್ಚುತ್ತನ್ ನಾಯರ್. ಬೆಂಕಿಬಿದ್ದಾಗ ಮಾವ ಚಿನ್ನದ ಕೊಡ ಹುಡುಕುತ್ತಾರೆ. ಅದು ಎಲ್ಲಿರುವುದಂತ ಯಾರಿಗೂ ತಿಳಿಯದು. ತಾತಮಾವ ಚಿನ್ನದ ಕೊಡ ಹುಗಿದಿಟ್ಟಿದ್ದ. ಬಹಳ ಹಿಂದಿನ ಮಾತು. ಮುತ್ತಜ್ಜಿಯ ಮುತ್ತಜ್ಜಿ ಚಿಕ್ಕ ಹುಡುಗಿಯಾಗಿದ್ದಾಗ ನಡೆದ ಕತೆ. ತಾತಮಾವ ಭತ್ತದ ವ್ಯಾಪಾರ ಮಾಡಿ ಹಣ ಸಂಪಾದಿಸಿದ. ಚಿನ್ನದ ನಾಣ್ಯಗಳನ್ನು

ಕೊಡಪಲ್ಲಿಟ್ಟು ಹುಗಿದಿಟ್ಟ. ತಾಶಮಾವನಿಗೆ ಹುಚ್ಚು ಹಿಡಿಯಿತು. ಕೊಡ ಹುಗಿದಿಟ್ಟದ್ದು ಎಲ್ಲೀಂತ ಮಾವನಿಗೆ ನೆನಪಿರಲಿಲ್ಲ. ಗುದ್ದಲಿ ಹಿಡಿದು ನೆಲವನ್ನು ಅಗೆದೂ ಅಗೆದು ಕೊನೆಗೊಮ್ಮೆ ತೀರಿಕೊಂಡ.

ಈಗಲೂ ರಾತ್ರಿ ನೆಲವನ್ನು ಗುದ್ದಲಿಯಿಂದ ಅಗೆಯುವ ಸದ್ದು ಕೇಳಿಸುವುದಂತೆ.

ಪಾಪ, ತಾಶಮಾವನಿಗೆ ಹುಚ್ಚು ಹಿಡಿಯಿತು. ಹುಚ್ಚು ಹಿಡಿದರೆ ಎಲ್ಲಾ ಮರೆತುಹೋಗುವುದಂತೆ. ವೇಲಾಯುಧನಿಗೆ ಯಾವುದೂ ಮರೆತು ಹೋಗಿಲ್ಲ. ಅವನಿಗೆ ಎಲ್ಲಾ ನೆನಪಿದೆ. ತಾಯಿಯ ನೆನಪು. ಬನದ ಆಚೆಗಿನ ನೆಲದಲ್ಲಿ ಅವಳನ್ನು ಮಣ್ಣುಮಾಡಲಾಗಿದೆ. ಚಿಕ್ಕಂದಿನಲ್ಲಿ ಅಮ್ಮುಕುಟ್ಟಿಯ ಜೊತೆಗೆ ಸ್ಕೂಲಿಗೆ ಹೋದದ್ದು ನೆನಪಿದೆ. ಅಂಗಳದಲ್ಲಿ ಮಾಪಿಳ್ಳೆಯವರು ಹುಚ್ಚುನಾಯಿಯನ್ನು ಹೊಡೆದು ಕೊಂದದ್ದು, ಬಾಗಿಲಿನೆಡೆಯಿಂದ ಅವನು ನೋಡಿ ನಿಂತದ್ದು. ಹೊರಗೆ ಬಂದು ನೋಡಿದಾಗ ಸೆಗಣಿ ಸಾರಿಸಿದ ಅಂಗಳದಲ್ಲಿ ರಕ್ತ-ಚೆಲ್ಲಿತ್ತು. ಕಣಜದ ಹುಳಗಳು ಗದ್ದೆತುಂಬ ಹಾರುತ್ತಿರುವುದನ್ನು ನೋಡಿ ಬೆಳೆದ ಪೈರುಗಳೆಡೆಯಲ್ಲಿ ಅಡಗಿ ಕುಳಿತಿದ್ದ. ಅಮ್ಮುಕುಟ್ಟಿಯೂ ಜೊತೆಗಿದ್ದಳು........ಆಗವಳು ಚಿಕ್ಕ ಹುಡುಗಿ ಇದ್ದಳು. ಇಷ್ಟು ಚೆಂದವಿರಲಿಲ್ಲ ನೋಡಲು.

ಅವನಿಗೆ ಎಲ್ಲವೂ ನೆನಪಿದೆ. ಆದರೂ ಶಂಕರನ್ ಕುಟ್ಟಿ ಹೇಳಿದ್ದ, ಗೋಪಿ ಹೇಳಿದ್ದ, ಪಕ್ಕದ ಮನೆಯ ಮಾಳು ಕೂಡಾ ಅದನ್ನೆ ಹೇಳಿದ್ದಳು. ಹುಚ್ಚಂತೆ. ಅವರಿಗೇ ಹುಚ್ಚು. ಅವರ ಅಪ್ಪನಿಗೂ ಅಮ್ಮನಿಗೂ ಹುಚ್ಚು. ಕೊಂದುಹಾಕಬೇಕು ಎಲ್ಲರನ್ನೂ. ಸುಳ್ಳು ಹೇಳಿ ಮನುಷ್ಯನಿಗೆ ಪೀಡೆ ಕೊಡುತ್ತಿದ್ದಾರೆ.

ಒಳ್ಳೇ ಹರಿತವಾದ ಒಂದು ಕಡಿಗತ್ತಿ ಬೇಕು.

ಕನ್ನಂಪಳಿ ಗಿಡಗಳೆಡೆಯಲ್ಲಿ ಮೇಯುತ್ತಿದ್ದ ಆಡಿನ ಮರಿ ತಲೆಯೆತ್ತಿ ಮೆಲ್ಲನೆ ಕೂಗಿತು.

ವೇಲಾಯುಧನ್ ಬೆಚ್ಚಿ ಬಂಡೆಯಿಂದ ಕೆಳಗಿಳಿದುಬಂದ. ನೋಡಿದಾಗ ಆಡಿನ ಮರಿ ಕಾಣಿಸಲಿಲ್ಲ. ಯಕ್ಷಿ ಆಡಿನ ಮರಿಯ ರೂಪ ತಾಳಿ ಬಂದಿರಬಹುದೆ? ಭೀತಿಯಿಂದ ಅವನು ಸುತ್ತಲೂ ಕಣ್ಣು ಹಾಯಿಸಿದ. ಬಿಸಿಲಿನಲ್ಲಿ ಅಲ್ಲಲ್ಲಿ ಕಪ್ಪು ವಿಕೃತ ರೂಪಗಳು ಎದ್ದು ನಿಂತಿರುವಂತೆ ತೋರಿತು. ಬಿಸಿಲು ಮೆಲ್ಲನೆ ಮಾಯವಾಗಿ ಗುಡ್ಡದ ಇಳಿಜಾರಿನಲ್ಲಿ ಕತ್ತಲು ತುಂಬಿತು. ಕತ್ತಲಿನಲ್ಲಿ ಕೆಂಡಗಳನ್ನು ಜಗಿಯುವ ಪಿಶಾಚಿಗಳಿವೆ. ಅವನು ವಿವಶನಾಗಿ ನಿಂತಿರುವಾಗ ಕತ್ತಲಿನಿಂದ ಆ ಗರ್ಜನೆ ಕೇಳಿಸಿತು.

"ವೇಲಾಯುಧಾ...."

ಒರಟು ಅಂಗೈ ಅವನ ಹೆಗಲಮೇಲೆ ಬಿತ್ತು.

"ನನ್ನನ್ನು ಕೊಲ್ಲಬೇಡೀಪ್ಪಾ....—ಕೊಲ್ಲಬೇಡೀ......."

"ವೇಲಾಯುಧಾ !"

"ನನ್ನನ್ನು ಕೊಲ್ಲಬೇಡೀಪ್ಪಾ........ಕೊಲ್ಲಬೇಡೀ........"

ಕಣ್ಣರೆಪ್ಪೆಗಳನ್ನು ಬಲವಾಗಿ ಮುಚ್ಚಿಕೊಂಡು ಅವನು ಬೊಬ್ಬಿಟ್ಟ.

## ೨

ಕಣ್ಣುಗಳಿಂದ ಕತ್ತಲು ನೀಗಿದಾಗ ಹೊರಗೆ ಬಾಳೆಯ ತೋಟದಲ್ಲಿ ಚಂದ್ರನ ಬೆಳಕು ಕಣ್ಣುಮುಚ್ಚಾಲೆಯಾಡುತ್ತಿತ್ತು.

ಕೋಣೆಯಲ್ಲಿ ಕತ್ತಲೆ ಇದೆ. ಚಾಪೆಯಲ್ಲಿ ಸೆಟೆದು ಕುಳಿತಾಗ ಹಣೆಯಲ್ಲಿ ಉರಿಯೂ ನೋವೂ ಇದೆ. ಗೋಡೆಗೆ ಒರಗಿ ಕುಳಿತ. ಶಬ್ದ ಚಲನೆಗಳಿಲ್ಲ. ಹೊರಗೆ ನೆರಳಿನಲ್ಲಿ ಏನೇನೊ ಚಲಿಸುತ್ತಿರುವಂತೆ ಕಾಣಿಸಿತು. ವಿಕೃತ ರೂಪಗಳು ಅಲ್ಲಲ್ಲಿ ಅಡಗಿ ನಿಂತಿವೆ. ಆದರೆ ಕೋಣೆಯೊಳಗೆ ಇದ್ದನಾದ್ದರಿಂದ ಹೆದರಬೇಕಾಗಿರಲಿಲ್ಲ. ಸಣ್ಣ ಕಿಟಕಿಯಿಂದ ಪಿಶಾಚಿಗಳು ಒಳಗೆ ಬರುವುದು ಸಾಧ್ಯವಿಲ್ಲ.

ಪಪ್ಪಾಯಿ ಎಲೆಗಳ ಎಡೆಯಿಂದ ಆಕಾಶದ ಒಂದು ತೆರೆ ಕಾಣಿಸುತ್ತಿದೆ. ಹೊಳೆಯುತ್ತಿರುವ ನಕ್ಷತ್ರಗಳು. ನೋಡುತ್ತಿರುವಂತೆಯೆ ಅವುಗಳು ಕಾಣದಾದವು. ಅವನು ಮೊಳಕಾಲುಗಳ ಮೇಲೆ ತಲೆ ಇಟ್ಟು ಕುಳಿತ. ಬೆಳಕು ಕೋಣೆಯೊಳಗೆ ಹರಿದು ಬರುವುದನ್ನೆ ಕಾದು

ಕುಳಿತ. ಹಗಲು ಬಂದರೆ ಬಾಳೆ ತೋಟದ ನಡುವಿನ ವಿಕೃತ ರೂಪಗಳು ಓಡಿ ಮರೆಯಾಗುವುವು. ಅಚ್ಯುತ್ತನಾಯರ್ ಏನು ಮಾಡುತ್ತಿರಬಹುದೆಂದು ನೋಡುವ ಮನಸ್ಸಾದಾಗ ಬಾಗಿಲು ಹಾಕಿದ್ದರು. ಸಿಟ್ಟು ಬಂತು. ಬಾಗಿಲು ಹಾಕುವುದು ಈ ವರೆಗೂ ಇರಲಿಲ್ಲ.

"ಬಾಗಿಲು ತೆರೆಯಿರಿ !"

ಅವನು ಕೂಗಿ ಹೇಳಿದ.

ನಿಶ್ಶಬ್ದ. ಅವನು ಗಟ್ಟಿಯಾಗಿ ಕೂಗಿಕರೆದ: "ಬಾಗಿಲು ತೆರೆಯಿರಿ". ಅವನು ಒಂದೇಸಮನೆ ಬಾಗಿಲ ಮೇಲೆ ತುಳಿಯಲಾರಂಭಿಸಿದ. ಮುರಿದು ಬೀಳಲಿ; ಮುರಿದು ಬೀಳಲಿ.

ಬಾಗಿಲು ತೆರೆದುಕೊಂಡಿತು.

ಅಚ್ಯುತ್ತನ್ ನಾಯರ್, ಮಾಮ ಕೂಡಾ ಇದ್ದರು. ಇಬ್ಬರನ್ನು ಒಟ್ಟಿಗೆ ನೋಡಿದಾಗ ತುಂಬ ಹೆದರಿಕೆ ಎನಿಸಿತು. ಒಬ್ಬರು ಹಿಡಿದು ನಿಲ್ಲಿಸುವುದು, ಮತ್ತೊಬ್ಬರು ಹೊಡೆಯುವುದು ಏನಾಗಿರಬಹುದು ಇವರ ಯೋಚನೆ ?

ಈಗ ಒಂದು ಕಡಿಗತ್ತಿ ಇದ್ದಿದ್ದರೆ ಒಂದೇ ಏಟು. ಎರಡು ತಲೆಗಳೂ ಉರುಳಿಬೀಳುವುವು. ತಲೆಗಳನ್ನು ಅಡಗಿಸಿಡಬೇಕು. ಒತ್ತಾಯಿಸಿ ಕೇಳಿದರೂ ಕೊಡಬಾರದು.

ಅವರ ಮುಖ ನೋಡದೆ ಸುಮ್ಮನೆ ನಿಂತಾಗ ಮಾಮ ಹೇಳಿದ : "ಏಯ್, ನೀನು ನನ್ನ ಕೈಯಿಂದ ವೃಥಾ ಏಟು ತಿನ್ನಬೇಡ."

"ಸೊಕ್ಕು ತೋರಿಸಿದರೆ ನಾನು ಎಲುಬು ನೀರು ಮಾಡಿಯೇನು ! ಇನ್ನು ಹೊರಗೆ ಕಾಲಿಡಲಿ ನೋಡುತ್ತೇನೆ."

"ಉಸ್ಸಿರೆತ್ತಬಾರದು........ಶಬ್ದ ಕೇಳಿದರೆ ನಾನು ಪೋಲೀಸಿನವರಿಗೆ ಕೊಡುತ್ತೇನೆ."

ಹಾಗಿದ್ದರೆ ಪೋಲೀಸಿನವನ ತಲೆ ಕಡಿಯಬೇಕು. ವೇಲಾಯುಧನ್ ಮನಸ್ಸಿನಲ್ಲಿಯೆ ಅಂದುಕೊಂಡ.

"ಕಡಿಗತ್ತಿ ಸಿಕ್ಕಿದರೆ ನಾನು ತಲೆ ಕಡಿದು ಹಾಕುತ್ತೇನೆ...."

ಅವನು ಮೆಲ್ಲನೆ ಗುಣಗುಟ್ಟಿದ. ಮಾಮ ಸ್ವಲ್ಪ ಸರಿದು ನಿಂತು ಅಚ್ಯುತ್ತನ್ ನಾಯರಿಗೆ ಏನನ್ನೊ ಹೇಳಿದರು. ಅಚ್ಯುತ್ತನ್ ನಾಯರ್, "ಪೋಕ್ರಿತನ ತೋರಿಸಿದರೆ ಕಪಾಳ ಒಡೆದು ಹಾಕ್ತೇನೆ ನೋಡು."

"ಬಾಗಿಲು ಹಾಕುವುದೇ ಉಳಿಯಿತು." ಮಾಮ ಅಭಿಪ್ರಾಯ ಕೊಟ್ಟರು. ಅಚ್ಯುತ್ತನ್ ನಾಯರ್ ಬಾಗಿಲು ಹಾಕಿ ಹೊರಟುಹೋದರು. ಬೆಳಿಗ್ಗೆಯೂ ಸಾಯಂಕಾಲವೂ ಅವರೇ ಹೊರಗೆ ಕೊಂಡು ಹೋಗುತ್ತಿದ್ದರು. ಮತ್ತೆಯಾರೂ ಆ ಕೋಣೆಗೆ ಬರುತ್ತಿರಲಿಲ್ಲ. ಒಮ್ಮೊಮ್ಮೆ ಬಾಗಿಲಿನಾಚೆಯಿಂದ ಮುತ್ತಜ್ಜಿಯ ಧ್ವನಿ ಕೇಳಿಸುತ್ತಿತ್ತು , "ದುರ್ವಿಧಿ.... ದುರ್ವಿಧಿ...."

ಹಗಲು ಹೊತ್ತಿನಲ್ಲಿ ಪಶ್ಚಿಮ ದಿಕ್ಕಿನ ಕಿಟಕಿಯ ಬಳಿ ಕುಳಿತುಕೊಂಡೇ ಸಮಯ ಕಳೆಯುತ್ತಿದ್ದ. ಅಲ್ಲಿದ್ದರೆ ಬಾಳೆಯ ತೋಟವೂ ಅಂಗಳದ ಮೂಲೆಯಲ್ಲಿದ್ದ ಪಪ್ಪಾಯಿ ಮರವೂ ಆಡಿನ ಗೂಡೂ ಕಾಣಿಸುವುವು.

ಪಪ್ಪಾಯಿ ಮರದ ಬುಡದಲ್ಲಿ ಶಂಕರನ್ ಕುಟ್ಟಿ, ಗೋಪಿ ಮತ್ತು ನೆರೆಮನೆಯ ಮಕ್ಕಳು ಆಟವಾಡಿಕೊಳ್ಳುತ್ತಿದ್ದರು.

ಅವರು ಕೆಲವೊಮ್ಮೆ ಕಿಟಕಿಯ ಬಳಿ ಬರುವುದಿದೆ. ತಮಾಷೆ ಮಾಡುತ್ತಾರೆ. ಒಮ್ಮೆ ಶಂಕರನ್ ಕುಟ್ಟಿ ಒಂದು ಉರುಟು ಕಲ್ಲನ್ನು ಬೀಸಿ ಎಸೆದಿದ್ದ. ಅದು ಬೆನ್ನಿಗೆ ತಾಗಿತ್ತು. ಮರುದಿನ ಅವನಪಕ್ಕೆ ಪ್ರತೀಕಾರ ಮಾಡಿದ. ಕಂಚಿನ ಗ್ಲಾಸ. ಅದು ಅಂಗಳದ ನೆಲಕ್ಕೆ ಬಿದ್ದಾಗ ಸಂತೋಷವಾಗಿತ್ತು. ಹೊರಗಿನಿಂದ ಅಳು ಕೇಳಿಸಿತು ಸ್ವಲ್ಪ ಕಳೆದು ಅಚ್ಯುತ್ತನ್ ನಾಯರ್ ಬಾಗಿಲು ತೆರೆದು ಬಂದಿದ್ದರು.

"ಮಕ್ಕಳ ಸುದ್ದಿಗೆ ಹೋದರೆ ನಿನ್ನ ಎಲುಬು ಉಳಿಯುವುದಿಲ್ಲ" ವೇಲಾಯುಧನ್ ಭಾವಿಸಿದ, ಒಂದು ಕಡಿಗತ್ತಿ ಸಿಕ್ಕಿದ್ದರೆ.......

"ಇನ್ನು ಪೋಕ್ರಿತನ ಮಾಡ್ತೀಯಾ ?"

"ಅಚ್ಯುತ್ತನ್ ನಾಯರ ತಲೆ ಕಡಿದೇನು."

"ಏನೊ ಅದು ?"

ಅವನು ಗುಣುಗುಟ್ಟಿದ. "ತಲೆ ನಾನು ತೆಗೆದೇನು"

"ನಿನ್ನ ಆಸೆ ತೀರಲಿ" ಅಚ್ಯುತ್ತನ್ ನಾಯರ್ ಕೈಮೇಲೆತ್ತಿದರು.

"ನನ್ನನ್ನು ಹೊಡೀಬ್ಯಾಡಿ........ನನ್ನನ್ನು ಹೊಡೀಬ್ಯಾಡಿ."

ಕೋಣೆಯ ಮೂಲೆಯಲ್ಲಿ ಮುದುಡಿ ನಿಂತು ಕಣ್ಣೀರಿನಿಂದ ನೆನೆದ ತುಟಿಯ ಉಪ್ಪನ್ನು ನೆಕ್ಕಿ, ಅವನು ಒಂದು ನರಳಿಕೆಯಂತೆ ಹೇಳಿದ:

"ನನ್ನನ್ನು ಹೊಡೀಬ್ಯಾಡಿ .ನನ್ನನ್ನು ಹೊಡಿಬ್ಯಾಡಿ...."

ಅಚ್ಯುತ್ತನ್ ನಾಯರ್ ಹೊರಟುಹೋದ ಬಳಿಕ ಬಿಕ್ಕಿಬಿಕ್ಕಿ ಅಳುತ್ತಾ ಕಿಟಕಿಯ ಬಳಿ ಬಂದು ಕುಳಿತಿದ್ದ.

ಹೊರಗೆ ಮಧ್ಯಾಹ್ನದ ಬಿಸಿಲನ್ನೆ ನೋಡುತ್ತ ಕುಳಿತಾಗ ಕಟ್ಟನೆ ಕತ್ತಲು ಆವರಿಸಿದಂತೆ ತೋರಿತು. ಹಳದಿ ಬಿಸಿಲು ಮತ್ತು ದಟ್ಟ ಕತ್ತಲು. ಕತ್ತಲಿನಲ್ಲಿ ಯಕ್ಷಿಗಳಿವೆ. ಪಿಶಾಚಿಗಳು.

ರಾತ್ರಿಯನ್ನೂ ಕತ್ತಲೆಯನ್ನೂ ಅವನು ದ್ವೇಷಿಸುತ್ತಿದ್ದ. ರಾತ್ರಿಯಿಡೀ ಗೋಡೆಗೆ ಒರಗಿ ಕುಳಿತ. ಅವನು ಆಲಿಸುತ್ತಿದ್ದ. ಗುದ್ದಲಿ ನೆಲಕ್ಕೆ ಬೀಳುತ್ತಿದೆಯೆ? ಚಾವಡಿಯಿಂದ ದಾಹವನ್ನು ಸಹಿಸದೆ ಯಾರಾದರೂ ಕೂಗುತ್ತಿರುವರೆ?

ಅವನಿಗೆ ಬಹಳ ಹೆದರಿಕೆ ಆಯಿತು. ಅವನು ಗೋಡೆಯ ಕಡೆಗೆ ಮುಖ ತಿರುಗಿಸಿ ಕುಳಿತುಕೊಂಡ. ಕಿಟಕಿಯಾಚೆ ಏನೊ ಶಬ್ದವಾಗುತ್ತಿದೆ. ಮೆಲ್ಲನೆ ಕತ್ತು ಹೊರಳಿಸಿ ನೋಡಿದಾಗ ನಡುಗಿಹೋದ. ತಲೆಗೂದಲು ಕೆದರಿದೆ ಬಾಯಿಯಲ್ಲಿ ಬೆಂಕಿ ಇದೆಯೆ?

"ವೇಲಾಯುಧಣ್ಣಾ"

ಭೀತಿಯಿಂದ ನೆಲದಲ್ಲಿ ಮುಖ ಹುದುಗಿಸಿ ಅವನು ಮಲಗಿದ.

"ವೇಲಾಯುಧಣ್ಣಾ, ಇದು ನಾನಲ್ಲವೆ?"

ಭಯವೂ ನೋವೂ ತುಂಬಿದ ಸ್ವರದಲ್ಲಿ ಅವನು ನರಳಿದ:

"ನನ್ನನ್ನು ಕೊಲ್ಲಬೇಡಿ....ನನ್ನನ್ನು ಕೊಲ್ಲಬೇಡೀ...."

ಕಿಟಕಿಯನ್ನು ಕದಿಕೆಯಿಂದ ಮುಚ್ಚಿದ.

ಈಗ ಹಗಲು ಹೊತ್ತಿನಲ್ಲಿ ಮಡಲಿನ ತೂತುಗಳೆಡೆಯಿಂದ ಒಳಗೆ ನುಗ್ಗಿ ಬರುತ್ತಿದ್ದ ನೀಳ ಪ್ರಕಾಶ ನಾಳಗಳು ಮಾತ್ರ ಒಳಗಿನ ಕತ್ತಲೆಯಲ್ಲಿ ಬಿರುಕುಗಳನ್ನುಂಟುಮಾಡುತ್ತಿವೆ.

ದಿನಗಳು ಕಳೆದವು. ಈಗ ಕೋಣೆಯ ಕತ್ತಲು ಅವನನ್ನು ಹೆದರಿಸುತ್ತಿಲ್ಲ. ಕತ್ತಲಿನ ಮೂಲೆಗಳಲ್ಲಿ ಮುದುಡಿ ಕುಳಿತಿದ್ದ ಕಪ್ಪಗಿನ ರೂಪಗಳು ಅವನನ್ನು ಕೊಲ್ಲಲಾರವು. ಅವರು ಅವನ ಒಡನಾಡಿಗಳು. ಅವರು ಕಿವಿಯಲ್ಲಿ ನೂರು ವಿಷಯಗಳನ್ನು ಹೇಳುತ್ತಿದ್ದರು. ಅವನು ಕಾಶ ಮಾವ ಹುಗಿದಿಟ್ಟ ಕೊಡವನ್ನು ಹುಡುಕುತಿದ್ದಾನೆ. ಗುಡ್ಡದ ಮೇಲೆ ಏಳು ಮಾಳಿಗೆಯ ಮನೆ ಇದೆ. ಅವನು ಮಾಳಿಗೆಯ ಮೇಲೆ ಕುಳಿತು ಹೊಳೆಯನ್ನೂ ಹಾಯಿಕಟ್ಟಿದ ದೋಣಿಗಳನ್ನೂ ನೋಡುತ್ತಿದ್ದಾನೆ.

ಹೊರಗಿನವರ ಮಾತುಕತೆ ಅವನಿಗೆ ಬೇಕಿಲ್ಲ.

"ಪಾಪ ಆ ಹುಡುಗನ ತಲೆಬರಹ—"

"ಆ ತಾಯಿ ಇದೊಂದನ್ನೂ ಕಾಣದೆ ತೀರಿಕೊಂಡದ್ದು ಒಳ್ಳೇದಾಯಿತು."

"ಒಬ್ಬನೇ ಒಬ್ಬ ಮಗ....ಅಯ್ಯೋ ಕಷ್ಟ."

ಅವನು ಗೋಡೆಯ ಮೇಲೆ ರೂಪಾಯಿ ನಾಣ್ಯಗಳಂತೆ ಹರಡಿದ್ದ ಬೆಳಕಿನ ಸಣ್ಣ ಪುಟ್ಟ ವೃತ್ತಗಳನ್ನು ನೋಡುತ್ತ ಇರುತ್ತಿದ್ದ. ಮೂಲೆಗಳಲ್ಲಿನ ಕಪ್ಪು ಸಂಗಡಿಗರೊಡನೆ ಏನನ್ನೊ ಹೇಳುತ್ತಿದ್ದ.

....ಒಮ್ಮೆ ಬಟ್ಟಲಿನಲ್ಲಿ ಅನ್ನವಿಟ್ಟು ಅಚ್ಯುತ್ತನ್ ನಾಯರ್ ಬಾಗಿಲು ತೆಗೆದು ಬಂದಾಗ ಅವನ ಎದುರಿಗೇ ನೆಲದ ಮೇಲೆ ವಾಂತಿಮಾಡಿದರು.

ಬಾಗಿಲು ಮುಂದೆ ಮಾಡಿ ಹೊರಟುಹೋದವರು ತಿರುಗಿ ಬಂದಾಗ ಕೈಯಲ್ಲಿ ಉದ್ದನ್ನ ಹುಣಿಸೆ ಮರದ ದಂಟಿತ್ತು.

"ಇನ್ನು ಮಾಡ್ತೀಯಾ?" ಎನ್ನುತ್ತ ಸಮೀಪ ಬಂದಾಗಲೆ ಅವನು ಬೆತ್ತ ನೋಡಿದ್ದು.

"ಹೊರಗೆ ಕುಳಿತುಕೊಳ್ಳಲು ಬಂದರೆ ಕರೆಯಬೇಕಂತ ನಿನಗೆ ಎಷ್ಟು ಬಾರಿ ಹೇಳಿದ್ದೆ!"

ಪೆಟ್ಟು ಬಿದ್ದಾಗ ಎಂದಿನಂತೆ ಅವನು ಬೊಬ್ಬೆ ಹಾಕಲಿಲ್ಲ. ದ್ವೇಷ ಹೊಟ್ಟೆಯಲ್ಲೂ ಕಣ್ಣಿನಲ್ಲೂ ಹುರಿದೇಳುತ್ತಿತ್ತು.

"ಇನ್ನು ಮಾಡ್ತೀಯಾ? ನೀನು ನೋಡಿ

ಸುಟ್ಟುಹಾಕುವುದು ಬೇಡ. ನಿನ್ನ ಹುಚ್ಚು ನಾನು ಬಿಡಿಸೇನು."

ಏಟು ಮೇಲೆ ಮೇಲೆ ಬಿತ್ತು. "ಇನ್ನು ಮಾಡ್ತೀಯಾ ?"

ಗದ್ದಲ ಕೇಳಿ ಮುತ್ತಜ್ಜಿ ದೊಡ್ಡಮ್ಮ ಇಬ್ಬರೂ ಬಾಗಿಲಿಗೆ ಬಂದರು.

" ಅಚ್ಚುತ್ತಾ ಬೇಡ........ ದೈವದೋಷವಾದೀತು."

"ಇದೆಲ್ಲಾ ಬರೇ ಸೊಕ್ಕು ಕಾಳ್ಯಮ್ಮಾ."

"ಚೆನ್ನಾಗಿ ಎರಡು ಬಿದ್ದರೆ ಎಲ್ಲಾ ಸರಿಹೋಗ್ತದೆ" ದೊಡ್ಡಮ್ಮ ಹೇಳಿದಳು. ಅಷ್ಟರಲ್ಲಿ ಮಾವ ಕೂಡಾ ಹಾಜರಾದರು. "ಈ ಮನೆಯಲ್ಲಿ ಇರುವುದು ಕೂಡಾ ಕಷ್ಟವಾಯಿತಲ್ಲಾ. ಹೀಗಾದರೆ ಮನಸ್ಸಿಗೆ ಆಗುವ ಹಾಗೆ ಏನಾದರೂ ಕುಡಿಯುವುದು ತಿನ್ನುವುದು ಸಾಧ್ಯವೆ?"

"ಮನೆಯ ಹಿಂಬದಿಯ ಕೋಣೆಗೆ ಹಾಕಿದರೆ ಹೇಗೆ?"

"ಅದಕ್ಕೆ ಬಾಗಿಲಿಲ್ಲವಲ್ಲಾ? ಅದನ್ನು ಕಕ್ಕಸು ಮಾಡಿದರೆ ಅಡುಗೆ ಮನೆಗೆ ಸಮೀಪ."

ಮುತ್ತಜ್ಜಿ "ದುರ್ವಿಧಿ............ದುರ್ವಿಧಿ" ಎನ್ನುತ್ತಾ ಹೊರಟುಹೋದಳು.

ವೇಲಾಯುಧನ್ ಆದಿನ ಊಟಮಾಡಲಿಲ್ಲ. ಮಾವ ಮತ್ತು ಅಚ್ಚುತ್ತನ್ ನಾಯರ್ ಜೊತೆಗೆ ಸೇರಿಕೊಂಡು ಬಹಳ ಮಾತನಾಡುತ್ತಿದ್ದರು. ಅವರು ತನ್ನನ್ನು ಕೊಂದುಬಿಡಲು ಮಾತನಾಡುತ್ತಿದ್ದಾರೆ. ಚಾವಡಿಯಲ್ಲಿ ಬೊಬ್ಬೆಹಾಕುತ್ತಾ ಸತ್ತ ಮಾವನಿಗೆ ಕೋಳಿ ಮಾಂಸದಲ್ಲಿ ಪಾಷಾಣ ಕೊಟ್ಟಿದ್ದರು. ಶರೀರದಲ್ಲಿ ಬಹಳ ಉರಿ ಇತ್ತು.

ಬಟ್ಟಲಿನಲ್ಲಿದ್ದ ಅನ್ನ ಸಾರು ನೆಲಕ್ಕೆ ಚೆಲ್ಲಿದ. ಛೀ ! ಆಗ ಅವನಿಗೆ ಅದು ಕಾಣಿಸಿತು. ನೆಲವೆಲ್ಲಾ ಹೊಲಸು, ಯಾರು ಹೀಗೆ ಮಾಡಿದ್ದು?

ಅವನಿಗೆ ವಾಂತಿಯಾಯಿತು.

ಕಿಟಕಿಯನ್ನು ಮುಚ್ಚಿದ ಮಡಲಿನ ಮೇಲೆ ಶಬ್ದವಾಗುತ್ತಿದೆ. ಒಂದು ಕಡಿಗತ್ತಿ ಸಿಕ್ಕಿದರೆ....ಅಚ್ಚುತ್ತನ್ ನಾಯರ್ ಕೊಲ್ಲಲು ನಿಂತಿದ್ದಾನೆ....

ಗೋಡೆಗೆ ಒರಗಿನಿಂತು ಭಯದಿಂದ ಅವನು ಹೇಳಿದ :

"ಇನ್ನು ಮಾಡೋದಿಲ್ಲ...ಮಾಡೋದಿಲ್ಲ.... ನನ್ನನ್ನು ಕೊಲ್ಲಬೇಡಿ."

"ವೇಲಾಯುಧಣ್ಣಾ...."

ಮೃದುವಾದ ಧ್ವನಿ.

"ಯಾರೋ ಅದು ?"

"ನಾನಲ್ಲವೆ ವೇಲಾಯುಧಣ್ಣಾ....ಅಮ್ಮುಕುಟ್ಟಿ"

"ಅಮ್ಮುಕುಟ್ಟಿ....ಖಿ....ಖಿ....ಖಿ...."

ಅವನಿಗೆ ತಮಾಷೆ ಎನಿಸಿತು. ಏಕೆಂದರಿಯದೆ ಅವನು ಆಲಿಸಿದ.

"ವೇಲಾಯುಧಣ್ಣಾ."

ಬಿಕ್ಕಳಿಕೆಯು ಕೇಳಿಸಿತು.

ಅವನದನ್ನು ಚಲೋದಾಗಿ ಅನುಕರಿಸಿದ. ಮತ್ತು ಗೋಡೆಗಳು ಕುಸಿದು ಬೀಳುವಂತೆ ಗಟ್ಟಿಯಾಗಿ ಗಹಗಹಿಸಿ ನಕ್ಕ.

ದುರ್ಬಲವಾದ ಸ್ವರದ ಆ ಕರೆ ಹೊರಗಿನಿಂದ ಇನ್ನೊಮ್ಮೆ ಕೇಳಿಸಿತು. ದಿಗ್ಗನೆದ್ದು ಕಿಟಕಿಯ ಸರಳುಗಳನ್ನು ಹಿಡಿದು ಅವನು ಗರ್ಜಿಸಿದ.

"ನಾನು ತಲೆ ಹೊಡೆದೇನು."

ಇಲ್ಲ. ಮತ್ತೆ ಶಬ್ದವಿಲ್ಲ. ಸುಮ್ಮನೆ ಕಷ್ಟ ಕೊಡುತ್ತಿದ್ದಾರೆ....

ಕಿಟಕಿಯ ಸರಳುಗಳನ್ನು ಹಿಡಿದು ಹಾಗೆಯೇ ನಿಂತಾಗ ಮಡಲಿನ ಎಡೆಯಿಂದ ಗಾಳಿ ಮೆಲ್ಲನೆ ತೇಲಿಬಂತು. ಉರಿಯುತ್ತಿದ್ದ ಭುಜಕ್ಕೂ ಪಕ್ಕೆಗಳಿಗೂ ತೇವವಿದ್ದ ಗಾಳಿ ಸೋಂಕಿದಾಗ ಸುಖವೆನಿಸಿತು...ಶರೀರ ದಣಿದ ಹಾಗೆ ತೋರಿತು. ಆಗ ಕರೆದದ್ದು ಯಾರಿರಬಹುದು?....

—ಏನೆಲ್ಲಾ ಕೇಳಿದ್ದೆ? ಒಂದೂ ವ್ಯಕ್ತವಲ್ಲ. ಯಾವುದೂ ಜ್ಞಾಪಕವಿಲ್ಲ. ಕತ್ತಲಿನಲ್ಲಿ ಕೈಯಿಂದ ಜಾರಿಬಿದ್ದ ಏನನ್ನೋ ಅವನು ಅರಸುತ್ತಿದ್ದ. ಆ ಶಬ್ದ ಮತ್ತೂ ಕಿವಿಗಳಲ್ಲಿ ಮೊರೆಯುತ್ತಿದ್ದಂತೆ ತೋರಿತು.

"ವೇಲಾಯುಧಣ್ಣಾ."

—ಹೌದೆ?....ಅವನು ನಡುಗಿದ. ಕಣ್ಣುಗಳು ತುಂಬಿಬಂದವು.

## ೨

ಒಡೆದ ಮಣ್ಣಿನ ಪಾತ್ರೆಯ ಒಂದು ತುಂಡನ್ನು ನೆಲದಿಂದ ಎತ್ತಿಕೊಂಡು ಒಂದು ಏಣಿಯ ಚಿತ್ರವನ್ನು ಬಿಡಿಸುತ್ತಾ ವೇಲಾಯುಧನ್ ಕುಳಿತ.

ಕತ್ತಲಿನ ತೆರೆಗಳು ಮೆಲ್ಲಮೆಲ್ಲನೆ ಕಣ್ಣಿನಿಂದ ದೂರವಾಗುತ್ತಿವೆ.

ಈಗ ಇರುವುದೆಲ್ಲಿ?

ಸುತ್ತಲೂ ಅವನು ಕಣ್ಣು ಹಾಯಿಸಿದ. ಮನೆಯ ಹಿಂಬದಿಯ ಕತ್ತಲು ಕೋಣೆಯಾಗಿತ್ತು. ಚಳಿ ಹಿಡಿಯುತ್ತಿದೆ. ಕಾಲಿನಲ್ಲಿ ನೋವಿದೆ. ಎದ್ದು ನಿಂತಾಗ ಏನೋ ಶಬ್ದವಾಯಿತು. ನೋಡಿದಾಗ ಕಾಲಿನಲ್ಲಿ ಸಂಕಲೆ ಸುತ್ತಿಕೊಂಡಿದೆ. ಬಗ್ಗಿ ಕುಳಿತು ಪರಿಶೋಧನೆ ನಡೆಸಿದ. ಕಾಲಿನ ಕಣಗಂಟಿನಲ್ಲಿ ಸಂಕೋಲೆ ಚಿಗಿದುಕೊಂಡು ಚರ್ಮ ಕಿತ್ತುಹೋಗಿ ಕೆಂಪಗಿದೆ. ಸಂಕೋಲೆಗೆ ಹಾಕಿದವರು ಯಾರು? ಈ ಕೋಣೆಗೆ ಬಂದದ್ದು ಯಾವಾಗ? ಅವನು ಜ್ಞಾಪಿಸಿ ನೋಡಿದ. ಸುಮ್ಮನೆ ಆಟವಾಡಿಸುತ್ತಿದ್ದಾರೆ. ಯಾವುದೂ ತಿಳಿಯುವುದಿಲ್ಲ. ಮನುಷ್ಯನನ್ನು ಸಂಕೋಲೆಗೆ ಹಾಕುವುದಿದೆಯೆ? ನಾಯಿಗಳಂತೆ....

—ನನಗೆ ಸೌಖ್ಯವಿರಲಿಲ್ಲ. ಆದರಿಂದಾಗಿರಬೇಕು ಇಲ್ಲಿ ತಂದು ಬಿಟ್ಟಿರುವುದು. ಆದರೆ ಮನುಷ್ಯರನ್ನು ಸಂಕೋಲೆಗೆ ಹಾಕುವುದಿದೆಯೆ?

ನಾಯಿಗಳಂತೆ....

ಹೊರಗೆ ಬಿಸಿಲು ಕಂಡಿದೆ. ಕಿಟಕಿಯಿಂದ ನೋಡಿದಾಗ ಅಳಿಲು ಬಾಳೆಯ ಹೂವಿನ ಜೇನು ಹೀರುತ್ತಿತ್ತು. ಅಡುಗೆ ಮನೆಯಿಂದ ಪಾತ್ರೆಗಳ ಧ್ವನಿ ಕೇಳಿಸುತ್ತಿದೆ. ಯಾರಾದರೂ ಹೊರಗೆ ಬಂದಿದ್ದರೆ....

ಅಡುಗೆ ಮನೆಯಲ್ಲಿ ಯಾರೊ ನೀರು ಸೇದುತ್ತಿರುವವರು. ಮರದ ರಾಟೆಯ ದೀನರೋದನ ಕೇಳಿಸುತ್ತಿದೆ. ದೊಡ್ಡಮ್ಮ ಇರಬೇಕು....

ವೇಲಾಯುಧನ್ ಕರೆದು ನೋಡಿದ: "ದೊಡ್ಡಮ್ಮಾ.... ದೊಡ್ಡಮ್ಮಾ—" ಉತ್ತರ ಬರಲಿಲ್ಲ.

—ಯಾರನ್ನೀಗ ಕರೆಯುವುದು? ನನಗೆ ಏನೂ ಆಗಿಲ್ಲ, ಏನೂ ಇಲ್ಲ....ಸ್ವಂತ ಶರೀರವನ್ನು ನೋಡಿದಾಗ ನಾಚಿಕೆಯಾಯಿತು. ಸೊಂಟದಲ್ಲಿ ಬಟ್ಟೆ ಇರಲಿಲ್ಲ. ಯಾರಾದರೂ ನೋಡಿದರೆ ಏನೆಂದುಕೊಂಡಾರು? ಯಾರೂ ನೋಡದಿರಲಿ....ಬಟ್ಟೆ ಉಡದೆ ಇರಲು ಅವನು ಸಣ್ಣ ಹುಡುಗನಲ್ಲ. ದೊಡ್ಡವನಾಗಿದ್ದಾನೆ. ಬಹಳ ದೊಡ್ಡವನಾಗಿದ್ದಾನೆ. ದಟ್ಟವಾಗಿ ಬೆಳೆದ ಕುರುಚಲುಗಡ್ಡ, ಎಂಥಾ ತುರಿಕೆ! ಆದರೂ ಸೊಂಟದಲ್ಲಿ ಬಟ್ಟೆ ಇಲ್ಲದೆ....

ವೇಲಾಯುಧನ್ ಮುದುಡಿ ಕುಳಿತ. ಒಂದು ಧೋತ್ರ ಬೇಕು. ಯಾರನ್ನು ಕರೆಯಲಿ? ದೊಡ್ಡಮ್ಮನನ್ನು ಕರೆಯಬೇಕಾಗಿಲ್ಲ. ಅವನು ಗೋಪಿಯನ್ನು ಕರೆದ. ಸ್ವರವೇರಿಸಿ ಮತ್ತೂ ಮತ್ತೂ ಕರೆದ.

ಬಟ್ಟೆ ಉಡುವ ಮೊದಲು ಯಾರೂ ಬಾರದಿರಲಿ—ಯಾರೋ ಕೋಣೆಯ ಎದುರು ಬಂದು ನಿಂತು ಕೇಳಿದರು:

"ಏನು?"

"ಈ ಕಡೆ ಬರಬೇಡ....ಬರಬೇಡ.... ಗೋಪಿ ಎಲ್ಲಿದ್ದಾನೆ?"

"ನಾನಲ್ಲವೆ ಗೋಪಿ?" ಬಳ್ಳಿ ಇದ್ದ ಕೆಂಪು ಇಜಾರು ಧರಿಸಿದ್ದಾನೆ. ಗೋಪಿ ಜಾಣ ಹುಡುಗ.

"ನನಗೊಂದು ಧೋತರ ತಂದುಕೊಡು...."

"ಹರಿಯಲಿಕ್ಕಲ್ಲವೆ? ಊಂ....ಊಂ...."

"ಹರಿಯುವುದಿಲ್ಲ ಗೋಪಿ, ಬೇಗ ತಂದು ಕೊಡು...ಯಾರಾದರೂ ಬರುವುದರೊಳಗೆ...."

ಗೋಪಿ ಸಂಶಯಪಡುತ್ತಾ ನಿಂತ.

"ಒಳ್ಳೇ ಹುಡುಗನಲ್ಲವೆ, ಬೇಗ ಹೋಗು."

ಗೋಪಿ ಬೆಳ್ಳಗಿನ ಒಂದು ಧೋತರ ಹಿಡಿದು ಬಂದ. ವೇಲಾಯುಧನಿಗೆ ಸಂತೋಷವಾಯಿತು. ಒಳ್ಳೇ ಶುಭ್ರವಾದ ಧೋತರ.

"ಹರೀತೀಯಾ?"

"ಹರಿಯುವುದೆ? ಯಾಕೆ?"

"ಹರೀಲಿಕ್ಕಾದರೆ ಕೊಡುವುದಿಲ್ಲ..."

"ಇಲ್ಲಿ ತಾ ಗೋಪಿ, ಯಾರಾದರೂ ನೋಡಿ

ದರೆ...."

ಗೋಪಿ ಹೊರ ನಿಂತು ಧೋತರ ಎಸೆದ.

ವೇಲಾಯುಧನಿಗೆ ಧೋತರ ಸುತ್ತಿಕೊಂಡಾಗ ಸಮಾಧಾನವಾಯಿತು. ಇನ್ನು ಯಾರು ಬಂದರೂ ತೊಂದರೆ ಇಲ್ಲ.

"ಯಾರು ನನ್ನ ಕಾಲಿಗೆ ಸಂಕೋಲೆ ಹಾಕಿದ್ದು?"

ಗೋಪಿ ಅದಕ್ಕೆ ಉತ್ತರ ಹೇಳಲಿಲ್ಲ.

"ಇದನ್ನೊಮ್ಮೆ ಬಿಚ್ಚಲು ಹೇಳು."

ಗೋಪಿ ಮೆಲ್ಲನೆ ನಕ್ಕ ಅಷ್ಟೆ.

"ಬಿಚ್ಚೊ ಇದು....ನಾನೇನು ನಾಯಿಯೋ ಸಂಕೋಲೆಗೆ ಹಾಕಲು?" ಗೋಪಿ ಮೆಲ್ಲನೆ ಹೊರಟುಹೋದ.

ಈ ಸಂಕೋಲೆಯನ್ನು ಬಿಚ್ಚಲು ಯಾರೂ ಇಲ್ಲವೆ?

ಅವನು ಸುತ್ತ ಜಗವನ್ನು ಕೂಗಿ ನೋಡಿದ. ದೊಡ್ಡಮ್ಮನನ್ನು ಕರೆದ. ಯಾರೂ ಬರಲಿಲ್ಲ. ಯಾರೂ ಕೇಳುವುದಿಲ್ಲ.

ಅಂಗಳದಿಂದ ಮರದ ಹಾವುಗೆಯ ಧ್ವನಿ ಕೇಳಿಸಿತು. ಮಾವ ಕೋಣೆಯ ಬಾಗಿಲಿನಲ್ಲಿ ಬಂದು ನಿಂತಾಗ ವೇಲಾಯುಧನ್ ಗೌರವದಿಂದ ಎದ್ದು ನಿಂತ. ಮಾವನವರ ಎದುರಿಗೆ ಕುಳಿತುಕೊಳ್ಳಬಾರದು.

"ಏನೋ?"

"ಇದನ್ನೊಮ್ಮೆ ಬಿಡಿಸಿ ಕೊಡಲು....."

"ಯಾಕೆ ಜನರ ಮೈಮೇಲೆ ಬರಲಿಕ್ಕೆಯೆ?"

"ಸಂಕೋಲೆಗೇಕೆ ಹಾಕಿರುವುದು?"

"ನಿನ್ನ ಸೊಕ್ಕಿನಿಂದಾಗಿ—ನಿನ್ನ ಹುಚ್ಚು ಹೋದೀತೇ ನೋಡುತ್ತೇವೆ."

ಮಾವ ಹೊರಟುಹೋದರು.

ವೇಲಾಯುಧನ್ ಯೋಚಿಸಿ ನೋಡಿದ. ಏನು ಸೊಕ್ಕು ತೋರಿಸಿದ್ದೆ?

........ಸುಖವಿಲ್ಲದಾಗಿತ್ತು....ಈಗ, ಏನೂ ಇಲ್ಲ....ಏನೂ ಇಲ್ಲ. ಅವನಿಗೆ ಗಟ್ಟಿಯಾಗಿ ಕೂಗಿಕೊಳ್ಳಬೇಕೆನಿಸಿತು.

"ನನಗೇನೂ ಇಲ್ಲ. ನನಗೆ ಹುಚ್ಚಿಲ್ಲ...."

ಹೆಚ್ಚು ಅಸ್ವಸ್ಥತೆ ಎನಿಸಿತು. ಯಾರೂ ಇದನ್ನು ಬಿಚ್ಚಲು ಬರಲಾರರೆ?....ಅಳು ಗಂಟಲಿನಿಂದ ಉಕ್ಕಿ ಬರುತ್ತಿತ್ತು.

ಯಾರೂ ಬರಲಾರರೆ?...ಬರಲಾರರೆ?

ನಿಸ್ಸಹಾಯನಾಗಿ ಅವನು ಮತ್ತೊ ಹೊರಗೆ ನೋಡಿ ನಿಂತ. ಗೋಡೆಯ ಪಕ್ಕದ ಹುಣಸೆ ಮರಗಳ ಎಡೆಯಿಂದ ಕೆಂಪು ಆಕಾಶ ಕಾಣಿಸುತ್ತಿದೆ. ಹಜೆಯ ಮೇಲೆ ನಿಂತಿದ್ದ ಬೆವರಿನ ಹನಿಗಳನ್ನು ಒರಸಿ ಅವನು ಕಾಲುಗಳಿಗೆ ಸವರಿದ. ಸಂಕೋಲೆಯ ಗೊಣಸುಗಳು ಮೆಲ್ಲನೆ ಶಬ್ದಿಸಿದವು.

ಉಕ್ಕಿ ಬರುತ್ತಿದ್ದ ಅಳುವನ್ನು ತಡೆದು ನಿಲ್ಲಿಸಿ ಅವನು ಮತ್ತೊ ಜ್ಞಾಪಿಸಲು ಶ್ರಮಿಸಿದ.

—ನನಗೆ ಈಗ ಏನೂ ಇಲ್ಲ. ಏನೂ ಇಲ್ಲ... ನನ್ನನ್ನು ಬಿಟ್ಟು ಬಿಡಿ. ...........ಗೆದ್ದಲು ತಿಂದ ಹಳೆಯ ಮರದ ಕಂಬವನ್ನು ಒರಗಿ ಅವನು ಕುಳಿತ. ಓ, ಸ್ವಲ್ಪ ಮೊದಲು ಇತ್ತಲೆ ಇದ್ದ........ ಯಾರೆಲ್ಲಾ ನೋಡಿರಬಹುದು? ಅಮ್ಮುಕುಟ್ಟಿ ಈ ಕಡೆ ಬಂದಿದ್ದಳೇನೊ?

ಅಮ್ಮುಕುಟ್ಟಿ—

ಅಮ್ಮುಕುಟ್ಟಿಯನ್ನು ಒಮ್ಮೆ ನೋಡುವಂತಾಗಿದ್ದರೆ...

ಅವಳಿಗೂ ಜುಗುಪ್ಸೆ ಬಂದಿರಬೇಕು. ಮೈ-ತುಂಬ ಮಣ್ಣಿದೆ. ಗಡ್ಡ ಬೆಳೆದುನಿಂತಿದೆ. ಜಡೆ ಕಟ್ಟಿದ ತಲೆಯನ್ನು ಒಮ್ಮೆ ಕೊಡವಿದಾಗ ಧೂಳುಮಣ್ಣು ಸುತ್ತಲೂ ಹರಡಿತು.

ಅಮ್ಮುಕುಟ್ಟಿಯ ದೇಹದಲ್ಲಿ ಕೊಳೆ ಇರದು. ಅವಳಲ್ಲಿ ಕೇದಿಗೆಯ ಪರಿಮಳವಿದೆ.

ಅವಳನ್ನೀಗ ನೋಡುವುದು ಸಾಧ್ಯವಿದ್ದರೆ......

ಅಮ್ಮುಕುಟ್ಟಿಯನ್ನು ಕುರಿತು ಯೋಚಿಸಿದಾಗ ಬಹಳ ನಿಗೂಢವಾದ ಒಂದು ರಹಸ್ಯ ನೆನಪಿಗೆ ಬರುತ್ತಿದೆ. ಯಾರಿಗೂ ತಿಳಿಯದು. ಹಿತ್ತಿಲ ಅಂಚಿನ ದೊಡ್ಡ ಮಾವಿನ ಮರದ ಕೆಳಗೆ ಮಾವಿನ ಹಣ್ಣು ಬೀಳುವುದನ್ನು ಕಾದುಕೊಂಡು ಜೊತೆಯಾಗಿ ಕುಳಿತಿದ್ದಾಗ—

ಅವನು ಮೆಲ್ಲನೆ ಮೃದುವಾಗಿ ಅವಳ ಕೆನ್ನೆಯನ್ನು ಕಚ್ಚಿದ್ದ. ಅವಳು ಕೋಪ ಮಾಡಿಕೊಂಡು ಪರಚಿದ್ದಳು.

# ಸಂಬಳ ಪಟ್ಟಿಯ ಉಳಿತಾಯ ಯೋಜನೆಯಲ್ಲಿ ಉಳಿತಾಯ ಮಾಡುವುದು ಸುಲಭ

ನೀವು ಯಾವುದಾದರೊಂದು ಕಾರ್ಖಾನೆಯಲ್ಲಿ ಅಥವಾ ಆಫೀಸಿನಲ್ಲಿ ಕೆಲಸ ಮಾಡುತ್ತಿರುವಿರಿ? ಪ್ರತೀ ತಿಂಗಳು ನೀವು ಉಳಿತಾಯ ಮಾಡಬೇಕೆಂದಿರುವ ಹಣವನ್ನು ನಿಮ್ಮ ಸಂಬಳದಿಂದ ಕಳೆದುಕೊಡುವಂತೆ ನಿಮ್ಮ ಉದ್ಯೋಗದಾತ್ರಿಗಳಿಗೆ ಅಧಿಕಾರಕೊಡಿರಿ. ಈ ಮೊತ್ತವನ್ನು ನಿಮ್ಮ ಉದ್ಯೋಗದಾತ್ರಿಗಳು ನಿಮಗೆ ಇಷ್ಟವಿರುವ ಉಳಿತಾಯ ಖಾತೆಯಲ್ಲಿ ಅಥವಾ ಸೆಕ್ಯೂರಿಟಿಗಳಲ್ಲಿ ತೊಡಗಿಸುವರು.

ನಮ್ಮ ದೇಶದಲ್ಲಿಂದು 21,000 ಸಂಬಳ ಪಟ್ಟಿಯ ಉಳಿತಾಯ ಸಮೂಹಗಳಿವೆ. ಇವುಗಳಲ್ಲಿ 12 ಲಕ್ಷ ಸದಸ್ಯರಿದ್ದಾರೆ. ಇಂದೇ ಈ ಯೋಜನೆಯನ್ನು ಸೇರಿಕೊಳ್ಳಿರಿ. ಕ್ರಮಬದ್ಧವಾಗಿ ಉಳಿತಾಯ ಮಾಡಲು ಆರಂಭಿಸಿರಿ.



**ರಾಷ್ಟ್ರೀಯ ಉಳಿತಾಯ ಸಂಸ್ಥೆ**

D A 66/518

ಆಗ ಚಿಕ್ಕವರಿದ್ದರು. ಬಹಳ ದಿನಗಳ ಹಿಂದೆ. ಈಗ ಎಷ್ಟು ದೊಡ್ಡವರಾಗಿದ್ದೇವೆ! ಆ ಬಳಿಕ ಏನೆಲ್ಲಾ ನಡೆಯಿತು? ಒಂದೂ ವ್ಯತ್ಯವಿಲ್ಲ. ಮುಚ್ಚಿದ ಬಾಗಿಲು, ಮಡಲಿನ ಪಡಿಕೆ ಇಟ್ಟ ಕಿಟಕಿ. ಕತ್ತಲು ತುಂಬಿದ ಈ ಶೂನ್ಯತೆಯಲ್ಲಿ ಏನೆಲ್ಲಾ ಆಗಿದೆ? ಈ ಸರಪಳಿ ಕಾಲಿಗೆ ಬಿದ್ದದ್ದು ಯಾವಾಗ?

"ವೇಲಾಯುಧಣ್ಣನ ರೋಗ ವಾಸಿಯಾದೀತು."

ಆ ಮೃದುಧ್ವನಿ ಎಲ್ಲಿಯೊ ಅವಿತುಕೊಂಡಿದೆ.

ಮೊಣಕಾಲುಗಳೆಡೆಯಲ್ಲಿ ತಲೆಯನ್ನು ಮರೆಸಿ ಅವನು ಅಳಲಾರಂಭಿಸಿದ. ಕಣ್ಣೀರು ಸೋಂಕಿದಾಗ ಸರಪಣಿ ಜಗಿದು ಕೆಂಪಾದ ಭಾಗಗಳು ಉರಿಯಲಾರಂಭಿಸಿದವು.

ಅದರೂ ಸಮಾಧಾನವಿದೆ. ಈಗ ಕಾಯಿಲೆ ಇಲ್ಲ.

ಗಟ್ಟಿಯಾಗಿ ಅವನು ಕೂಗಿ ಹೇಳಿದ:

"ನನಗೆ ಹುಚ್ಚಿಲ್ಲ. ನನ್ನನ್ನು ಬಿಟ್ಟುಬಿಡಿ... ಬಿಟ್ಟು ಬಿಡೀಂತಾ..."

ಯಾರೂ ಬರಲಿಲ್ಲ. ಯಾರಿಗೂ ಇದು ಕೇಳಿಸುವುದಿಲ್ಲವೆ ?...

ಮನುಷ್ಯನನ್ನು ಸಂಕೋಲೆಗೆ ಹಾಕುವುದಂತಿಲ್ಲ. ಅವನು ಕಚ್ಚುವ ನಾಯಿಯಲ್ಲ. "ನನ್ನನ್ನು ಬಿಟ್ಟುಬಿಡಿ...ನನ್ನನ್ನು ಬಿಟ್ಟುಬಿಡಿ."

ಸಂಕೋಲೆ ಮತ್ತೂ ಶಬ್ದಿಸಿತು. ಯಾರು ಇದನ್ನೊಮ್ಮೆ ಬಿಚ್ಚುವವರು? ಯಾರಿಗೂ ಕೇಳಿಸುವುದಿಲ್ಲ... ಅವನು ಇಳಿಧ್ವನಿಯಲ್ಲಿ ಹೇಳಿದ: "ಶಂಕರನ್ ಕುಟ್ಟಿ, ಅಕ್ಕನನ್ನು ಒಮ್ಮೆ ಕರೀತೀಯಾ?"

ಅಮ್ಮುಕುಟ್ಟಿಗೆ ಹೇಳಿದರೆ ಅವಳಿಗೆ ತಿಳಿದೀತು. ನನಗೆ ಕಾಯಿಲೆ ಇಲ್ಲ...

"ಅಕ್ಕ ತಾಯಿಮನೆಗೆ ಹೋದಳಲ್ಲಾ?" ಶಂಕರನ್ ಕುಟ್ಟಿಯ ಮುಖದಲ್ಲಿ ಹಾಸ್ಯಕ್ಕಿಂತ ಹೆಚ್ಚು ಸಂತಾಪವಾಗಿತ್ತು.

"ಯಾವೊತ್ತು ಹೋದದ್ದು?"

"ಕೆಲವು ದಿನಗಳ ಹಿಂದೆ. ನಾನೂ ಹೋಗಿದ್ದೆ. ನಿನ್ನೆ ಅಯ್ಯಪ್ಪನ ಜೊತೆಗೆ ಹೊರಟು ಬಂದೆ."

"ಅಮ್ಮುಕುಟ್ಟಿ ಬರುವುದು ಯಾವಾಗ?"

"ಇನ್ನು ಬರುವುದಿಲ್ಲ. ಬರುವ ತಿಂಗಳು ಅಕ್ಕನಿಗೆ ಮದುವೆ."

ವೇಲಾಯುಧನ್ ಮಾತನಾಡಲಿಲ್ಲ.

ಅವನಿಗೆ ಒಂದೂ ತಿಳಿಯಲಿಲ್ಲ. ಕಾಯಿಲೆಯಾಗಿತ್ತು...ಮುಚ್ಚಿಹೋದ ಒಂದು ಬಾಗಿಲು ...ಮಡಲಿನಿಂದ ಮುಚ್ಚಿದ ಕಿಟಕಿ...ರೋಮ ತುಂಬಿದ ಒರಟು ಕೈ...

"ವೇಲಾಯುಧಣ್ಣನ ಕಾಯಿಲೆ ವಾಸಿಯಾದೀತು..."

ಈಗ ಅವಳನ್ನು ಕಾಣಬೇಕಿತ್ತು. ಅಮ್ಮುಕುಟ್ಟಿ, ನನಗೆ ಈಗ ಕಾಯಿಲೆ ಇಲ್ಲ...ಅವಳಿಗೆ ತಿಳಿಯದು.

ಬಟ್ಟಲಿನಲ್ಲಿ ಅನ್ನ ಸಾರು ಹಿಡಿದುಕೊಂಡು ಒಬ್ಬಳು ಹೆಂಗಸು ಒಳಗೆ ಬಂದಳು. ಸ್ವಲ್ಪ ದೂರ ನಿಂತು ಪಾತ್ರೆಯನ್ನು ಅವನ ಮುಂದಕ್ಕೆ ಸರಿಸಿದಳು. ಅವನಿಗೆ ಗುರುತಿರಲಿಲ್ಲ. ಆದರೂ ಹೇಳಿದ:

"ಈ ಸಂಕೋಲೆಯನ್ನು ಬಿಚ್ಚಿಕೊಡುತ್ತೀರಾ..."

ಹೆದರಿಸುವ ಹಾಗೆ ನೋಡುತ್ತಾ ಅವಳು ನೋಡಿದಳು: "ನಿನಗೆ ಒಳ್ಳೇ ಬುದ್ಧಿ ಬರಲಿ."

"ನನಗೆ....ಖಾಯಿಲೆ ಇಲ್ಲ. ನನ್ನನ್ನು ಬಿಟ್ಟುಬಿಡಿ" ಅವಳು ತಿರಸ್ಕಾರದಿಂದ ನೋಡುತ್ತಾ ಹೊರಟು ಹೋದಳು. ಒಳಗಿನಿಂದ ಏರುಧ್ವನಿಯ ಮಾತುಕತೆ ಕೇಳಿಸುತ್ತಿತ್ತು. ದೊಡ್ಡಮ್ಮ ಗೋಪಿಯನ್ನು ತರಾಟೆಗೆ ತೆಗೆದುಕೊಂಡಿದ್ದಳು.

"ಹರಿದು ಚಿಂದಿ ಮಾಡಲಿಕ್ಕಲ್ಲವೆ ಅದು? ಆ ಒಳ್ಳೇ ಧೋತ್ರ ತೆಗೆದು ಯಾಕೊ ನೀನು ಕೊಟ್ಟದ್ದು?"

"ಅದೇ ಸಿಕ್ಕಿದ್ದಮ್ಮಾ."

"ಯಾಕೊ ಸುಮ್ಮನೆ ನಾನು ಹೇಳುವುದು. ಹುಚ್ಚು ವೇಲಾಯುಧನಿಗಲ್ಲ ನಿನಗೆ."

ದೊಡ್ಡಮ್ಮ, ನನಗೆ ಹುಚ್ಚಿಲ್ಲ ಎಂದು ಕೂಗಿಕೊಳ್ಳಬೇಕೆನಿಸಿತು. ಹಸಿವಿದೆ. ಬಟ್ಟಲಿನಿಂದ ಅನ್ನ ಬಾಚಿ ತಿಂದ. ಕತ್ತಲು ಬಾಳೆ ತೋಟ

ಜೊಳಗೆ ನುಗ್ಗಿ ಬರುತ್ತಿತ್ತು. ತುದಿಗೆ ಕತ್ತಿ ಕಟ್ಟಿದ ದೋಟಿಯನ್ನು ಎತ್ತಿಕೊಂಡು ಯಾರೊ ಬಾಳೆಯ ತೋಟದಲ್ಲಿ ನಡೆಯುತ್ತಿದ್ದರು. ದೋಟಿಯ ತುದಿ ಮಾತ್ರ ಕಾಣಿಸುತ್ತಿದೆ.

ನೋಡುತ್ತಿರುವಾಗಲೆ ಕತ್ತಿ ಬಾಳೆಯ ಕೊಂಬೆಯನ್ನು ಕತ್ತರಿಸಿ ಹಾಕಿತು. ಬಾಳೆ ಹೂವಿನ ಜೇನಿನ ರುಚಿ ಅವನ ಮನಸ್ಸಿನಲ್ಲಿ ಸುಳಿದುಹೋಯಿತು. ಅಮ್ಮುಕುಟ್ಟಿಗೆ ಜೇನು ಬೇಕಿರಲಿಲ್ಲ. ಒಳಗಿನ ತಿರುಳು ಸಾಕಿತ್ತು.

ಈಗ ಅಮ್ಮುಕುಟ್ಟಿ ಅವಳ ಮನೆಯಲ್ಲಿದ್ದಾಳೆ.

ಗುಡ್ಡದ ಕೆಂಪು ಮಣ್ಣು ಜರಿದುಬಿದ್ದ ಬಳಸು ಹಾದಿ ಚೆನ್ನಾಗಿ ನೆನಪಿದೆ. ತಾಯಿಯ ಜೊತೆಗೆ ಅತ್ತೆಮನೆಗೆ ಔತಣಕ್ಕೆ ಹೋಗಿದ್ದ. ಗುಲುಗುಂಜಿಗಳು ಬಿದ್ದಿದ್ದ ಕಿರುಹಾದಿ. ಪಕ್ಕದಲ್ಲೆ ಮನೆ ಇತ್ತು. ಜಗುಲಿಯ ಮೇಲೆ ಗೋಡೆಗೆ ಜಿಂಕೆಯ ಕೊಂಬು ಜೋಡಿಸಿದ್ದರು. ಎಲ್ಲವೂ ನೆನಪಿದೆ. ಅಮ್ಮುಕುಟ್ಟಿ ಈಗ ಅಲ್ಲಿದ್ದಾಳೆ.

ಸ್ನಾನ ಮುಗಿಸಿಬಂದು ಒಳಗಿನ ಕೋಣೆಯ ಅರೆಯುವ ಕಲ್ಲಿನ ಸಮೀಪ ಕೂದಲನ್ನು ಬಿಚ್ಚಿ ಹಾಕಿ ಬೆರಳುಗಳಿಂದ ಸಿಕ್ಕು ಬಿಡಿಸುತ್ತಿರಬಹುದು. ಅವಳಿನ್ನು ಇಲ್ಲಿ ಬರಲಿಕ್ಕಿಲ್ಲವೆ?

ಅಮ್ಮುಕುಟ್ಟಿಯನ್ನು ಒಮ್ಮೆ ನೋಡಲು.... ಮದುವೆಯಾದರೆ ಅವಳು ಈ ಕಡೆಗೆ ಬರಲಿಕ್ಕಿಲ್ಲ.... ಒಮ್ಮೆ ನೋಡುವಂತಾಗಿದ್ದರೆ........ ವೇಲಾಯುಧನ್ ಗೋಡೆಗೆ ಬೆನ್ನು ತಿಕ್ಕಿದ. ಅಗಲೂ ಸರಪಣಿ ಸದ್ದು ಮಾಡಿತು. ಅದನ್ನು ಬಿಚ್ಚಲು ಸಾಧ್ಯವಾದರೆ.... ಸಂಕೋಲೆಯನ್ನು ಹಿಡಿದೆಳೆದ. ಬೆರಳುಗಳಿಗೆ ನೋವಾಯಿತು ಮಾತ್ರ.

ಅವನು ನೆನೆದ ಕಣ್ಣುಗಳನ್ನು ಬಿಚ್ಚಿ ಆಕಾಶವನ್ನೇ ನೋಡಿದ. ಹೊಳೆಯುತ್ತಿರುವ ನೆನೆಗೂದಲಿನ ಬಣ್ಣ. ಕಣ್ಣು ಹಾಯಿಸಲು ಸಾಧ್ಯವಿರುವಷ್ಟು ದೂರ ನೋಡಿದಾಗ ಒಂದು ಹೊಳಪಿಲ್ಲದ ನಕ್ಷತ್ರ ಮುನಿದು ನಿಂತಿದೆ.

ಅಡುಗೆ ಮನೆಯ ಕಿಟಕಿಯಿಂದ ಅವನಿದ್ದ ಕೋಣೆಯ ಎದುರಿನ ಅಂಗಳಕ್ಕೆ ಬೆಳಕು ಬಿತ್ತು. ಅಡುಗೆ ಮನೆಯಿಂದ ಪಾತ್ರೆಯ ಧ್ವನಿ ಕೇಳಿಸುತ್ತಿದೆ. ಅವರ್ಯಾರೂ ಇನ್ನು ಈ ಕಡೆಗೆ ಬರಲಿಕ್ಕಿಲ್ಲ.... ಇರುಳಿನೊಡನೆ ಅವನು ಮೆಲ್ಲನೆ ಹೇಳಿದ: "ನನ್ನನ್ನು ಬಿಡು.... ನನ್ನನ್ನು ಬಿಡು."

ಗಟ್ಟಿಯಾಗಿ ಅವನೊಮ್ಮೆ ಕೂಗಿನೋಡಿದ: "ಅಯ್ಯೋ.... ಅಯ್ಯಯ್ಯೋ...." ಜಗುಲಿಯ ತುದಿಯಲ್ಲಿ ಬೆಳಕು ಕಾಣಿಸಿತು. "ವೇಲಾಯುಧಾ!" ನಡುಗಿಸುವ ಧ್ವನಿ.

"ನನ್ನನ್ನು ಬಿಡುವುದಿಲ್ಲವೆ? ಬಿಡುವುದಿಲ್ಲವೆ?"

"ಸುಮ್ಮನೆ ಅಲ್ಲಿ ಬಿದ್ದುಕೋ. ಎಲುಬು ನೀರು ಮಾಡಿಯೇನು" ದೀಪ ಮರೆಯಾಯಿತು.

ಮನೆಯೊಳಗಿನ ಸದ್ದುಗದ್ದಲ ಮೆಲ್ಲನೆ ಕಡಿಮೆಯಾಗುತ್ತಾ ಬಂತು. ಅಂಗಳದ ಕತ್ತಲನ್ನು ದೂರ ಮಾಡಿದ್ದ ಬೆಳಕೂ ಮಾಯವಾಯಿತು. ಕಾಲಿನ ಸರಪಣಿಯನ್ನು ಅವನು ಇನ್ನೊಮ್ಮೆ ಎಳೆದು ನೋಡಿದ. ಅದು ಬಿಚ್ಚಿದರೆ ಸಾಕಿತ್ತು. ಮತ್ತೆ ಯಾರಾದರೂ ಪೀಡಿಸಲು ಬಂದರೆ ಅವರ ಮರಣ.

ಹುಚ್ಚಂತೆ, ಅವರಿಗೆಲ್ಲಾ ಹುಚ್ಚು! ಅವರ ಅಪ್ಪನಿಗೂ ಅಮ್ಮನಿಗೂ. ಸುಮ್ಮನೆ ತ್ರಾಸ ಕೊಡುತ್ತಿದ್ದಾರೆ.

ನನಗೇನೂ ಇಲ್ಲ.... ನನಗೆ ಹುಚ್ಚಿಲ್ಲ........ ಅವನು ಮತ್ತೂ ಮತ್ತೂ ಸಂಕೋಲೆ ಎಳೆದು ನೋಡಿದ. ಕೈ ನೋವಾದರೂ ನಿಲ್ಲಿಸಲಿಲ್ಲ. ಉಸಿರು ಬಿಗಿಯಾದಾಗ ಕಣ್ಣುಮುಚ್ಚಿ ಕೌಚಿ ಮಲಗಿದ.

............ಮತ್ತೊಮ್ಮೆ ಕಣ್ಣು ತೆರೆದಾಗ, ತಿಳಿಯಿತು, ಅವನು ಕನಸು ಕಾಣುತ್ತಿದ್ದ. ಮಾಣಿಕ್ಯದ ಕಲ್ಲು ಸಿಕ್ಕಿದ ರಾಜಕುಮಾರನ ಕತೆ. ಚಿಕ್ಕಂದಿನಲ್ಲಿ ಮುತ್ತಜ್ಜಿ ಮಡಿಲಲ್ಲಿ ಮಲಗಿಸಿ ನಿದ್ದೆ ಮಾಡಿಸುವಾಗ ಹೇಳಿದ್ದು. ಹೊಳೆಯಾಚೆಗಿನ ಮಾಳಿಗೆಯಲ್ಲಿ ರಾಕ್ಷಸ ರಾಜಕುಮಾರಿಯನ್ನು ಸಂಕೋಲೆಯಲ್ಲಿ ಬಂಧಿಸಿಟ್ಟಿದ್ದಾನೆ. ಬೆಂಕಿಯಲ್ಲಿ ಕರಗದ, ಹೊಡೆದರೆ ಮುರಿಯದ ಸಂಕೋಲೆ. ಮುಸುರಿಗೆ ಬಂದ ಮುದುಕಿ ಹೇಳಿಕೊಟ್ಟ ಮಂತ್ರವನ್ನು ಜಪಿಸಿ ಕಠಾರಿಯನ್ನು ತೋರಿಸಿದಾಗ ಸಂಕೋಲೆ ಮುರಿದು ಬಿತ್ತು. ಬಿಳಿ ಕುದುರೆಗಳ ಬೆನ್ನು ಹತ್ತಿ ರಾಜಕುಮಾರನೂ ರಾಜಕುಮಾರಿಯೂ ಕಣ್ಣಂದ

ಳಿಯು ಗುಡ್ಡದ ಮೇಲಿನ ಏಳು ಮಾಳಿಗೆ ಮನೆಯನ್ನು ಸೇರಿಸಿದರು........

ಅಷ್ಟರಲ್ಲಿ ಕಣ್ಣು ತೆರೆದಿದ್ದ. ಮಾಳಿಗೆ ಇಲ್ಲ. ಮಾಣಿಕ್ಯದ ಕಲ್ಲಿಲ್ಲ. ಬಿಳಿ ಕುದುರೆಗಳೂ ಇಲ್ಲ. ಮಂದವಾದ ಚಂದ್ರಪ್ರಕಾಶ ಕೋಣೆಯೊಳಗೆ ಹರಿದುಬರುತ್ತಿತ್ತು. ಅಂಗಳದಲ್ಲಿ ನೆರಳುಗಳು ಚಿತ್ರ ಬರೆಯುತ್ತಿದ್ದವು. ಒಂದು ನಿಮಿಷ ಆಲೋಚಿಸಬೇಕಾಗಿ ಬಂತು, ಈಗ ಎಲ್ಲಿರುವೆನು? ಕಾಲು ಸರಿಸಿದಾಗ ಸಂಕೋಲೆ ಸದ್ದು ಮಾಡಿತು. ಕೋಪದಿಂದ ಸಂಕೋಲೆಯನ್ನು ಬಿಗಿಯಾಗಿ ಹಿಡಿದು ಗೋಡೆಗೆ ಕಾಲುಗಳನ್ನು ಒತ್ತಿ ಹಿಡಿದು ಅವನು ಬಲವಾಗಿ ಎಳೆದ.

ಒಂದು ಗೊಣಸು ಮುರಿದರೆ ಸಾಕು, ಒಂದು ಗೊಣಸು.

ಮತ್ತೂ ಒಮ್ಮೆ........

ಒಮ್ಮೆ...........

ಅವನು ಹಿಂದಕ್ಕೆ ಕುಸಿದುಬಿದ್ದ. ಸಂಕೋಲೆ ಮುರಿದಿದೆ....... ಎದ್ದು ನಿಂತಾಗ ಶರೀರವೆಲ್ಲಾ ನೋಯುತ್ತಿದ್ದಂತೆ ತೋರಿತು. ಕುಂಟುತ್ತಾ ಕುಂಟುತ್ತಾ ಅಂಗಳಕ್ಕೆ ಇಳಿದು ಬಂದ. ಪ್ರತಿ ಹೆಜ್ಜೆಗೂ ಕಾಲಿನಲ್ಲಿ ಉಳಿದಿದ್ದ ಸರಪಣಿಯು ಕುಂಡು ಸದ್ದು ಮಾಡಿತು.

ಮೆಟ್ಟಿಲನ್ನು ಇಳಿದು ಹೆಬ್ಬಾಗಿಲು ದಾಟಿ ಎದುರಿನ ಬಯಲನ್ನು ಸೇರಿದ. ಎತ್ತರದ ಏರಿಯ ಮೇಲೆ ನಡೆಯುತ್ತಿದ್ದಾಗ ಅವನು ಯೋಚಿಸಿದ, ಇನ್ನೆಲ್ಲಿಗೆ ಯಾತ್ರೆ?

ಸಂಕೋಲೆ ಹೆಜ್ಜೆ ಹೆಜ್ಜೆಗೂ ತಾಳಹಿಡಿದಂತೆ ಧ್ವನಿ ಮಾಡುತ್ತಿತ್ತು. ದಕ್ಷಿಣದಿಕ್ಕಿನಿಂದ ಒಂದು ನಾಯಿಯ ದೀನ ರೋದನ ಕೇಳಿಸಿತು. ಸರ-ಪಣಿಯಲ್ಲಿ ಬಂಧಿಸಿದ ನಾಯಿ ಇರಬೇಕು.

ಬೆಳಿಗ್ಗೆ ಅವರು ನೋಡುವಾಗ ವೇಲಾಯು-ಧನೆಂಬ ನಾಯಿ ಸರಪಣಿಯಲ್ಲಿರುವುದಿಲ್ಲ. ಅದನ್ನು ನೆನೆಸಿದಾಗ ಅವನಿಗೆ ಗಹಗಹಿಸಿ ನಗಬೇಕೆನಿಸಿತು. ಆದರೆ ಅವರು ಹುಡುಕಿ ಹಿಡಿದುಕೊಂಡು ಹೋಗಲು ಬರುತ್ತಾರೆ. ಆ ಮೊದಲೆ ಪಾರಾಗಿ ಹೋಗಬೇಕು. ಎಲ್ಲಿಗೆ ಹೋಗುವುದು? ಯಾರೂ ನಂಬುವುದಿಲ್ಲ...ಯಾರೂ ಹೇಳಿದ್ದನ್ನು ಕೇಳುವುದಿಲ್ಲ. ಅವನು ತನ್ನಷ್ಟಕ್ಕೆಯೆ ಹೇಳಿದ, ನನಗೆ ಹುಚ್ಚಿಲ್ಲ, ನನಗೆ ಕಾಯಿಲೆ ಇಲ್ಲ.

"ವೇಲಾಯುಧಣ್ಣನ ಕಾಯಿಲೆ ವಾಸಿಯಾದೀತು" ಎಂದದ್ದು ಅವಳು, ಅಮ್ಮುಕುಟ್ಟಿ.

—ನನ್ನ ಪ್ರೀತಿಯ ಅಮ್ಮುಕುಟ್ಟಿ, ನನಗೆ ಈಗ ಏನೂ ಇಲ್ಲ. ಅವಳಿಗೆ ನಂಬಿಕೆಯಾದೀತು. ಅವಳೊಬ್ಬಳಿಗೆ ಮಾತ್ರ ವಿಶ್ವಾಸವಾದೀತು.

ರಸ್ತೆಯ ಮಣ್ಣು ಒದ್ದೆಯಾಗಿದೆ. ಇಬ್ಬನಿಯಿಂದಾಗಿರಬೇಕು. ಆ ದಾರಿಯಲ್ಲಿ ನಡೆದದ್ದು ಬಹಳ ಹಿಂದೆಯಾಗಿತ್ತು. ಮುಚ್ಚಿದ ಅಂಗಡಿಗಳ ಒಂದು ಸಾಲು. ಕಡವಿನ ಸಮೀಪ ಮಸೀದಿಯನ್ನು ದಾಟಿ ಅವನು ಮುಂದಕ್ಕೆ ನಡೆದ. ಮಸೀದಿಯ ಸ್ಮಶಾನದ ಪಿಶಾಚಿಗಳು ವಾಸಿಸುತ್ತಿವೆ ಎಂದು ಹೇಳಲಾಗುತ್ತಿದ್ದ ಆಲದ ಮರವನ್ನು ದಾಟಿದಾಗ ಹೆದರಿಕೆಯಾಗಲಿಲ್ಲ.

ಪೂರ್ವ ದಿಕ್ಕಿನಲ್ಲಿ ಕೆಂಪು ಮೂಡಿ ಬಂದಿದೆ.

ಈಗ ನಿಂತಿರುವುದೆಲ್ಲಿ? ನೆನಪು ಸ್ಫುಟವಾಗಲಾರಂಭಿಸಿತು. ಅಲ್ಲೊಂದು ಮಾಪಿಳ್ಳೆಯವರ ಶಾಲೆ ಇದೆ. ಎದುರಿನ ಬಯಲಿನ ಅಂಚಿಗೆ ಒಂದು ಕೆರೆಯೂ ಗುಡಿಯೂ ಇದೆ. ಅಲ್ಲಿ ತಾಯಿಯ ಜೊತೆಗೆ ಪ್ರತಿ ತಿಂಗಳೂ ಪೂಜೆಗೆ ಬರುವುದಿತ್ತು. ಶಾಲೆಯ ಎದುರಿನ ದೊಡ್ಡ ಹೊಲದಲ್ಲಿ ಒಮ್ಮೆ ಬಯಲು ನಾಟಕವಾಗಿತ್ತು.

ಅಲ್ಲೆಲ್ಲಾ ನೀಲಿ ಬಣ್ಣದ ಮಂಜಿನ ಮುಸುಕು ಹರಡಿಕೊಂಡಿದೆ. ವೇಲಾಯುಧನ್ ಹೊಲಕ್ಕಿಳಿದ. ಸಂಕೋಲೆ ಸದ್ದು ಮಾಡುತ್ತಿದ್ದ ಕಾಲನ್ನು ಎತ್ತಿ ಇಡುತ್ತಾ ನಡೆಯುತ್ತಿರುವಾಗ ಎದುರಿನಿಂದ ನೊಗವನ್ನು ಹೆಗಲ ಮೇಲಿಟ್ಟು ಒಂದು ಕಪ್ಪು ರೂಪ ಬರುತ್ತಿರುವುದು ಕಾಣಿಸಿತು.

ಹತ್ತಿರವಾದಾಗ ಆ ರೂಪ ನಿಂತಿತು.

"ಯಾರದು?"

ವೇಲಾಯುಧನ್ ಉತ್ತರ ಹೇಳಲಿಲ್ಲ. ಒಂದು ನಿಮಿಷ ಸಂಶಯಿಸಿ ನಿಂತ. ಒಂದು ಹೆಜ್ಜೆ ಮುಂದಿಟ್ಟಾಗ ಆ ವ್ಯಕ್ತಿ ನೊಗವನ್ನು ಎಸೆದು ಏರಿಯಿಂದ ಕೆಳಕ್ಕೆ ಹಾರಿ ಓಡಲಾರಂಭಿಸಿದ.

ವೇಲಾಯುಧನ್ ಅತನನ್ನು ಗಮನಿಸದೆ ಮುಂದೆ ನಡೆದ.... ಎಳೆ ಬಿಸಿಲು ತಟ್ಟಿದಾಗ ವೇಲಾಯುಧನಿಗೆ ಸುಖವೆನಿಸಿತು. ಸುತ್ತಲೂ ಬಯಲಾಗಿತ್ತು. ಅವನು ನಡೆಯುತ್ತಿದ್ದ. ತಲೆಯಲ್ಲಿ ಮಣ್ಣಿನ ಪಾತ್ರೆಗಳನ್ನು ಹೊತ್ತು ಬರುತ್ತಿದ್ದ ಹೊಲತಿಯರು ಅವನನ್ನು ನೋಡಿದಾಗ ಓಡಲಾರಂಭಿಸಿದರು.

"ಹುಚ್ಚಾ.....ಹುಚ್ಚಾ."

ಹಿಂದಿನಿಂದ ಕೂಗೂ ಗದ್ದಲವೂ ಕೇಳಿಸಿತು.

ವೇಲಾಯುಧನ್ ಬೇಗ ಬೇಗನೆ ಹೆಜ್ಜೆ ಹಾಕಿದ. ಜನರು ಹಿಂಬಾಲಿಸಿ ಬರುವ ಹಾಗೆ ಇತ್ತು. ಅವನ ಕಾಲುಗಳಿಗೆ ಗಾಯವಾಗಿದೆ. ಗದ್ದೆ ಬಿಟ್ಟು ವೇಲಾಯುಧನ್ ಪಕ್ಕದ ಕಿರುಹಾದಿಗೆ ಇಳಿದ. ಬೆನ್ನ ಹಿಂದೆ ಗದ್ದಲ ಹೆಚ್ಚುತ್ತಿತ್ತು. ಆದರೆ ಎದುರಿನಿಂದ ಬರುತ್ತಿದ್ದವರಾರೂ ಅವನನ್ನು ತಡೆದು ನಿಲ್ಲಿಸಲಿಲ್ಲ. ನೋಡಿನೋಡಿದವರೆಲ್ಲಾ ಹಾದಿ ಬಿಟ್ಟು ಓಡುತ್ತಿದ್ದರು. ಅವನಿಗೆ ಭಯಕ್ಕಿಂತ ಹೆಚ್ಚಾಗಿ ವ್ಯಸನವುಂಟಾಯಿತು.

—ನನಗೆ ಹುಚ್ಚಿಲ್ಲ.... ನನಗೆ ಹುಚ್ಚಿಲ್ಲ.

ಹಿಂದಿನಿಂದ ಜನರು ಕೂಗಿ ಹೇಳಿದರು: "ಹುಚ್ಚ.....ಹುಚ್ಚ....." ಕಿರುಹಾದಿಯು ತಿರುವಿಗೆ ಬಂದಾಗ ಎತ್ತರಕ್ಕೆ ನಿಂತಿದ್ದ ದೊಡ್ಡ ಕಲ್ಲನ್ನು ಹಿಡಿದು ಅವನು ವಿಶ್ರಮಿಸಿದ. ಬಹಳ ದಣಿವು! ಮತ್ತೆ ನಡೆಯಲು ಧಾವಿಸಿದಾಗ ಹಿಂದಿನಿಂದ ಯಾರೋ ಗರ್ಜಿಸಿದರು. "ನಿಲ್ಲೊ ಅಲ್ಲಿ....." ನೋಡಿದಾಗ ಕೊಂಬೆ ಮೀಸೆ. ಮುಂಡಾಸು ಸುತ್ತಿದ ಒಬ್ಬ ಧಾಂಡಿಗ.

"ನಿಲ್ಲೊ ಅಲ್ಲಿ. ನಿನಗಿಂತಲೂ ದೊಡ್ಡವರನ್ನು ನಾನು ಹಿಡಿದು ಕಟ್ಟಿದ್ದೇನೆ."

ವೇಲಾಯುಧನ್ ನೀಳುಸಿರು ಬಿಡುತ್ತಾ ಹೇಳಿದ:

"ನನಗೆ ಹುಚ್ಚಿಲ್ಲ....ಹುಚ್ಚಿಲ್ಲ...."

"ನಿನ್ನ ಹುಚ್ಚು ನಾನು ಬಿಡಿಸೇನು!"

ಅತ ಬೆನ್ನ ಹಿಂದೆ ಅಡಗಿಸಿಟ್ಟಿದ್ದ ಬಿದಿರಿನ ಕೋಲನ್ನು ಬೀಸುತ್ತಾ ಸಮೀಪ ಬರಲಾರಂಭಿಸಿದಾಗ ವೇಲಾಯುಧನ ಮನಸ್ಸಿನಲ್ಲಿ ಬೆಂಕಿ ಹತ್ತಿತು. ನೆಲದಿಂದ ದೊಡ್ಡದೊಂದು ಉರುಟು ಕಲ್ಲನ್ನು ಎತ್ತಿಕೊಂಡು ವೇಲಾಯುಧನ್ ನಿಂತ. ಅತ ಹಿಂದೆ ಸರಿದ.

ಕಿರುಹಾದಿ ಗುಡ್ಡದ ತಪ್ಪಲನ್ನು ಸೇರಿತು. ಇನ್ನು ಮೇಲೆ ಹತ್ತಬೇಕು. ಅವನು ಅವಸರದಿಂದ ಹೆಜ್ಜೆಗಳನ್ನಿಟ್ಟ. ಗುಡ್ಡದ ನೆತ್ತಿಗೆ ಬಂದಾಗ ಗುಡಿ ಕಾಣಿಸಿತು. ಅಲ್ಲಿಗೆ ಅವನು "ತಾಲಪ್ಪೊಲಿಗೆ*" ಬರುವುದಿತ್ತು. ಆ ಸ್ಥಳ ಅವನಿಗೆ ಹೆಚ್ಚು ಪರಿಚಯ. ಕೆಳಗೆ ಇಳಿದರೆ ಗೇರು ಮರದ ತೋಟವಿದೆ. ಮತ್ತು ಕಿರುದಾರಿ....

ಅಲ್ಲಿ ಗುಲಗಂಜಿ ಹರಡಿಕೊಂಡಿವೆ.

ನನ್ನ ಪ್ರೀತಿಯ ಅಮ್ಮುಕುಟ್ಟಿ, ನನಗೆ ಹುಚ್ಚಿಲ್ಲ.

ಗುಡ್ಡ ನಿರ್ಜನವಾಗಿತ್ತು. ಒಂದು ಹೋರಿ ಮಾತ್ರ ಹುಲ್ಲು ಮೇಯುತ್ತಿದೆ. ಗುಡಿಯ ಸಮೀಪದ ದೊಡ್ಡ ಮರದ ಕೆಳಗೆ ಬಂದಾಗ ಕಾಲುಗಳು ಮುರಿದು ಬೀಳುವ ಹಾಗಾಯಿತು. ಅವನು ಮರದ ಕಟ್ಟೆಗೆ ಒರಗಿ ಕುಳಿತ. ತಂಪು ಗಾಳಿ ಮೈಯನ್ನು ಮುಟ್ಟಿದಾಗ ಕಣ್ಣು ಮುಚ್ಚಬೇಕೆನಿಸಿತು. ಬೆನ್ನು ಬಹಳ ನೋಯುತ್ತಿತ್ತು. ನೆನೆದ ಹುಲ್ಲಿನಲ್ಲಿ ಮುಖವಿಟ್ಟು ಮಲಗಿದ.

ಏನೋ ಮಂಕು. ತಟ್ಟನೆ ಎದ್ದು ಕುಳಿತಿದ್ದ. ಬೆನ್ನ ಮೇಲೆ ಏನೊ ಬಿದ್ದ ಹಾಗೆ. ನೋಡಿದಾಗ ಕೋಲುಗಳನ್ನು ಹಿಡಿದಿದ್ದ ದನ ಕಾಯುವ ಹುಡುಗರು. ಒಂದು ಕಲ್ಲು ಸಮೀಪ ಬಂದು ಬಿದ್ದಿತು. ಇನ್ನೊಂದು ತಲೆಯ ಮೇಲಿನಿಂದ ಹಾರಿ ಹೋಯಿತು.

ವೇಲಾಯುಧನ್ ಗಾಬರಿಯಿಂದ ಎದ್ದು ನಿಂತ. ಸಂಕೋಲೆ ಸದ್ದು ಮಾಡಿತು.

ಅವನು ನಡೆದಂತೆ ಗುಂಪು ಹಿಂದಿನಿಂದ ಬರುತ್ತಿತ್ತು. ಕಲ್ಲುಗಳೂ ಇನ್ನೂ ತೂರಿ ಬರುತ್ತಿದ್ದವು.

ಕಲ್ಲು ನೆಲದ ಮೇಲೆ ತರಚಿ ಎಳೆಯುತ್ತಾ ಅವನು ಓಡಲಾರಂಭಿಸಿದ. ಕಿರುದಾರಿಗೆ ಬಂದಾಗ ತಿರುಗಿ ನೋಡಿದ. ಹಣೆ ಮುಟ್ಟಿ ನೋಡಿದಾಗ ಕೈಯಲ್ಲಿ ರಕ್ತವಿತ್ತು.

---

ತಾಲಪ್ಪೊಲಿ – ಕೇರಳದಲ್ಲಿ ಆಗುತ್ತಿರುವ ದೈವದ ಕೋಲ


Phosfomin
VITAMINS ELIXIR

"ಹಿಡಿಯೊ ಹಿಡಿ..."

"ಇದೊ ಬರುತ್ತಿದ್ದಾನೆ...ಸರಿದು ನಿಲ್ಲಿ..."

ಅವನನ್ನು ನೋಡಿದವರೆಲ್ಲಾ ಅಚೀಚೆ ಓಡಿ ಮರೆಯಾಗುತ್ತಿದ್ದರು. ಹಾದಿಯ ಪಕ್ಕದಿಂದ ಹುಡುಗನೊಬ್ಬ ಗಟ್ಟಿಯಾಗಿ ಬೊಬ್ಬಿಟ್ಟ. "ಹುಚ್ಚಾ....ಹುಚ್ಚಾ....ದೂರ ನಿಲ್ಲಿ...." ಹಿಂದಿನಿಂದ ಮತ್ತೆ ಮತ್ತೆ ಶಬ್ದಗಳು, ವೇಲಾಯುಧನ್ ಬಯಲಿನ ಪಕ್ಕದಿಂದಲೆ ನಡೆದ. ಸುತ್ತು ಒಂದು ತೋಡು ಮಣ್ಣಿನಲ್ಲಿ ಮುದ್ದಾದ ಕೆಂಪು ಮಣಿಗಳು ಹರಡಿಕೊಂಡಿರುವುದನ್ನು ಅವನು ನೋಡಿದ.

ಅಲ್ಲಿ ಕುಳಿತು ಆಟವಾಡಿದ್ದ ನೆನಪಿದೆ. ಇಗೊ ಕೆಂಪು ಕಲ್ಲಿನ ಗೋಡೆ, ಹನುಮದೇವರ ಮರದ ಪ್ರತಿಮೆ. ಎದೆ ಬಡಿಯಿತು. ಅಲ್ಲಿಯೆ... ಅಲ್ಲಿಯೆ ಅಮ್ಮುಕುಟ್ಟಿ ಇರುವುದು. ಅವಳನ್ನೊಮ್ಮೆ ನೋಡಿದರೆ ಸಾಕು....ಅಮ್ಮುಕುಟ್ಟಿ, ನನ್ನ ಕಾಯಿಲೆ ವಾಸಿಯಾಗಿದೆ. ನನಗೆ ಏನೂ ಇಲ್ಲ....ನನಗೀಗ ಏನೂ ಇಲ್ಲ.

ಅವನು ಮೆಟ್ಟಲು ಹತ್ತಿದ.

ಅಂಗಳದ ಕಟ್ಟೆಯ ಬಳಿ ಗಂಡುಮಗು ಆಟವಾಡುತ್ತಿದೆ.

ಸೆಗಣಿ ಬಳಿದ ವಿಶಾಲವಾದ ಅಂಗಳದಲ್ಲಿ ಎಳೆಬಿಸಿಲು ಹರಡಿಕೊಂಡಿದೆ. ಆ ದೊಡ್ಡ ಮನೆಯ ಎದುರು ನಿಂತುಕೊಂಡು ವೇಲಾಯುಧನ್ ಸುತ್ತಲೂ ಕಣ್ಣೋಡಿಸಿದ.

ಮಗು ಆಟ ಬಿಟ್ಟು ಒಳಗೆ ಓಡಿ ಮರೆಯಾಯಿತು.

ಅಮ್ಮುಕುಟ್ಟಿಯಲ್ಲವೆ?..........ಅಮ್ಮುಕುಟ್ಟಿ........

ಅವನು ಮೆಲ್ಲನೆ ಅಂಗಳದ ಬದಿಯಿಂದ ನಾಲ್ಕು ಹೆಜ್ಜೆ ನಡೆದ.

ಹೊಸ್ತಿಲಿನಲ್ಲಿ ಒದ್ದೆ ಬಟ್ಟೆಗಳನ್ನು ಹರವುತ್ತಿದ್ದ ಹೆಂಗಸು

ಸಂಕೋಲೆ ಸದ್ದು ಮಾಡಿತು. ಆಕೆ ತಿರುಗಿ ನೋಡಿದಳು. ಒಂದು ನಿಮಿಷ—ವೇಲಾಯುಧನ್ ಪ್ರತಿಮೆಯಂತಾಗಿದ್ದ.

"ಅ....ಅಮ್ಮುಕುಟ್ಟಿ."

ಅವಳು ಕೈಯಲ್ಲಿದ್ದ ಒದ್ದೆ ಬಟ್ಟೆಗಳನ್ನು ನೆಲಕ್ಕೆ ಹಾಕಿ ಜಗಲಿ ಹತ್ತಿ ಗಟ್ಟಿಯಾಗಿ ಬೊಬ್ಬಿಟ್ಟಳು: "ಹುಚ್ಚಾ....ಹುಚ್ಚಾ...."

ನಾನಲ್ಲವೆ ಅಮ್ಮುಕುಟ್ಟಿ ನನಗೆ ಹುಚ್ಚಿಲ್ಲ. ಎಂದೆಲ್ಲಾ ಹೇಳಬೇಕೆನ್ನಿಸಿತ್ತು. ನಾಲಿಗೆ ಚಲಿಸಲಿಲ್ಲ. ಇನ್ನೊಮ್ಮೆ ಅತ ಕರೆದ.

"ಅಮ್ಮು ಕುಟ್ಟಿ...."

ಅವಳು ಒಳಕ್ಕೆ ಓಡಿದಳು.

ಒಳಗಿನಿಂದ ಕೋಲಾಹಲ.

"ಹುಚ್ಚಾ....ಹುಚ್ಚಾ...."

"ದೊಣ್ಣೆ ಇಲ್ಲಿ ಕೊಡು.... ನೀನು ಒಳಗೆ ಹೋಗು."

"ಹುಚ್ಚಾ....ಹುಚ್ಚಾ..."

ವೇಲಾಯುಧನ್ ಮತ್ತೆ ಅಲ್ಲಿ ನಿಲ್ಲಲಿಲ್ಲ. ನಾಲಗೆ ತುಟಿಯನ್ನು ಸವರಿದಾಗ ಉಪ್ಪು. ಹಣೆಯಿಂದ ಹರಿದುಬಂದ ನೆತ್ತರು.

ಕಾಲಿನ ಸರಪಣಿಯನ್ನು ಎಳೆದುಕೊಂಡೇ ವೇಲಾಯುಧನ್ ಮೆಟ್ಟಲು ಇಳಿದ.

ಶರೀರ ದಣಿದು ಬೀಳುವಂತಾಗಿದ್ದ. ಆದರೂ ಅವನೊಂದು ಸುಳಿಗಾಳಿಯ ವೇಗದಲ್ಲಿ ಓಡಿದ. ಹಿಂದಿನಿಂದ ಡಬ್ಬಿಗಳು ಶಬ್ದಿಸುತ್ತಿವೆ. ಕೂಗಾಟವೂ ಗದ್ದಲವೂ ಮತ್ತೂ ಮತ್ತೂ ಅವನನ್ನು ಹಿಂಬಾಲಿಸಿತು........

....—ಹೆಬ್ಬಾಗಿಲನ್ನು ದಾಟಿ ಅಂಗಳಕ್ಕೆ ಬಂದಾಗ ಮಾವ ಇನ್ನಿಬ್ಬರೊಂದಿಗೆ ಮಾತನಾಡುತ್ತಾ ಕುಳಿತಿರುವುದು ಕಾಣಿಸಿತು. ಸಂಕೋಲೆಯ ಸದ್ದು ಕೇಳಿಸಿದಾಗ ಅವರು ಬೆಚ್ಚಿಬಿದ್ದು ಎದ್ದು ನಿಂತರು. ಗೋಡೆಯನ್ನು ಹಿಡಿದು ವೇಲಾಯುಧನ್ ಒಂದು ನಿಮಿಷ ನಿಂತ. ಮಾವ ಮಾಡಿನಿಂದ ನಾಗರ ಬೆತ್ತ ಎಳೆದು ತೆಗೆದು ಅಂಗಳಕ್ಕಿಳಿಯುವುದನ್ನು ಅವನು ನೋಡಿದ. ದಣಿದು ಕೆಂಡದ ಕಣ್ಣುಗಳು ಸ್ವಂತ ಶರೀರದಲ್ಲಿ ಸಂಚರಿಸಿದಾಗ ಅವನಿಗರಿವಾಯಿತು, ಸೊಂಟದಲ್ಲಿ ಬಟ್ಟೆ ಇರಲಿಲ್ಲ.

ಏದುಸಿರು ಬಿಡುತ್ತಾ ತಲೆಬಾಗಿಲಿಗೆ ಬಂದು ಬಿದ್ದವ ಮಾವ ಮತ್ತು ಸಂಗಡಿಗರು ಸುತ್ತು ಬಂದು ನಿಂತಾಗ ಅವನು ಉಸಿರು ಬಿಗಿದು ಹೇಳಿದ: "ನನಗೆ ಹುಚ್ಚು....ನನ್ನನ್ನು ಸಂಕೋಲೆಗೆ ಹಾಕಿರಿ...."

*

*Statement about ownership and other particulars about newspaper* **Kasturi,** *a Kannada Monthly Digest to be published in the first issue every year after the last day of February.*

**FORM IV**

*( See Rule 8 )*

1. Place of Publication .. HUBLI
2. Periodicity of its publication: Monthly. ( 1st of every month )
3. Printer's Name .. V. Y. Jathar, B. SC.
   Nationality .. Indian
   Address .. Post Box No. 30, Hubli.
4. Publisher's Name .. V. Y. Jathar, B. SC.
   Nationality .. Indian
   Address: .. Post Box No. 30, Hubli
5. Editors' Name .. R. R. Diwakar, M. A., LL. B.
   Nationality .. Indian
   Address: .. Post Box No. 30, Hubli
6. Names and addresses of individuals who own the newspaper and partners or share-holders holding more than one per cent of the total capital. .. Loka Shikshana Trust, Hubli
   Sole Trustee—
   R. R. Diwakar, M. A., LL. B.

I, V. Y. Jathar, hereby declare that teh particulars given above are true to the best of my knowledge and belief.

V. Y. Jathar
Signature of Publisher

Dated 1–3–1967

# ಬ್ಯಾಂಕು ಅಂದರೆ ಏನು ಅಪ್ಪಾ?

ನಾವು ಹಣ ಇಟ್ಟು, ಬೇಕಾದಾಗ ಹಿಂತೆಗೆಯುತ್ತೇವಲ್ಲಾ, ಅದು ಬ್ಯಾಂಕು ಮಗೂ.

**ಹಣವನ್ನು ಮನೆಯಲ್ಲೇ ಇಟ್ಟುಕೊಳ್ಳಬಾರದೇನಪ್ಪಾ?**

ಮನೆಯಲ್ಲಿ ಇಟ್ಟುಕೊಳ್ಳುವುದು ಅಷ್ಟೊಂದು ಸುರಕ್ಷಿತವಲ್ಲ. ಅದು ಕಳವಾಗಿ ಹೋಗಬಹುದು. ಇಲ್ಲವೆ ಇಲಿ, ಹೆಗ್ಗಣ ಅಥವಾ ಗೆದ್ದಲು ತಿಂದು ಹಾಳಾಗಬಹುದು. ಕೈಯಲ್ಲಿ ಹಣವಿದ್ದರೆ ಬೇಡವಾದುದಕ್ಕೆಲ್ಲ ಖರ್ಚು ಮಾಡಬೇಕು ಅನ್ನಿಸುತ್ತಿದೆ. ಬ್ಯಾಂಕಿನಲ್ಲಿಟ್ಟ ಹಣ ಸುರಕ್ಷಿತವಾಗಿರುತ್ತದೆ. ಅದರಿಂದ ನಮಗೆ ಬಡ್ಡಿಯೂ ದೊರೆಯುತ್ತದೆ; ನಮ್ಮ ಹಣ ವೃದ್ಧಿಯಾಗುತ್ತದೆ.

**ಅಪ್ಪಾ, ನಿಮ್ಮ ಬ್ಯಾಂಕು ಯಾವುದು?**

**ಪಂಜಾಬ್ ನ್ಯಾಷನಲ್ ಬ್ಯಾಂಕು,** ಮಗೂ.

ಅದು ಭಾರತದ ಅತಿ ದೊಡ್ಡ ಮತ್ತು ಅತಿ ಹಳೆಯ ಬ್ಯಾಂಕುಗಳಲ್ಲಿ ಒಂದು. 480 ಕ್ಕೂ ಹೆಚ್ಚು ಶಾಖೆಗಳಿರುವ ಬ್ಯಾಂಕು ಅದು.

# ಪಂಜಾಬ್ ನ್ಯಾಷನಲ್ ಬ್ಯಾಂಕ್

PR/PNB/6622 Kan/2



127-19 A

ಮಹಾ ಶರೀರವಿಜ್ಞಾನಿಯೊಬ್ಬನ ವಿಚಾರಗಳು

# ಕೃತಜ್ಞತೆಯ ಹಂಬಲ

ಹ್ಯಾನ್ಸ್ ಸ್ಯೆಲ್

ಕೃತಜ್ಞತೆಯನ್ನು ಸಂಪಾದಿಸುವುದೇ ಒಂದು ಜೀವನಧ್ಯೇಯವಾಗಬಲ್ಲದೆ? ಅದಕ್ಕಾಗಿಯೇ ಯಾರಾದರೂ ಪ್ರಜ್ಞಾಪೂರ್ವಕ ಶ್ರಮಿಸಬಹುದೆ? ಈ ಪ್ರಶ್ನೆ ಮೊದಲು ಮನಸ್ಸಿನಲ್ಲಿ ಮೂಡಿದಾಗ ಅದು ಅಸಂಭಾವ್ಯವೆಂದೇ ನಾನು ಅಂದುಕೊಂಡಿದ್ದೆ.

ಯಾವುದೇ ಫಲಾಪೇಕ್ಷೆಯಿಂದ ಕೆಲಸ ಮಾಡುವುದು ಜೀವನದ ಚರಮಧ್ಯೇಯವಾಗಲಾರದೆಂದನಿಸಬಹುದು; ಫಲಾಪೇಕ್ಷೆಗೆ ಧ್ಯೇಯವೆನಿಸುವ ಅರ್ಹತೆಯೇ ಇಲ್ಲ ಎಂದು ತೋರೀತು. ಇತರರು ತಮಗೆ ಋಣಿಗಳಾಗಿರಬೇಕೆಂಬ ಹಂಬಲದಿಂದ ತಾವು ಒಳ್ಳೇ ಕೆಲಸ ಮಾಡುತ್ತಿದ್ದೇವೆಂದು ಒಪ್ಪುವವರು ವಿರಳ.

ನೀನೇಕೆ ಚಿತ್ರ ಬರೆಯುತ್ತೀ ಎಂದು ಕಲಾಕಾರನನ್ನು ಕೇಳಿರಿ, ನೀನೇಕೆ ಬರೆಯುತ್ತೀಯೆಂದು ಸಾಹಿತಿಯನ್ನು ಕೇಳಿರಿ, ನೀನೇಕೆ ಯುದ್ಧದಲ್ಲಿ ಯಮನ ದವಡೆಯನ್ನು ಹೊಕ್ಕು ಹೋರಡುತ್ತೀ ಎಂದು ವೀರನನ್ನು ಕೇಳಿರಿ; ಅವರು ನಿಮಗೆ ಏನೇನೋ ಉತ್ತರ ಕೊಡಬಹುದು. ಆದರೆ ಪರರ ಕೃತಜ್ಞತೆಯನ್ನು ಗಳಿಸಲು ಅವರು ಹೀಗೆ ಮಾಡುತ್ತಾರೆಂದು ಯಾರಾದರೂ ಸೂಚಿಸಿದರೆ ಮಾತ್ರ ಅವರು ಧಿಕ್ಕರಿಸುವರು.

ಖಾಸಗಿ ಜೀವನದ ಸುಖವನ್ನೆಲ್ಲ ತ್ಯಜಿಸಿ ಪ್ರಯೋಗಶಾಲೆಯಲ್ಲಿ ಯಾವುದೋ ರಹಸ್ಯವನ್ನು ಒಡೆಯಲು ಯತ್ನಿಸುತ್ತಿರುವ ವಿಜ್ಞಾನಿ, ಇದನ್ನೆಲ್ಲ ತನ್ನ "ಸ್ವಂತ ಮಜಾ"ಕ್ಕಾಗಿ ಮಾಡುತ್ತೇನೆ ಎಂದು ಒಪ್ಪಬಹುದು, ಅಥವಾ "ಸೇವಾಭಾವ"ದಿಂದ ಮಾಡುತ್ತಿರುವುದಾಗಿಯೂ ಹೇಳಬಹುದು. ಆದರೆ ಅವನು ನಿಜವಾಗಿ ತನ್ನ ಸಹಜೀವಿ ಮಾನವರ ಕೃತಜ್ಞತೆಯನ್ನು ಪಡೆಯಲು ಕಷ್ಟಪಡುತ್ತಿದ್ದಾನೆಂದು ನೀವೇನಾದರೂ ಅವನಿಗೆ ಖಚಿತಪಡಿಸಿಕೊಟ್ಟರೆ ಅವನು ಆಶ್ಚರ್ಯಪಟ್ಟಾನು, ನಾಚಿಕೊಳ್ಳಬಹುದು ಕೂಡ.

ಬಹುಜನ ವಿಜ್ಞಾನಿಗಳು ಕೃತಜ್ಞತಾಪೇಕ್ಷೆ ಸ್ವಾರ್ಥವೆಂದು ಭಾವಿಸಬಹುದು; ಹುಂಬತನವೆಂದೂ ಎಣಿಸಬಹುದು. ಆದರೆ, "ಮಜಾಕ್ಕಾಗಿ" ದುಡಿಯುವುದು ಹೆಚ್ಚಿನ ಸ್ವಾರ್ಥ ಅಥವಾ ಹೆಡ್ಡತನವೋ ಪರರ ಕೃತಜ್ಞತೆಗಾಗಿ ಶ್ರಮಿಸುವುದೋ?

ಬಾಳಿಗೊಂದು ಅರ್ಥ, ಒಂದು ದಿಕ್ಕು ಇರಬೇಕಾದರೆ ನಮಗೆ ಒಂದಲ್ಲ ಒಂದು ಅಂತಿಮ ಗುರಿ ಬೇಕೇಬೇಕಾಗುತ್ತದೆ. ದೇವರ ಪ್ರೀತಿಗಾಗಿ, ಇಲ್ಲವೇ ದೇಶ ಅಥವಾ ಬಂಧು-ಬಳಗದ ಹಿತಾರ್ಥವಾಗಿ, ಇಲ್ಲವೆ ಯಾವುದಾದರೊಂದು ಶಾಶ್ವತ ಮತ್ತು ಸುಯೋಗ್ಯ ಸಂಸ್ಥೆಯ ಉತ್ಕರ್ಷಕ್ಕಾಗಿ ದುಡಿಯುವೆನೆಂದು ಮಾನವ ಹೇಳುತ್ತಾನೆ. ಇದು ಗುರಿಗಾಗಿ, ಚಿರಂತನ ಧ್ಯೇಯಕ್ಕಾಗಿ ಕಾತರಿಸುವ ಮಾನವನಿಗೆ ಅನಾದಿಯಿಂದ ಒಂದು ದಿಕ್ಕಾಗಿ ಪರಿಣಮಿಸಿದೆ.

ಮಾನವ ಗುಣಗಳಲ್ಲೆಲ್ಲ ತೀಕ್ಷ್ಣವಾಗಿ, ನ್ಯಾಯವಾಗಿ ಆಕ್ಷೇಪಕ್ಕೆ ಗುರಿಯಾಗಿರುವುದು ಅಹಂಭಾವ. ಅಹಂ ಸ್ವಾರ್ಥಮೂಲ. ಆದರೆ ಸ್ವಾರ್ಥವು ಸಕಲ ಜೀವರಾಶಿಗಳಲ್ಲೂ ಅತ್ಯಂತ ಮೂಲಭೂತ ಸ್ವಭಾವವಾಗಿದೆಯೆಂಬುದೂ ನಿಜ. ನಾವು ಅಹಂಕಾರಿಗಳಾಗಿರುವುದು ಅನಿವಾರ್ಯವಾಗಿದೆ.

ಇತರರಲ್ಲಿ ಕೃತಜ್ಞತೆಯನ್ನು ಹುಟ್ಟಿಸುವುದು ಮಾನವನ ಚರಮಧ್ಯೇಯಕ್ಕೆ ಅತ್ಯಂತ ಸ್ವಾಭಾವಿಕವಾದ ನೆಲಗಟ್ಟೆಂದು ಹೇಳಬಹುದು.

ಕೃತಜ್ಞತೆಯನ್ನು ಜೀವಮಾನವೆಲ್ಲ ಸಂಗ್ರಹಿಸಲು ಸಾಧ್ಯವಿದೆ. ಕೂಡಹಾಕಲು ಸಾಧ್ಯವಿದೆ, ಬೆಳಸಿ ಅಕ್ಷಯ ನಿಧಿಯಾಗಿ ಮಾಡಿಕೊಳ್ಳಲು ಸಾಧ್ಯವಿದೆ. ಈ ಸಂಪತ್ತು ಮತ್ತಾವುದಕ್ಕಿಂತಲೂ ಹೆಚ್ಚು ಶಾಶ್ವತವಾದದ್ದು, ವಿಶ್ವಸನೀಯವಾದದ್ದು ನಮ್ಮ ಮನಸ್ಸಿಗೆ ಅದು ಸುರಕ್ಷಿತಭಾವವನ್ನೂ ಶಾಂತಿಯನ್ನೂ ನೀಡುತ್ತದೆ. ಅದೊಂದು ಅಹಂಪ್ರಯುಕ್ತಗುರಿಯೇ ನಿಜ; ಆದರೆ ಅದೇ ಕಾರಣದಿಂದ ಅದು ಅತ್ಯಂತ ಸ್ವಾಭಾವಿಕವಾಗಿದೆ. ನಿಮಗಿರುವ ಅಲ್ಪ ಸ್ವಲ್ಪ ಯೋಗ್ಯತೆಯಿಂದಲೂ ಅದನ್ನು ನೀವು ಸಾಧಿಸಬಹುದು. ಆದ್ದರಿಂದಲೇ ಅದು ಯಾರಿಗೆ ಬೇಕಾದರೂ ಆತ್ಮಾಭಿವ್ಯಕ್ತಿಗೆ ಸಾಧನವಾಗಬಲ್ಲದು.



ಎಲ್ಲಕ್ಕೂ ಹೆಚ್ಚಿನದೆಂದರೆ, ಈ ಒಂದು ಅಹಂನಿಷ್ಠೆಗಾಗಿ ನಿಮ್ಮನ್ನು ಯಾರಾದರೂ ಶಪಿಸುವರೆಂಬ ಭಯವಿಲ್ಲ.

ನಾವು ಅನ್ನಪಾನಗಳ ಸುಖವನ್ನು ಅನುಭವಿಸುವಾಗ, ನಿರ್ಮಲ ಪ್ರಶಾಂತ ದಿನದ ಸೌಂದರ್ಯಾನುಭೂತಿ ಹೊಂದುವಾಗ, ಕಾಮೋಪಭೋಗದ ಶುದ್ಧ ಇಂದ್ರಿಯಾನಂದವನ್ನು ಸವಿಯುವಾಗ— ಇತರರಲ್ಲಿ ನಮಗಾಗಿ ಕೃತಜ್ಞಭಾವವನ್ನು ಪ್ರಚೋದಿಸುವ ನಿರೀಕ್ಷೆ ಇಟ್ಟುಕೊಳ್ಳಲು ಸಾಧ್ಯವಿಲ್ಲ.

ಆದರೆ ಈ ಬಗೆಯ ಇಂದ್ರಿಯ ತರ್ಪಣದಲ್ಲಿ ಮಗ್ನರಾಗಿರುವಾಗಲೂ ಅದಕ್ಕೆ ಒಂದಲ್ಲ ಒಂದು ಬಗೆಯಲ್ಲಿ ಕೃತಜ್ಞತಾಭಾವದ ಸಂಬಂಧ ಕಲ್ಪಿಸಲು ಮಾನವ ಹಂಬಲಿಸುತ್ತಾನೆ. ಭೋಜನಕ್ಕೆ ಮೊದಲು ದೇವ ಪ್ರಣವೆನ್ನುತ್ತೇವೆ, ಕಾಮೋಪಭೋಗದೊಡನೆ ಕೃತಜ್ಞತಾಪೂರ್ಣ ಪ್ರೇಮವನ್ನು ತಳಕು ಹಾಕುತ್ತೇವೆ ಕೃತಜ್ಞತೆಯತ್ತ ಮಾನವನ ಯತ್ನ ಅಷ್ಟು ಉತ್ಕಟವಾಗಿದೆ. ಆನಂದದಾಯಕವಾದ ಪ್ರತಿಯೊಂದು ಪದಾರ್ಥಕ್ಕಾಗಿ—ಅದು ಕಾವ್ಯವಿರಬಹುದು, ಆರೋಗ್ಯದಾಯಿಯಾದ ಔಷಧವಿರಬಹುದು, ಕೇವಲ ನಿರ್ಮಲವಾದ ದಿನವಿರಬಹುದು—ಅದರ ಕರ್ತೃವಿನಲ್ಲಿ ಕೃತಜ್ಞತೆಯನ್ನು ತಾಳುವ ರಹಸ್ಯ ಇಲ್ಲಿ ಅಡಕವಾಗಿದೆ.

ಒಂದು ರೀತಿಯಲ್ಲಿ ಸ್ವಾರ್ಥವು ಮಾನವನ ಮಾತ್ರವಲ್ಲ, ಜೀವಮಾತ್ರದ ಆದ್ಯ ಪಾಪವಾಗಿದೆ. ಆದ್ದರಿಂದ ಅದಿಲ್ಲದೆ ನಾವು ಬಾಳಬಲ್ಲೆವೆಂದು ನಟಿಸುವುದೇಕೆ? ಅದು ಅಸಾಧ್ಯ. ಹಾಗೆ ಮಾಡಲು ಯತ್ನಿಸಿದರೆ ಹತಾಶೆ ಮತ್ತು ಆತ್ಮನಿಂದೆಯೇ ನಮ್ಮ ಪಾಲಿಗೆ ಬರುವ ಫಲ.

ಬದಲಿಗೆ ನಾವು ಕೃತಜ್ಞತೆಯ ತತ್ವಜ್ಞಾನವನ್ನು ಅನುಸರಿಸಿದಲ್ಲಿ ನಮ್ಮ ಸ್ವಾರ್ಥಪರ ಪ್ರವೃತ್ತಿಗಳನ್ನೆಲ್ಲ ಧರ್ಮಮೂಲವಾಗಿ ಮಾಡಬಲ್ಲೆವು.

*



This Magazine owned by the Loka Shikshana Trust Hubli is printed and published by V. Y. Jathar at the Samyukta Karnatak Press, Koppikar Road, Hubli.

